ವಿಶ್ವಕೊಂಕಣಿ ಸಾಹಿತ್ಯ 23

ಪ್ರತಿಷ್ಠಿತ ವಿಮಲಾ ವಿ. ಪೈ ವಿಶ್ವ ಕೊಂಕಣಿ ಸಾಹಿತ್ಯ ಪುರಸ್ಕಾರ ಪಡೆದ ಕೊಂಕಣಿ ಕಾದಂಬರಿ

# ಆವಿಗೆ




ಮೂಲ ಕೊಂಕಣಿ: ಮಹಾಬಳೇಶ್ವರ ಸೈಲ್

ಕನ್ನಡಕ್ಕೆ : ಶಾ.ಮಂ. ಕೃಷ್ಣರಾಯ



ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ



*An inscription in Konkani at the foot of one of the largest monolithic statue in the world. The statue of Lord Gomateshwara was created around 983 A.D. by Chamundaraya, a Minister of the Ganga King, Rajamalla.*

## ಕಾದಂಬರಿಯ ಪರಿಚಯ

ಈ ಕಾದಂಬರಿ ಕುಂಬಾರರ ಬದುಕಿನ ಸುಖದುಃಖಗಳನ್ನು ಚಿತ್ರಿಸುತ್ತದೆ. ಆಧುನಿಕ ಯುಗದ ಹೊಸ ಹೊಸ ಆವಿಷ್ಕಾರಗಳಲ್ಲಿ ಭಾರತದ ಮೂಲ ಕಸುಬುಗಳು ಹೇಗೆ ಕಣ್ಮರೆಯಾಗಿ ಭಾರತೀಯ ಸಂಸ್ಕೃತಿಗೆ ಕುಠಾರಪ್ರಾಯ ವಾಗುತ್ತದೆ ಎಂಬುದನ್ನು ಲೇಖಕರು ಇಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

# ಆವಿಗೆ

(ಕಾದಂಬರಿ)

ಮೂಲ ಕೊಂಕಣಿ
**ಮಹಾಬಳೇಶ್ವರ ಸೈಲ್**
ಕನ್ನಡಕ್ಕೆ
**ಶಾ.ಮಂ. ಕೃಷ್ಣರಾಯ**

*ಪ್ರಕಾಶಕರು*
**ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ**
ವಿಶ್ವಕೊಂಕಣಿ ಕೇಂದ್ರ, ಕೊಂಕಣಿ ಗಾಂವ್, ಶಕ್ತಿನಗರ
ಮಂಗಳೂರು – 575 106

**AAVIGE -** Original Konkani Novel 'HAWTHAN' written by Mr. Mahabaleshwar Sail, Translated to Kannada by Mr. S.M. Krishna Rao, Bengaluru. Published by Konkani Bhasha Ani Samskruthi Prathisthan, Shaktinagar, (Konkani Gaon) Mangaluru.

First Edition : 2014
Copy Right : © Konkani Language and Cultural Foundation (R)
Pages : x + 138 = 148
Paper used : 70 gsm Maplitho
Size : Demy 1/8
Price : ₹ **120/-**

ಪ್ರತಿಷ್ಠಿತ ವಿಮಲಾ ವಿ. ಪೈ ವಿಶ್ವಕೊಂಕಣಿ ಸಾಹಿತ್ಯ ಪುರಸ್ಕಾರ ಪಡೆದ ಕಾದಂಬರಿ **'ಆವಿಗೆ'**
ಮೂಲ ಕೊಂಕಣಿ : ಮಹಾಬಳೇಶ್ವರ ಸೈಲ್
ಕನ್ನಡಕ್ಕೆ : ಶಾ.ಮಂ. ಕೃಷ್ಣರಾಯ
ಮೊದಲ ಮುದ್ರಣ : 2014
ಪುಸ್ತಕದ ಹಕ್ಕು : ಕೊಂಕಣಿ ಭಾಸ್ ಆನಿ ಸಂಸ್ಕೃತಿ ಪ್ರತಿಷ್ಠಾನ (ರಿ)

*Publisher*
**Konkani Language and Cultural Foundation (R)**
World Konkani Centre, Shaktinagar
Mangaluru - 575 016
Phone : 0824-2231877

ISBN : 978-93-82582-11-3

ಮುಖಪುಟ : ರಘು ಅಪಾರ

ಅಕ್ಷರ ಜೋಡಣೆ ಮತ್ತು ಮುದ್ರಣ
**ಇಳಾ ಮುದ್ರಣ**
ನಂ. 36, 40 ಅಡಿ ರಸ್ತೆ
ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇ-ಔಟ್
ಬೆಂಗಳೂರು – 560 026
ದೂರವಾಣಿ : 26757159

## ಅರ್ಪಣೆ

ನನ್ನ ಮಿತ್ರ
**ನಾರಾಯಣ ಮುಳೆಕಾರ (ಕುಂಬಾರ)**
ಅವನಿಗೆ ಪ್ರೀತಿಯಿಂದ.

– ಮಹಾಬಳೇಶ್ವರ ಸೈಲ

# ಅನುವಾದಕನ ಅರಿಕೆ

ಸ್ವಾತಂತ್ರ್ಯೋತ್ತರ ಗೋವೆಯಲ್ಲಿ ಕೊಂಕಣಿ ಭಾಷೆಯ ಸಾಹಿತ್ಯದ ಬೆಳೆ ಹುಲುಸಾಗಿದೆ. ಅದಕ್ಕೆ ಕಾರಣ ಕೊಂಕಣಿ ಭಾಷೆಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಮಾನ್ಯತೆ ದೊರಕಿದ್ದು, ಭಾರತೀಯ ಅಧಿಕೃತ ಭಾಷೆಗಳಲ್ಲಿ ಸ್ಥಾನ ಸಿಕ್ಕಿದ್ದು ಮತ್ತು ಗೋವೆಯ ಅಧಿಕೃತ ಭಾಷೆ ಕೊಂಕಣಿಯೆಂದು ಘೋಷಿಸಿದ್ದು. ಈ ಪ್ರಭಾವದಿಂದ ಪಡುವಣ ಕರಾವಳಿಯಲ್ಲಿಯೂ ಕೊಂಕಣಿ ಕೃಷಿ ಚೇತರಿಸಿಕೊಂಡಿತು.

ಮಹಾಬಲೇಶ್ವರ ಸೈಲ ಮೂಲತಃ ಕಾರವಾರ ಜಿಲ್ಲೆಯವರು. ಅವರೀಗ ಮಡಗಾಂವ್‌ನಲ್ಲಿದ್ದಾರೆ. ಅವರು ಪ್ರಸಿದ್ಧ ಕಥೆಗಾರರು ಎಂದು ಹೆಸರಾಗಿದ್ದಾರೆ. ಅವರ ಒಂದು ಕಥಾ ಸಂಗ್ರಹಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ಅವರು ಬರೆದ ಅನೇಕ ಕಾದಂಬರಿಗಳು ವಿಮರ್ಶಕರ ಮೆಚ್ಚುಗೆ ಪಡೆದು ಅನೇಕ ಪ್ರಶಸ್ತಿಗಳಿಗೂ ಪಾತ್ರವಾಗಿವೆ. 'ಹಾವಠಣ' ಎಂಬ ಈ ಕಾದಂಬರಿಗೂ ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನದ ಒಂದು ಲಕ್ಷ ರೂಪಾಯಿಗಳ ಬಹುದೊಡ್ಡ ಬಹುಮಾನ ಬಂದಿದೆ.

ಈ ಕಾದಂಬರಿ ಕುಂಬಾರರ ಬದುಕಿನ ಸುಖದುಃಖಗಳನ್ನು ಬಿಚ್ಚಿಡುತ್ತದೆ. ಆಧುನಿಕ ಯುಗದ ಹೊಸ ಹೊಸ ಆವಿಷ್ಕಾರಗಳಲ್ಲಿ ಭಾರತದ ಮೂಲ ಕಸಬುಗಳು ಹೇಗೆ ಕಣ್ಮರೆಯಾಗಿ ಭಾರತೀಯ ಸಂಸ್ಕೃತಿಗೆ ಕುಠಾರಪ್ರಾಯವಾಗುತ್ತದೆಯೆಂಬುದನ್ನು ಲೇಖಕರು ಮಾರ್ಮಿಕವಾಗಿ ಇಲ್ಲಿ ಚಿತ್ರಿಸಿದ್ದಾರೆ.

ನನಗೆ ಈ ಕಾದಂಬರಿಯನ್ನು ಅನುವಾದಕ್ಕೆ ಕೊಟ್ಟವರು ಮಂಗಳೂರಿನ ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನದ ಅಧ್ಯಕ್ಷರಾದ ಬಸ್ತಿ ವಾಮನ ಶೆಣೈ. ನನಗೆ ಈ ಅವಕಾಶವನ್ನು ಒದಗಿಸಿ ಉಪಕರಿಸಿದ ಬಸ್ತಿ ವಾಮನ ಶೆಣೈ ಅವರಿಗೂ ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನದ ಸದಸ್ಯರೆಲ್ಲರಿಗೆ ನಾನು ಋಣಿಯಾಗಿದ್ದೇನೆ.

– ಶಾ.ಮಂ. ಕೃಷ್ಣರಾಯ

೫೦೦, 'ಸಾಹಿತ್ಯ ಸದನ'
೧೧ನೆಯ ಕ್ರಾಸ್, ೫ನೆಯ ಮೇನ್
ಗಿರಿನಗರ, ಬೆಂಗಳೂರು–೮೫
ದೂರವಾಣಿ : ೦೮೦–೨೬೪೨೨೫೩೧

# ಪ್ರಕಾಶಕರ ಮಾತು

'ವಿಶ್ವ ಕೊಂಕಣಿ ಕೇಂದ್ರ'ದ ವತಿಯಿಂದ ನಡೆಯುತ್ತಿರುವ ಕೊಂಕಣಿ ಸಾಹಿತ್ಯಕ ಕಾರ್ಯಗಳು ಹೆಚ್ಚು ವಿಸ್ತಾರವನ್ನು ಪಡೆಯುತ್ತಿವೆ. ಉನ್ನತ ಮಟ್ಟದ ಮತ್ತು ಮೌಲಿಕ ಸಾಹಿತ್ಯವನ್ನು ರಚಿಸಿರುವ ನಾಮಾಂಕಿತ ಸಾಹಿತಿಗಳನ್ನು ಮತ್ತು ವಿದ್ವಾಂಸರನ್ನು ಒಳಗೊಂಡಿರುವ ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯನ್ನು ಸ್ಥಾಪಿಸಲಾಗಿದೆ. ಕರ್ನಾಟಕ, ಗೋವಾ, ಕೇರಳ ಮತ್ತು ಮಹಾರಾಷ್ಟ್ರ ಪ್ರಾಂತ್ಯಗಳಿಂದ ಸುಪ್ರಸಿದ್ಧ ಕೊಂಕಣಿ ಲೇಖಕರು, ಸಾಹಿತಿಗಳು ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯ ಸಲಹಾಗಾರರಾಗಿ ಸಹಕರಿಸುತ್ತಿದ್ದಾರೆ. ಕೊಂಕಣಿ ಸಾಹಿತ್ಯವು ಅಂತರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿ ಕೊಳ್ಳುವಂತೆ ಮಾಡಲು ಕ್ರಿಯಾ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಕಳೆದ ೩-೪ ವರ್ಷಗಳಲ್ಲಿ ೧೫ ಮೌಲಿಕ ಸಾಹಿತ್ಯ ಕೃತಿಗಳನ್ನು, ನಿಘಂಟುಗಳನ್ನು ಮತ್ತು ಕೊಂಕಣಿ, ಇಂಗ್ಲಿಷ್, ಹಿಂದಿ, ಕನ್ನಡ, ಮಲೆಯಾಳಂ ಭಾಷೆಗಳಲ್ಲಿ ಅನುವಾದ ಕೃತಿಗಳನ್ನು ಪ್ರಕಟಿಸ ಲಾಗಿದೆ. ಜೊತೆಗೆ ಬಾಲ ಸಾಹಿತ್ಯ ಮಾಲಿಕೆಯಲ್ಲಿ ಕೊಂಕಣಿ ಭಾಷೆಯ ೮ ಕೃತಿಗಳನ್ನು ಮತ್ತು ೩೦ ವರ್ಣರಂಜಿತ ದ್ವೈಭಾಷಿಕ (ಇಂಗ್ಲಿಷ್-ಕೊಂಕಣಿ) ಕೃತಿಗಳನ್ನು ಪ್ರಕಟಿಸಲಾಗಿದೆ.

ಇಂದು ಭಾರತ ಮತ್ತು ವಿದೇಶಗಳ ಸಾಹಿತ್ಯಕಾರರಿಗೆ, ಭಾಷಾತಜ್ಞರಿಗೆ, ವಿದ್ವಾಂಸರಿಗೆ ಮತ್ತು ಹೆಚ್ಚಾಗಿ ವಾಚಕ ವೃಂದಕ್ಕೆ ಕೊಂಕಣಿ ಭಾಷಾ ಸಾಹಿತ್ಯವನ್ನು ಪರಿಚಯಿಸಬೇಕಾದ ಅಗತ್ಯ ಇದೆ. ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯು ಅನ್ಯ ಭಾಷೆಗಳ ಸಾಹಿತ್ಯವನ್ನು ಕೊಂಕಣಿ ಲೇಖಕರಿಗೆ, ಓದುಗರಿಗೆ ಪರಿಚಯಿಸುವ ಕಾರ್ಯವನ್ನು ಮಾಡುತ್ತಿದೆ. ಈ ಮಹತ್ವದ ಉದ್ದೇಶಗಳನ್ನು ಕಾರ್ಯರೂಪಕ್ಕಿಳಿಸಲು ಅನುವಾದ ಭಾಷಾಂತರ ಒಂದು ಉತ್ತಮ ಮಾಧ್ಯಮವೆಂದು, ಈ ದಿಕ್ಕಿನಲ್ಲಿ ಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಕೊಂಕಣಿ ಲೇಖಕರಿಗಾಗಿ, ಅದರಲ್ಲಿಯೂ ಯುವ ಸಾಹಿತಿಗಳಿಗಾಗಿ ಭಾಷಾಂತರ ಕಾರ್ಯಾಗಾರಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ವಿಶ್ವ ಕೊಂಕಣಿ ಕೇಂದ್ರದ ಮಹಾದಾನಿಗಳೂ, ಭಾರತೀಯ ಮತ್ತು ಇಂಗ್ಲಿಷ್ ಭಾಷಾ ಸಾಹಿತ್ಯ ಪ್ರೋತ್ಸಾಹಕರೂ ಆಗಿರುವ ಟಿ. ವಿ. ಮೋಹನದಾಸ ಪೈಯವರು ೨೦೧೦ ಇಸವಿಯಲ್ಲಿ ತಮ್ಮ ಮಾತೋಶ್ರೀ ಶ್ರೀಮತಿ ವಿಮಲಾ ವಿ. ಪೈಯವರ ಹೆಸರಿನಲ್ಲಿ ಕೊಂಕಣಿ ಭಾಷೆಯಲ್ಲಿ ಪ್ರಕಟವಾದ ಅತ್ಯುತ್ತಮ ಸಾಹಿತ್ಯ ಕೃತಿಗೆ ಒಂದು ಬಹುಮಾನವನ್ನು,

ಪುರಸ್ಕಾರವನ್ನು ಘೋಷಿಸಿದ್ದರು. (ಅದೀಗ ೩ ಪುರಸ್ಕಾರಗಳಿಗೆ ಏರಿಕೆಯಾಗಿದೆ) ಅದರಂತೆ ನಾವು ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿಯ ಆಶ್ರಯದಲ್ಲಿ ಗೋವಾ, ಕರ್ನಾಟಕ, ಮುಂಬಯಿ ಹಾಗೂ ಕೇರಳ ರಾಜ್ಯಗಳ ಲೇಖಕರಿಂದ, ಕೊಂಕಣಿ ಪುಸ್ತಕಗಳ ಬಗ್ಗೆ ಅವರ ಅಭಿಪ್ರಾಯಗಳನ್ನು ತರಿಸಿಕೊಂಡು ಬಳಿಕ ಐವರು ಹಿರಿಯ ಖ್ಯಾತ ಲೇಖಕ ಜ್ಯೂರಿಗಳ ಸಹಾಯದಿಂದ ೨೦೧೦ ವರ್ಷದ ಅತ್ಯುತ್ತಮ ಪುಸ್ತಕ ಆಯ್ಕೆಯ ಪ್ರಕ್ರಿಯೆಯನ್ನು ಪ್ರಾರಂಭ ಮಾಡಿದ್ದೆವು. ಅದರಂತೆ ಜ್ಯೂರಿ ಮಂಡಳಿಯವರು ೨೦೧೦ ರ ಅತ್ಯುತ್ತಮ ಕೊಂಕಣಿ ಪುಸ್ತಕವಾಗಿ ಶ್ರೀ ಮಹಾಬಲೇಶ್ವರ ಸೈಲ್‌ರವರ "ಹವಠಣ" ಪುಸ್ತಕವನ್ನು ಆಯ್ಕೆ ಮಾಡಿದ್ದರು. ಈ ಆಯ್ಕೆಯ ಬಗ್ಗೆ ಅತ್ಯುತ್ತಮ ಪ್ರತಿಕ್ರಿಯೆಗಳೂ ಬಂದವು ಎಂಬುವುದನ್ನು ವಾಚಕರಿಗೆ ತಿಳಿಸಲು ಸಂತೋಷವಾಗುತ್ತದೆ.

ಶ್ರೀ ಮಹಾಬಲೇಶ್ವರ ಸೈಲ್ ಕೊಂಕಣಿ ಭಾಷೆಯ ಉದ್ದಾಮ ಸಾಹಿತಿ ಅವರ ಕ್ರಿಯಾಶೀಲ ಲೇಖನಿಯಿಂದ ಹಲವಾರು ಕೊಂಕಣಿ ಕತೆ, ಕಾದಂಬರಿ, ಪುಸ್ತಕಗಳು ಹೊರ ಬಂದಿದೆ. ಮತ್ತು ಪ್ರಾದೇಶಿಕ, ರಾಷ್ಟ್ರೀಯ ಮಾನ್ಯತೆಗಳಿಸಿವೆ. ಅವರು ಬರೆದ ಸಾಹಿತ್ಯ ಕೃತಿಗಳು ಇತರ ಭಾರತೀಯ ಭಾಷೆಗಳಿಗೂ ಅನುವಾದಗೊಂಡಿವೆ.

ಮೂಲತಃ ಶ್ರೀ ಸೈಲರವರು ಕರ್ನಾಟಕದ ಕಾರವಾರ ಕರಾವಳಿ ಪ್ರದೇಶದ ಮಾಜಾಳಿಯವರು. ಮಾಜಾಳಿ ಕೊಂಕಣಿ ಭಾಷೆಯ ತವರು ಮನೆಯೆಂದು ಕರೆಯಲ್ಪಡುವ ಗೋವಾ ರಾಜ್ಯದ ಗಡಿಯಲ್ಲಿರುವ ಒಂದು ಹಳ್ಳಿ. ಅಲ್ಲಿಯ ಪರಿಸರ ಮತ್ತು ಅಲ್ಲಿ ವಾಸಿಸುತ್ತಿರುವ ಬಡ ಕುಂಬಾರ ಕುಟುಂಬಗಳ ಕಥೆ ಇದು. ಕಷ್ಟಪಡುತ್ತಾ ಜೀವನ ಸಾಗಿಸುತ್ತಿರುವ ಕುಂಬಾರ ಸಮಾಜದ ವೃತ್ತಿ ಜೀವನದ ಕಷ್ಟ ಕಾರ್ಪಣ್ಯಗಳ ಚಿತ್ರಣ 'ಹವಠಣ' ಕಾದಂಬರಿಯ ಹೂರಣ ಆಧುನಿಕತೆಯ ನೆಪದಲ್ಲಿ ಬದಲಾಗುತ್ತಿರುವ ಜನ ಜೀವನದ ಶೈಲಿ, ಅಭಿವೃದ್ಧಿಯ ಹೆಸರಲ್ಲಿ ಸ್ಥಳಾಂತರಗೊಂಡು ನಾಶವಾಗುತ್ತಿರುವ ಕುಂಬಾರ ಕುಟುಂಬಗಳ ಕಷ್ಟ, ಬವಣೆಗಳನ್ನು ಮಹಾಬಲೇಶ್ವರ ಸೈಲ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಆ ಚಿತ್ರಣದ ಶೈಲಿ ಮನಸ್ಸುಗಳನ್ನು, ಹೃದಯಗಳನ್ನು ತಟ್ಟುತ್ತಿವೆ.

ವಿಶ್ವ ಕೊಂಕಣಿ ಕೇಂದ್ರದಿಂದ ಈಗಾಗಲೇ ಹವಠಣ ಕಾದಂಬರಿಯ ಇಂಗ್ಲಿಷ್ ಮತ್ತು ಮಳಯಾಳಂ ಭಾಷೆಗಳಲ್ಲಿ ಅನುವಾದಗಳನ್ನು ಪ್ರಕಟಿಸಿದೆ. ಈಗ ಕನ್ನಡ ಭಾಷೆಯಲ್ಲಿಯೂ ಅನುವಾದಗೊಂಡು ಕನ್ನಡಿಗರ ಕೈಯಲ್ಲಿರಿಸಲಾಗುತ್ತಿದೆ.

ಕನ್ನಡ ಭಾಷೆಯ ಖ್ಯಾತ ಸಾಹಿತಿ, ಕೊಂಕಣಿ ಭಾಷಿಕರಾದ ಶ್ರೀ ಶಾಂ. ಮಂ. ಕೃಷ್ಣರಾವ್‌ರವರು ಹಲವು ವರ್ಷಗಳ ಕಾಲ ಗೋವಾದಲ್ಲಿ ವೃತ್ತಿ ಜೀವನದದಿಂದಾಗಿ ವಾಸವಾಗಿದ್ದರು. ಆ ಎಲ್ಲಾ ವರ್ಷಗಳ ಕಾಲಾವಧಿಯಲ್ಲಿ ಗೋವಾದಲ್ಲಿಯೂ ಕನ್ನಡ ಸಾಹಿತ್ಯ ಚಟುವಟಿಕೆಗಳಲ್ಲಿ ಕಾರ್ಯಶೀಲರಾಗಿದ್ದರು. ಗೋವಾದ ಕೊಂಕಣಿಗಳಿಗೆ ಹಲವಾರು ಕನ್ನಡ ಸಾಹಿತಿಗಳನ್ನು, ಕೃತಿಗಳನ್ನು ಪರಿಚಯಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಈಗ ನಿವೃತ್ತ ಜೀವನವನ್ನು ಕರ್ನಾಟಕದಲ್ಲಿ ಬೆಂಗಳೂರಿನಲ್ಲಿ ವಾಸಿಸುತ್ತ ಗೋವಾ ಮತ್ತು ಕರ್ನಾಟಕದ ನಡುವಣ ಸಾಹಿತ್ಯ ರಾಯಭಾರಿಯಾಗಿ ತಮ್ಮ ಉತ್ತರ ವಯಸ್ಸಿನಲ್ಲಿಯೂ ಕ್ರಿಯಾಶೀಲರಾಗಿದ್ದಾರೆ. ಈಗ **'ಹವಠಣ'** ಕೊಂಕಣಿ

ಕಾದಂಬರಿಯನ್ನು ಶ್ರೀ ಶಾಂ. ಮಂ. ಕೃಷ್ಣರಾವವರವರು ಕನ್ನಡ ಭಾಷೆಗೆ ಅನುವಾದಿಸಿ **'ಆವಿಗೆ'** ಹೆಸರಿನಲ್ಲಿ ವಾಚಕರಿಗಾಗಿ ಅರ್ಪಿಸಿದ್ದಾರೆ. ಕನ್ನಡ – ಕೊಂಕಣಿ ಉಭಯ ಭಾಷಾ ಸಾಹಿತಿ ಶ್ರೀ ಶಾಂ. ಮಂ. ಕೃಷ್ಣರಾವ್‌ರವರಿಗೆ, ವಿಶ್ವ ಕೊಂಕಣಿ ಕೇಂದ್ರ ಮತ್ತು ವಿಶ್ವ ಕೊಂಕಣಿ ಸಾಹಿತ್ಯ ಅಕಾಡೆಮಿ ಋಣಿಯಾಗಿದೆ. **'ಆವಿಗೆ'** ಕನ್ನಡ ಅನುವಾದ ಕೃತಿ ಬೆಳಕು ಕಾಣಲು ಹಲವು ಹಂತಗಳಲ್ಲಿ ನೆರವಾದ, ಖ್ಯಾತ ಕನ್ನಡ ಲೇಖಕಿ ಬೆಂಗಳೂರು ಡಾ. ಗೀತಾ ಶೆಣೈಯವರಿಗೆ ವಿಶ್ವ ಕೊಂಕಣಿ ಕೇಂದ್ರ ಹೃತ್ಪೂರ್ವಕವಾಗಿ ಧನ್ಯವಾದಗಳನ್ನು ಅರ್ಪಿಸುತ್ತದೆ.

ಈ ಗ್ರಂಥ ಪ್ರಕಟಣೆಗೆ ಅನುದಾನ ನೀಡಿದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಧನ್ಯವಾದಗಳು.

'ಆವಿಗೆ' ಪುಸ್ತಕಕ್ಕೆ ಸುಂದರ ಮುಖಪುಟವನ್ನು ರಚಿಸಿದ ಬೆಂಗಳೂರಿನ ಕಲಾವಿದ ಶ್ರೀ ರಘು ಅಪಾರ ಅವರಿಗೆ ಮತ್ತು ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿರುವ ಬೆಂಗಳೂರಿನ ಇಳಾ ಮುದ್ರಣ ಇವರಿಗೆ ವಿಶ್ವ ಕೊಂಕಣಿ ಕೇಂದ್ರದ ವತಿಯಿಂದ ಕೃತಜ್ಞತೆಗಳು.

ದಿ. ೨೨-೧೦-೨೦೧೪ **ಬಸ್ತಿ ವಾಮನ ಶೆಣೈ**
ಕೊಂಕಣಿ ಭಾಷೆ ಮತ್ತು ಸಂಸ್ಕೃತಿ ಪ್ರತಿಷ್ಠಾನ(ರಿ), ಅಧ್ಯಕ್ಷ
ವಿಶ್ವ ಕೊಂಕಣಿ ಕೇಂದ್ರ
ಕೊಂಕಣಿ ಗಾಂವ, ಶಕ್ತಿನಗರ
ಮಂಗಳೂರು-೫೭೫೦೧೬

# ಆವಿಗೆ

ಬಿಸಿಲಿನಲ್ಲಿ ಬೇಯುತ್ತಿರುವ ಆ ಮಧ್ಯಾಹ್ನ ಕಪ್ಪಾಗಿ ಸುಟ್ಟು ಹೋದಂತೆ ಕಾಣುತ್ತಿತ್ತು. ಪಡುವಣ ದಿಶೆಯಲ್ಲಿ ಆಗಸದ ತಳದಲ್ಲಿ ಕಪ್ಪಾಗಿ ಕೂತಿದ್ದುದು ಏಳುತ್ತಿರಲಿಲ್ಲ. ಸರಿಯುತ್ತಿರಲಿಲ್ಲ. ಹಾವಿನಂತೆ ಅಂಟ ಕುಂತಿತ್ತು. ಗಾಳಿಯಂತೂ ಹೀಗ ಬೀಸುತಿತ್ತು. ಬೂರಲ ಹತ್ತಿಯ ಮುದುಕಿ ಮೇಲೆ ಹಾರಿಸಿದರೂ ಹಾರುತ್ತಿರಲಿಲ್ಲ.

ಆದರ ಕುಂಬಾರ ಕೇರಿಯಲ್ಲಿ ಎಂದಿನಂತೆ ಕೆಲಸ ನಡೆದಿತ್ತು. ಅವರು ತಿಗರಿಯ ಮೇಲೆ ಮಣ್ಣಿನ ಮಡಕೆಗಳನ್ನು ಮಾಡುತ್ತಿದ್ದರು. ಬಿಸಿನಲ್ಲಿ ಒಣಗಲು ಹಾಕುತ್ತಿದ್ದರು. ಉಪ್ಪಿನ ಮಾವಿನ ಮಿಡಿಯೊಂದಿಗೆ ಗಂಜಿ ಕುಡಿಯುತ್ತಿದ್ದರು. ಪುರುಶ್ಯಾ ಬಾಗಿಲಲ್ಲಿ ನಿಂತು ಹೇಳಿದ್ದ. "ಈ ಬಿಸಿಲು ಕಾವು ಒಳ್ಳೆದಲ್ಲ. ಮಳಿ ಬೀಳತೈತೊ ಏನೊ. ದೇವ್ರೇ. ಮೈಮೇಲೆ ಬೆವರಿನ ಧಾರೆ. ಗಾಳಿಯಂತೂ ಬರವಲ್ಲದು."

ವೈಶಾಖ ಶುರುವಾಗಿತ್ತು. ರೋಹಿಣಿ ನಕ್ಷತ್ರಕ್ಕಿನ್ನೂ ಎಷ್ಟೊ ದಿನಗಳಿದ್ದವು. ಆಕಾಶದಲ್ಲಿ ಉಸಿರುಗಟ್ಟಿದಂತಹ ವಾತಾವರಣ. ಗಾಳಿ ಬಿಸಿಲನ್ನು ಹಿಡಿದಿಟ್ಟಂತೆ.

ಮಧ್ಯಾಹ್ನ ಇಳಿಯಿತು. ಎಲ್ಲೊ ಏನೊ ಕೊಂಚ ಅಲ್ಲಾಡಿತು. ಸರಿದಾಡಿತು. ತೆಂಗಿನ ಮರದ ಗರಿಗಳು ಸರಸರಿಸಿದವು. ಕೇರಿಯ ಮಧ್ಯೆ ನಿಂತ ಮಾವಿನ ಮರದ ತುದಿ ಒಂದು ಕಡೆಯಿಂದ ಹೊಳೆಯುತ್ತ ಮತ್ತೊಂದು ಕಡೆ ಬಗ್ಗಿತು. ಅದರಿಂದ ಸೋಂ... ಸ್ವರ ಹೊರಡುತ್ತಿತ್ತು.

ನೋಡು ನೋಡುತ್ತಿದ್ದಂತೆ ಗಾಳಿಯಲ್ಲಿ ಉಷ್ಣತೆ ತುಂಬಿ ಅದರ ಗತಿ ಹೆಚ್ಚಾಯಿತು. ಗಾಳಿಯ ಜೊತೆಗೆ ಕಪ್ಪು ಮೋಡಗಳೂ ತಲೆಯ ಮೇಲೆ ಸರಿದು ಬರುತ್ತಿದ್ದವು. ತಿಗರಿಯ ಮೇಲೆ ಗಡಿಗೆಯನ್ನು ಮಾಡುತ್ತಿದ್ದ ಕುಂಬಾರರು ಕೊಂಚ ತಡೆದು ನಿಂತರು. ಕೈಯಲ್ಲಿದ್ದ ಪೆಟಣೆ ಮಣ್ಣು ಜಪ್ಪುವ ಕಲ್ಲು ನೆಲದ ಮೇಲಿಟ್ಟರು.

ನಿನ್ನೆ ಮೊನ್ನೆ ಮಾಡಿದ ಮಣ್ಣಿನ ಪಾತ್ರೆಗಳನ್ನು ಅಂಗಳದಲ್ಲಿ ಬಿಸಿಲಿಗೆ ಇಟ್ಟಿದ್ದರು. ಹೆಣ್ಣು ಮಕ್ಕಳು ಗಾಬರಿಯಾದರು. ಅವರು ಬುಟ್ಟಿ ಕೈಯಲ್ಲಿ ಹಿಡಿದುಕೊಂಡು ಓಡಿದರು. ಒಣಗಲು ಹಾಕಿದ ಮಡಕೆಗಳನ್ನೆಲ್ಲ ಒಂದೊಂದಾಗಿ ಬುಟ್ಟಿಯಲ್ಲಿ ತುಂಬ ತೊಡಗಿದರು. ಯಶವಂತನ ಹೆಂಡತಿ ಹೆಡಿಗೆ ತುಂಬಿಕೊಂಡು ಮೇಲೆತ್ತುತ್ತಿದ್ದಾಗ ಅದು ಕೊಂಚ ವಾಲಿತು. ಒಂದು ಮಡಕೆ ಬಿದ್ದು ಒಡೆಯಿತು. ಯಶವಂತ ಹಜಾರದಿಂದ, ತನ್ನ ಹೆಂಡತಿಯ ಮೇಲೆ ಬಿರುಮಾತಿನ ಸುರಿಮಳೆಗರೆಯುತ್ತ "ಗಡಬಿಡಿ ರಂಡಿ, ನಿನ್ನ ಕೈಗೇನು

ಧಾಡಿ ಆಗ್ಯದೆ. ಎಂಥಾ ಚಂದ ಗಡಗಿ ಒಡ್ದ ಹಾಕಿದಿ. ನಿನಗೇನು ಗೊತ್ತೆತಿ ಮಣ್ಣು ಹದ ಮಾಡೂ ಮಂದಿ ರಟ್ಟಿ ಬೀಳತಾವ್."

"ನೀ ಕುಂತೀ ಯಾಕ್ ಮತ್ತ? ಮುದ್ದಿ ಕುಂತಾಂಗ. ಕುಂಡಿಗ ಬೇರು ಬಿಟ್ಟಾವೇನು? ಎದ್ದು ಒಂದೀಟ ಕೈ ಹಚ್ಚಿದ್ರೆ ಕೈ ಸವಿತಾವೇನು?" ಎಂದಳು ಆಕೆ.

ಯಶವಂತ ಸದ್ದಿಲ್ಲದೆ ಎದ್ದು ಹೆಂಡತಿಗೆ ಸಹಾಯ ಮಾಡತೊಡಗಿದ. ಮುಂದಿನ ಜಗಲಿಯ ಮೇಲೆ ಕಟಿಯ ಮೇಲೆ ಕೈಯಿಟ್ಟುಕೊಂಡು ನಿಂತು ಪುರಸೊ "ನಾ ಬಡಕೊಂಡೆ. ಕೆರ‍್ಯಾಗಿನ ಮಣ್ಣು ತಂದು ಹದ ಮಾಡಿಟ್ಕೋರಪ್ಪ ಅಂತ ಬಡಕೊಂಡೆ. ಕೇಳ್ತೇನು? ಈಗ ಮಳೆ ಬಿದ್ದು ಮಣ್ಣು ನೀರಾಗ ಮುಳುಗಿ ಹ್ವಾದ್ರೇನು ಮಾಡ್ತೀರಿ, ಕೆರ‍್ಯಾಗ ಬಿದ್ದು ಜೀವ ಕಳಕೋತೀರೇನು? ಮುಕುಳಿ ಮ್ಯಾಗ ನಾಲ್ಕು ಬಿದ್ದ ಹೊರ‍್ತು ಇವರ ತಲ್ಯಾಗಿನ ಗಂಟಿ ಬಾರಿಸೂದಿಲ್ಲ."

ಅದಕ್ಕೆ ಯಶವಂತ : "ಮಣ್ಣ ತಂದರೇನು, ಧೂಳು ತಂದರೇನು? ಕುಂಬಾರನು ಮಳೆಗಾಲದ ಮೂರು ತಿಂಗಳು ತನ್ನ ಕರುಳು ಹಿರಿದು ತಿಂದೇ ಬದುಕಬೇಕಾಗ್ಯೆತಲ್ಲ. ಇದು ಅಡ್ಡ ಮಳಿ ಬರತೈತಿ. ಹೋಗತೈತಿ" ಎಂದು ಹೇಳಿದ.

ಗಾಳಿ ನಿಂತಿತು. ಎಲ್ಲ ಕಡೆ ಕತ್ತಲು ಚೆಲ್ಲಿದಂತೆ ಕಪ್ಪು ಕಪ್ಪಾಗಿ ಕಾಣತೊಡಗಿತು. ಆಗಸದ ಕಪ್ಪು ಭೂಮಿಗೂ ಇಳಿದು ಬಂತು. ಕ್ಷಣದಲ್ಲಿ ಮಳೆ ಹನಿಯಲಾರಂಭಿಸಿತು. ಮೊದಲು ಜಿಮಿರುತ್ತಿದ್ದ ಮಳೆ ಜೋರಾಗಿ ಸುರಿಯಲಾರಂಭಿಸಿತು. ದೂರದಲ್ಲಿ ಒಕ್ಕಲಿಗರು ನೇಗಿಲಿಗೆ ಎತ್ತು ಹೂಡಿದ್ದರು. ಆ ನೇಗಿಲು, ಜೋಡಿ ಎತ್ತು, ಗದ್ದೆಗಳೆಲ್ಲ ಧೂಳು ಮಳೆಯಲ್ಲಿ ಹುದುಗಿ ಪರದೆ ಎಳೆದಂತಾಗಿತ್ತು. ಅನತಿ ದೂರದಲ್ಲಿ ಗುಡ್ಡಗಳ ಮೇಲೂ ಹೊಗೆಯೆದ್ದಂತಾಗಿತ್ತು.

ಕುಂಬಾರ ವಾಡೆಯ ಗಂಡು-ಹೆಣ್ಣು ಮಕ್ಕಳು ಜಗಲಿಯ ಮೇಲೆ, ಮಾಡಿನ ಕೆಳಗೆ, ಕೋಣೆಯ ಒಳಗೆ ಗಲ್ಲದ ಮೇಲೆ ಕೈಯಿಟ್ಟುಕೊಂಡು ಚಿಂತಾಕ್ರಾಂತರಾಗಿ ಕುಳಿತಿದ್ದರು. ಚಿಂತೆಯಿಂದ ಮಳೆಯನ್ನೇ ವೀಕ್ಷಿಸುತ್ತಿದ್ದರು. ಭೂಮಿ, ಮಣ್ಣು, ಗಿಡ ಮರ, ಮಕ್ಕಳು ಮಳೆಯನ್ನು ಖುಷಿಯಿಂದ ನೋಡುತ್ತಿರುವಾಗ ಕುಂಬಾರರ ಮುಖದ ಮೇಲೊಂದು ಬಗೆಯ ಕಸಿವಿಸಿ, ಚಿಂತೆ ಮನೆ ಮಾಡಿತ್ತು. ಅವರಿಗೆ ನಾಳೆಯ ಗಂಜಿಯ ಚಿಂತೆ ಕಾಡುತ್ತಿತ್ತು. ಹಸಿವು ಶಮನಿಸುವ ಯೋಚನೆ ಪೀಡಿಸುತ್ತಿತ್ತು. ಮಳೆ ಹೆಚ್ಚಾದರೆ ಕೆರೆಯಲ್ಲಿ ನೀರು ತುಂಬುತ್ತದೆ. ಮಣ್ಣು ಸಿಗುವುದಿಲ್ಲ. ಮಳೆಯಲ್ಲಿ ಗಡಿಗೆಗಳೂ ಒಣಗುವುದಿಲ್ಲ.

ಅಷ್ಟರಲ್ಲಿ ಯಾರೋ ಒಬ್ಬರು ಕುಳಿತಲ್ಲಿಂದಲೇ ನೋಡಿದರು. ಒಂದು ಹುಡುಗಿ ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಬರುತ್ತಿದ್ದಾಳೆ. ಶಿವರಾಮ ಮಳೆಗೆ ಅಂಜದೆ ಕೇರಿಯ ಕಡೆಗೆ ಬಂದು ನಿಂತುಕೊಂಡ. ಅವನು ಕಣ್ಣಿನ ಮೇಲೆ ಕೈಹಿಡಿದು ಕಣ್ಣಲ್ಲಿ ಕಣ್ಣಿಟ್ಟು ನೋಡಿದ. ಚಿಕ್ಕಂದಿನಲ್ಲಿ ಹೆಗಲ ಮೇಲೆ ಆಡಿಸಿದ ಹುಡುಗಿ "ಈಕಿ ನಮ್ಮ ಘನಶ್ಯಾಮನ ಮಗಳು ಸುನಂದಾ. ಅವಳ್ಯಾಕ ಅತ್ತುಕೊಂಡು ಬರಾಕ್ ಹತ್ಯಾಳ?"

ಅವಳು ಅಳುತ್ತಲೇ ಬರುತ್ತಿದ್ದಳು. ಮಳೆಯ ನೀರು ಮತ್ತು ಕಣ್ಣೀರು ಒಂದಾಗಿ ಸುರಿಯುತ್ತಿದ್ದವು. ಮಳೆಯಲ್ಲಿ ಅವಳ ತಲೆಗೂದಲು ಒದ್ದೆಯಾಗಿ ಮುದ್ದೆಯಾಗಿದ್ದವು.

ಹಣೆಯ ಮೇಲಿನ ಕುಂಕುಮವೂ ಅಳಿಸಿ ಹೋಗಿತ್ತು. ಅವಳನ್ನು ನೋಡಿದರೆ ಏನೋ

ಅರ್ಥ ಆದಂತಿತ್ತು. ಮಗುವಂತೂ ನೀರಿನಿಂದ ತೊಯ್ದು ಮುದ್ದೆಯಾಗಿತ್ತು. ತಾಯಿಯನ್ನು ಅಪ್ಪಿಕೊಂಡು ಕೂತಿತ್ತು. ಅವಳೂ ವಾಡೆಯ ಅಂಚಿಗೆ ಬಂದು ಸ್ವಲ್ಪ ಮಳೆ ನಿಂತ ಮೇಲೆ ತನ್ನ ತಂದೆಯ ಮನೆಗೆ ಹೋದಳು.

ಮಳೆಯ ಭರಭರಾಟೆಯಲ್ಲಿ ಇಡಿಯ ವಾಡೆಗೆ "ಘನಶ್ಯಾಮನ ಹುಡುಗಿ ಸುನಂದ ಗಂಡನ ಮನೆಯಿಂದ ಓಡುತ್ತ ಬಂದಿದ್ದಾಳೆ. ದೊಡ್ಡ ದೊಡ್ಡಕೆ ಅಳುತ್ತ ತಂದೆಯ ಮನೆಗೆ ಹೋಗಿದ್ದಾಳೆ" ಎಂಬ ಸುದ್ದಿ ಹಬ್ಬಿತು.

ತಂದೆ ಘನಶಾಮ ಬಡಕಲು, ಕಪ್ಪಾಗಿದ್ದ, ಬಗ್ಗಿದಂಥ, ಸೊಂಟ ಹಿಡಿದುಕೊಂಡಂತೆ ನಡೆಯುತ್ತ ಬಾಯಲ್ಲಿ ಏನೇನೊ ಪುಟಪುಟಸುತ್ತಿದ್ದ. ಮಧ್ಯೆ ಮಧ್ಯೆ ಶಿವಾ, ಶಿವಾ, ಶಿವಾ ಅನ್ನುತ್ತಿದ್ದ. ತಾಯಿ ರುಕ್ಮಿಣಿ ಮೊಮ್ಮಗನನ್ನು ಒರೆಸುತ್ತ ಗಂಡನಿಗೆ "ನಾನು ಬ್ಯಾಡಾ ಬ್ಯಾಡಾಂದರೂ ಮಗನಿಗೆ ಹುಡುಗಿ ಕೊಟ್ರಿ, ಆಕಿ ಅಕ್ಕ ಅಲ್ಲ ಆಕಿ ರಾಕ್ಷಸಿ... ನಿಮ್ಮ ಮನೆತನದ ಬೀಜಾನೇ ಅಂಥಾದ್ದು. ನೀನಾದ್ರು ಎಂಥಾವ್ನು... ಈಗ ಸೊಂಟ ಹಿಡಿದ ಆಮಿ ಆಗಿದ್ದೀ. ಹಿಂದಕ ಪೆಟಣೆಯಿಂದ ನನಗೂ ಬಡೀತಿದ್ದಿ."

ಘನಶಾಮ ಈಗ ದೊಡ್ಡಕೆ ಬಾಯಿ ಹಾಕಿದ. "ಆಕಿ ಬಂದಾಗೆಲ್ಲ "ಚೌಡಿ ಹಂಗ ಒದರಾಡ್ತಿದ್ದೀ ಆಕಿ ಕೂಡ. ಆಕಿ ಶಾಪ ಹಾಕಿ ಹೋಗ್‌ತಿದ್ಳು. ಹುಡುಗಿ ಕೊಟ್ಟಾದ್ರೂ...

ಈ ನಡುವೆ ಗೋಪಾಳ ಬಿಸಿಯಾದ. "ಪಾಪ ಹುಡುಗಿ ಬಂದು ಜಗಲ್ಯಾಗ ಕುಂತು ಅಳತೈತಿ. ಮತ್ತ ನೀವ್ ಹಾಕ್ಯಾಡ್ತೀರಿ, ಏನಾಗ್ಯದ ನಿಮಗ?" ಅವನು ಸುನಂದಾಳನ್ನು ಪ್ರಶ್ನಿಸಿದ. "ಏನಾಯ್ತವ್ವ?... ಯಾಕ ಅಳಕೋಂತ ಕಣಸಗಿರಿಯಿಂದ ಮಳ್ಯಾಗ ನಡಕೋತ ಬಂದಿ?"

ಯಾರೋ ಬಟ್ಟೆಯಿಂದ ಅವಳ ತಲೆಗೂದಲು ಒರೆಸುತ್ತಿದ್ದಳು. ಅವಳು ಅಳುತ್ತ "ಅಣ್ಣಾ ಅವರು ನನಗ ಬಡೀತಾರ. ಗಂಡ ಮತ್ತು ಅತ್ತಿ ಇಬ್ಬರೂ ಹೊಡೀತಾರೆ. ನನಗೆ ತೌಡಿನ ಗಂಜಿ ಮಾಡಿ ಹಾಕ್ತಾರ. ನಾ ಏನ್ ಮಾಡಿದ್ರೂ ತಪ್ಪು. ನಾನ್ ಕಲ್ಸಿದ ಮಣ್ಣಾಗ ಕಲ್ಲಿರ್ತಾವಂತಾರ. ನಾನು ಕೈ ಹಚ್ಚಿದ್ರೆ ಆವಿಗೆಯಲ್ಲಿ ಗಡಿಗೆಗಳು ಒಡಿತಾವ ಅಂತಾರ. ನನಗೆ ಆವಿಗೆ ಹತ್ರ ಹೋಗಾಕ ಬಿಡೂದಿಲ್ಲ. ಆವಿಗೆಗೆ ಕೈ ಹಚ್ಚಾಕೂ ಬಿಡೂದಿಲ್ಲ.

ಈ ವರ್ಷ ಒಬ್ಬ ಕೊಂಕಣೇರವರನ ಹೊಲ ಗುತ್ತಗಿ ಮ್ಯಾಲ ಹಿಡದ್ರು, ನನಗೂ ಹೊಲಕ್ಕೆ ಕರಕೊಂಡು ಹ್ವಾದ್ರು, ನನಗ ಕೆಲಸ ಮಾಡಾಕ ಬರೂದಿಲ್ಲ ಅಂತ ಗಂಡ ಮನಿತನಕ ಹೊಡಕೋತ ಬಂದು ಬಿಟ್ಟು ಹ್ವಾದ."

ಎಲ್ಲರ ಸಿಟ್ಟು ನೆತ್ತಿಗೇರಿತ್ತು. "ಸಣ್ಣಕಿದ್ದಾಗ ನಿನ ಗಂಡ ಹುಚ್ಚನಂತಿದ್ದ. ಮಾಮಾನ ಮನೀಗ ಅಂತ ಬಂದು ರಾತ್ರಿ ಹಗಲು ಮಾವಿನ ಹಿತ್ಲಾಗ ಕಾಜೂ (ಗೋಡಂಬಿ) ತೋಟದಾಗ ಬಿದ್ದಿರ್ತಿದ್ದ. ಕಾಜು, ಮಾವಿನ ರಸದಿಂದ ಆಂವಗ ಮೈಮ್ಯಾಗ ಹುಣ್ಣಾಗುತ್ತಿದ್ವು, ಹೊ.... ಹೊ... ಅಂತ ಮಾತಾಡ್ತಿದ್ದ"

"ಹುಚ್ಚಾ ಅವ್ನು. ತಂದಿ ಹೆಂಡಕುಡುಕ, ಲಫಂಗಿಯಾಗಿದ್ದ. ಅಂವಾ ಕುಡದ ಕುಡದ ಸತ್ತ. ಮಗ ಘಟಿಂಗ ಆಗ್ಯಾನ."

"ತಾಯಿ ಕಸ್ತೂರಿ ದೊಂದಿ ಇದ್ದ್ಹಾಂಗ ಅದಾಳ. ಒಮ್ಮೆ ಗಡಗಿ ಮಾರಾಕ ಹೊಂಟಾಗ ಒಬ್ಬನ ತಲೀಮ್ಯಾಲ ಗಡಗಿ ಹೊಡೆದು ಒಡೆದು ಹಾಕಿದ್ದಳು. ಆಗ ಆ ಊರಮಂದಿಯೆಲ್ಲ

ಕೂಡಿ ಕೈಯಾಗ ಕೋಲ ಹಿಡಿದು ಎಮ್ಮಿ ಬಡದು ಓಡಿಸೊ ಹಂಗ ಊರಹೊರಗ ತಂದು ಬಿಟ್ಟಿದ್ದರಂತೆ. ಮತ್ತ ಈ ಊರಿಗ ಕಾಲಿಟ್ಟರ ಕಾಲ ಮುರ್ದು ಹಾಕ್‌ತೇವಿ ಅಂತ ಧಮಕಿ ಹಾಕಿದ್ರಂತ."

"ತಂದಿ ಮನಿ ಮರ್ವಾದೆಯಾದ್ರೂ ಕಾಯಬೇಕಿತ್ತಲ್ಲಪ್ಪ? ಪಾಪ ಏನೂ ಗೊತ್ತಿಲ್ಲದ ಹುಡುಗಿಗೆ ಅವನಾದ್ರೂ ಸಂಭಾಳಿಸಬೇಕಾಗಿತ್ತಲ್ಲ?"

ಈಗ ಹಿರಿಯಳಾದ ಸೀತವ್ವ ಎಲ್ಲರನ್ನು ಸರಿಸಿ ಮುಂದೆ ಬಂದಳು. "ಪಾಪ ಹುಡುಗಿ ಮಳೆಯಾಗ ಒದ್ದಿಯಾಗಿ ಬಂದಾಳ. ನೀವು ಇಲ್ಲಿ ಮಾತಾಡಕೋತ ಕುಂತೀರಲ್ಲ. ಆಕೆಗೆ ಕುಂಕುಮಾನಾದ್ರೂ ಹಚ್ಚಿರಲ್ಲ." ಎನ್ನುತ್ತ ಸೀತವ್ವ ಸುನಂದಾಳನ್ನು ಕೈ ಹಿಡಿದು ಕರೆದು ಕೊಂಡು ಒಳಗೆ ಹೋದಳು. "ರುಕ್ಮೀಣಿ... ಆಕಿಗೆ ಒಣಸೀರಿ ಕೊಡು ಉಡಾಕ... ಮತ್ತ ಕುಂಕುಮಾ ಕೊಡು" ಸೀತವ್ವನ ಸಿಟ್ಟು ನೆತ್ತಿಗೇರಿತ್ತು. "ಆ ಕಸ್ತೂರಿಗೆ ಎಷ್ಟು ಸೊಕ್ಕು ಬಂದೈತಂತ ನಾನೂ ನೋಡತೀನಿ. ನಾಳೆ ಒಂದೇ ದಿನ ಬಿಡು. ನಾಡದು ಕರಕೊಂಡು ಹೊಕ್ಕೀನಿ ಈಕಿಗ. ನಾ ಆಕಿಗ ಹ್ಯಾಂಗ ಗಡಗಡಸ್ತೀನಿ ನೋಡ್ರಿ. ಈ ಮಗಳ ಕೂದಲಿಗೇನಾದರೂ ಆದ್ರ ಹೊಂಡಾ ತೆಗೆದು ಹುಗಿತೀನಿ ಅಂತ ಹೇಳತೀನಿ. ಕಣಸಗಿರ್‌ನ ಕೊಂಕಣೇರ ಹೊಲದ ಮಾಲಕನನ್ನು ಕರದು ಊರಾಗಿಂದ ಹೊರಗ ಹಾಕುವಂತೆ ಮಾಡತೀನಿ ಅಂತ ಹೇಳತೀನಿ."

ಘನಶಾಮ ಅಳುಮೋರೆ ಮಾಡಿ "ಹಿಂದಕ ಮೂರು ನಾಕ ಸಾರಿ ಮನೀಗ ಬಂದು ಆಕಿ ನಮ್ಮ ಮಗನಿಗೆ ನಿನ್ನ ಹುಡುಗಿ ಕೊಡು ಕೊಡು ಅಂತಾ ಬೇಡತಿದ್ಲು. ಈಗ ಮದವಿ ಆಗಿ, ಮೂರು ವರ್ಸಾ ಆದ್ರೂ... ಒಂದಿನ ಮನೀಗ ಬರಲಿಲ್ಲ" ಎಂದು ಹೇಳಿದ.

"ಆಕಿಗೆ ಬರಾಕ ಎಲ್ಲೈತಿ ಮಾರಿ? ಆಕಿ ಬರೂದೂ ಬ್ಯಾಡಾ. ಬರೂಮುಂದ ದೆವ್ವ ಬಡಿದು ಸಾಯಲಿ." ರುಕ್ಮಿಣಿಯ ಬಾಡಿದ ಮುಖದಲ್ಲಿ, ಮುಂದೆ ಬಂದ ಕಣ್ಣುಗಳಲ್ಲಿ ಕೋಪ ಕುದಿಯುತ್ತಿತ್ತು.

ಸುನಂದಾ ಹೊರಗೆ ಬರುತ್ತ ಹೇಳಿದಳು. "ನೀ ಯಾಕ ಮಾತಾಡ್ತಿಯವ್ವ, ನಾನು ನನ್ನ ನಸೀಬದಾಗ ಇರೂದನ್ನ ಭೋಗಿಸ್ತೀನಿ." ಸುನಂದಾ ಮುಗ್ಧ ಹೆಣ್ಣು ಮಗಳು. ತುಂಬ ಸರಳ ಸ್ವಭಾವದವಳು. ಆದರೆ ಆಕೆಯ ಕಾಲುಗಳು ಸಪುರ, ಸೊಂಟದ ಬಾಗ ಗಡುತರವಿತ್ತು. ಅವಳ ಪರಿಮಿತಿಯಲ್ಲಿ ಅವಳು ಕೆಲಸ ಮಾಡಬಲ್ಲವಳಾಗಿದ್ದಳು. ಅದಕ್ಕಿಂತ ಹೆಚ್ಚು ಅವಳಿಂದಾಗುತ್ತಿರಲಿಲ್ಲ. ತಮ್ಮನ ಮಗಳು ಎಂದು ಕಸ್ತೂರಿ ತನ್ನ ಸೊಸೆಯನ್ನು ಸಂಭಾಳಿಸಿಕೊಳ್ಳಬೇಕಾಗಿತ್ತು ಎಂದು ಎಲ್ಲರಿಗೂ ಅನಿಸುತ್ತಿತ್ತು.

ಮೂರನೆಯ ದಿನ ನಿಜವಾಗಿಯೂ ಸೀತಕ್ಕ ಸುನಂದಾಳನ್ನು ಕರೆದುಕೊಂಡು ಕಣಸಗಿರಿಗೆ ಹೊರಟಳು. ಚರ್ ಚರ್ ಎಂದು ಸದ್ದು ಮಾಡುವ ಚಪ್ಪಲಿ ಧರಿಸಿಕೊಂಡು ಸುನಂದೆಗೆ ನಡಿ 'ಹೋಗೂಣು... ನೀ ಏನ್ ಅಂಜಬ್ಯಾಡಾ ನಾನದೀನಿ" ಎಂದಳು.

ಸೀತವ್ವ ಕರೆದುಕೊಂಡು ಹೋದಳೆಂದ ಬಳಿಕ ಕೇರಿಯ ಜನರೆಲ್ಲ ನೆಮ್ಮದಿಯ ನಿಟ್ಟುಸುರು ಬಿಟ್ಟರು. ಅವಳು ವ್ಯವಸ್ಥಿತವಾಗಿ ಸಮಸ್ಯೆ ಬಗೆ ಹರಿಸುತ್ತಾಳೆಂಬ ನಂಬಿಕೆ ಎಲ್ಲರಲ್ಲೂ ಇತ್ತು.

*    *    *

ಮಳೆ ಆರ್ಭಟದಿಂದ ಬಂತು. ಸ್ವಲ್ಪ ಹೊತ್ತು ಸುರಿದು ಹೋಯಿತು. ಆದರೆ ಎರಡನೆಯ ದಿನ ಮಳೆ ಮತ್ತೆ ಸುಳಿಯಲಿಲ್ಲ. ಮಧ್ಯಾಹ್ನದವರೆಗೆ ಮಳೆ ಇಂಗಿ ಹೋಗಿ ಧೂಳು ಹಾರತೊಡಗಿತ್ತು. ಹಿಂದಿರುವ ಗುಡ್ಡದಲ್ಲಿರುವ ಹಳದಿ ಬಣ್ಣ ಹಾಗೆಯೇ ಉಳಿದುಕೊಂಡಿತ್ತು. ಇಂದಿನ ಚಿರು ಬಿಸಿಲಿನಲ್ಲಿ ಅದು ಬೆಂಕಿಯಂತೆ ಮಿಂಚುತ್ತಿತ್ತು. ನಾಲ್ಕೂ ಕಡೆ ಒಕ್ಕಲಿಗರು ಉತ್ತು ಬಿತ್ತಲು ನೇಗಿಲು ಕಟ್ಟಿದ್ದರು. ಅವರ ಹೆಂಡಂದಿರು ಮಣ್ಣಿನ ಹೆಂಟೆ ಒಡೆಯುತ್ತಿದ್ದರು. ಗೊಬ್ಬರ ಸಿಂಪಡಿಸುತ್ತಿದ್ದರು.

ಕುಂಬಾರರರಿಗೂ ಕೆಲಸದ ಒತ್ತಡ ಹೆಚ್ಚಾಗಿತ್ತು. ಕೆರೆ ತುಂಬುವ ಮೊದಲು ಮಣ್ಣು ತಂದು ಹದ ಮಾಡಿಕೊಳ್ಳಬೇಕಿತ್ತು. ಈ ಕೆರೆಯ ಮಣ್ಣು ಅಪರೂಪದ್ದಾಗಿತ್ತು. ಅವರ ಪೂರ್ವಜರು ಈ ಮಣ್ಣಿನ ಗುಣ ನೋಡಿಯೇ ಇಲ್ಲಿಯೇ ನೆಲೆಸುವ ಆಲೋಚನೆ ಮಾಡಿರಬೇಕು. ಬೆಣ್ಣೆಯಂತಹ ಇಂಥ ಮಣ್ಣು ಸುತ್ತಮುತ್ತ ಹತ್ತಿಪ್ಪತ್ತು ಮೈಲಿನ ಪ್ರದೇಶದಲ್ಲಿ ಎಲ್ಲೂ ಸಿಕ್ಕುತ್ತಿರಲಿಲ್ಲ.

ಬೆಳಗಾದ ಮೇಲೆ ಸ್ವಲ್ಪ ತಡವಾಗಿಯೇ ಮಕರಿ, ಗುದ್ದಲಿ, ಕೊಡಲಿ ತೆಗೆದುಕೊಂಡು ಕುಂಬಾರರೆಲ್ಲ ಮಣ್ಣು ತರಲು ಕೆರೆಗೆ ಹೋಗಿದ್ದರು. ಎಲ್ಲಾ ಕುಂಬಾರರು ಬೆಳಿಗ್ಗೆ ತಡವಾಗಿ ಏಳುತ್ತಿದ್ದರು. ಭೂಮಾಲಿಕರಾದ ಕೊಂಕಣಿಗರು ಅವರನ್ನು ನೋಡಿ ನಗುತ್ತಿದ್ದರು ಕೂಡ. ಒಕ್ಕಲಿಗರು ಬೆಟ್ಟದಿಂದ ಕಟ್ಟಿಗೆಯ ಹೊರೆ ತಲೆಯ ಮೇಲಿಟ್ಟುಕೊಂಡು ಬೆಟ್ಟ ಇಳಿದು ಬರುವಾಗ ಕುಂಬಾರರ ಹೆಣ್ಣು ಮಕ್ಕಳು ಬೆಟ್ಟವೇರುತ್ತಿದ್ದರು. ಒಕ್ಕಲಿಗರು ನೇಗಿಲು ಹೂಡಿ ನಾಲ್ಕು ಗದ್ದೆ ಹೂಡಿಯಾದ ಬಳಿಕ ಕುಂಬಾರರೆದ್ದು ಹಲ್ಲಿಗೆ ಮಂಜನ ಹಚ್ಚುತ್ತಿದ್ದರು. ಆದರೆ ಅವರು ಮಲಗುವುದೂ ಅಷ್ಟೇ ರಾತ್ರೆಯಾಗುತ್ತಿತ್ತು. ರಾತ್ರೆಯ ತಂಪಿಗೆ ಅವರು ಮಧ್ಯರಾತ್ರಿಯ ವರೆಗೂ ಮಣ್ಣು ಬಡಿಯುತ್ತ ಕುಳಿತುಕೊಳ್ಳುತ್ತಿದ್ದರು. ಧಪ್... ಧಪ್... ಸದ್ದು ಮಧ್ಯರಾತ್ರಿಯ ಶಾಂತತೆಯನ್ನು ಸೀಳಿ ವಾತಾವರಣ ಅಲ್ಲಾಡಿಸುತ್ತಿದ್ದರೆ ಅವರ ಹೆಂಡಂದಿರು ಬಾಯಲ್ಲಿ ಏನೊ ಮಣಮಣಿಸುತ್ತ ಮನೆಯ ಒಳಗೆ ಹೊರಗೆ ಸುಳಿದಾಡುತ್ತಿದ್ದರು. ಬೀಡಿಗೆ ಬೆಂಕಿ ತಂದುಕೊಡು, ಮಣ್ಣಿನ ಹದಕ್ಕೆ ಬೇಕಾಗುವ ನೀರು ತಂದುಕೊಡುವ ಕೆಲಸ ಅವರು ಮಾಡುತ್ತಿದ್ದರು.

ಕೆರೆ ಒಣಗಿರಲಿ, ತುಂಬಿರಲಿ ಕೆರೆಯ ಅಂಚಿಗೆ ಹೋದರೆ ಮನ ಖುಷಿಯಿಂದ ಅರಳುತಿತ್ತು. ನೂರು ಮಾರು ಅಗಲ, ಐನೂರು ಮಾರು ಉದ್ದದ ಕೆರೆ, ಕೆಳಗಿನ ಬದಿಯಲ್ಲಿ ತಡೆಯೊಡ್ಡು, ಮೇಲ್ಬದಿಯಲ್ಲಿ ಬೆಟ್ಟ ಇಳಿದು ಕೆರೆಯನಪ್ಪಿ ಕೊಂಡಂತಿತ್ತು. ನಡುವೆ ಸ್ವಲ್ಪ ಭೂಮಿ–ಹೊಲ. ಅಲ್ಲಿ ಮುಕ್ತವಾದ ಬೆಳಕು ಚೆಲ್ಲಿರುತ್ತಿತ್ತು. ಅಲ್ಲಿ ನರಿ–ತೋಳಗಳೆಲ್ಲ ಸುತ್ತಾಡುತ್ತಿದ್ದವು. ಏನೆಲ್ಲ ಸರಸರ ಸರಿದಾಡುತ್ತಿದ್ದವು. ಯಾರು ಇರಲಿ, ಬಿಡಲಿ ಟಿಟ್ಟಿಭ ಹಕ್ಕಿಗಳು ಟಂವ್... ಟಂವ್ ಎಂದು ಜನರನ್ನು ಪ್ರಾಣಿಗಳನ್ನು ಸ್ವಾಗತಿಸುತ್ತಿದ್ದವು. ಅವು ಜನರನ್ನು ನೋಡಿ ಟಂವ್ ಟಂವ್ ಮಾಡುತ್ತ ಜನರ ತಲೆಯ ಮೇಲಿಂದ ಹಾದು ಹೋಗುತ್ತಿದ್ದವು. ಕೆರೆಯ ಮೇಲೆ ಬಾಗಿ ನಿಂತ ಗುಡ್ಡ ತನ್ನ ಬದಲಾಗುತ್ತಿರುವ ಸ್ವರೂಪವನ್ನು ಕೆರೆಯಲ್ಲಿ ಬೀರುತ್ತ ನಿಂತಿತ್ತು.

ಕೆರೆಯ ಕೆಳಬದಿಯ ಮೇರೆ ಕಿರಿಯಲವಾಗಿತ್ತು. ಅದರ ಪಡುವಣ ದಿಶೆಯಿಂದ ಒಂದು ಹಳ್ಳ ಹರಿದು ಊರಿನತ್ತ ಹೋಗುತ್ತಿತ್ತು. ಆ ಹಳ್ಳದ ನೀರು ಮಾಘ ಮಾಸದಲ್ಲಿ

ತಳಮಟ್ಟಕ್ಕಿಳಿಯುತ್ತಿತ್ತು. ಆಗ ಕುಂಬಾರರು ಮಾತ್ರ ಕೆರೆಗೆ ಬಂದು ಹೋಗುತ್ತಿದ್ದರು. ಕೆರೆ ಒಣಗಿದ ಕೂಡಲೆ ರೈತರು, ಅವರ ಸಾಕಿದ ದನಗಳನ್ನು ಹೊಡೆದುಕೊಂಡು, ಮನೆಬಿಟ್ಟು ನೀರಿರುವ ಬೇರೆ ಊರಿಗೆ ಹೊರಟು ಹೋಗುತ್ತಿದ್ದರು. ಕುಂಬಾರರಿಗೆ ಕೆರೆ ಒಣಗಿದ ಕೂಡಲೆ ಮಡಕೆಗೆ ಬೇಕಾಗುವ ಮಣ್ಣು ಸಿಗುತ್ತಿತ್ತು.

ಪುರಸೊ, ಪುರುಸೋನ ಹೆಂಡತಿ, ಅವರ ಮಗಳು ವಿಮಲ, ಅಂತೆಯೆ ಶಿವರಾಮ, ಶಿವರಾಮನ ಹೆಂಡತಿ ಆಬೋಲೆ, ಎಲ್ಲರೂ ಕೆರೆಗೆ ಬಂದಿದ್ದರು. ಮಣ್ಣು ಅಗೆಯಲು ಗುದ್ದಲಿ ಹೊಡೆಯಬೇಕೆನ್ನುವುದರಲ್ಲಿ ಗುಡ್ಡದ ಕಡೆಯಿಂದ ಯಾರೋ ಮಾತಾಡುವ ಸದ್ದು ಕೇಳಿಸಿತು. ಅತ್ತ ನೋಡಿದರೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಅಲ್ಲೊಂದು ಬಿದಿರಿನ ಮೆಳೆ ಅಡ್ಡವಾಗಿ ನಿಂತಿತ್ತು. ಆ ಬಿದಿರಿನ ಹಿಂಡು ಸಣ್ಣದೇನಲ್ಲ. ಕಡಿದರೆ ಕನಿಷ್ಟ ನಾಲ್ಕು ನೂರು ಬಿದಿರುಗಳಾದರೂ ಸಿಗುತ್ತಿತ್ತು. ಅದರ ಸುತ್ತಮುತ್ತ ಮುಳ್ಳಿನ ಕಂಟಿ ಜಾಳಿಗೆಯಂತೆ ಹಬ್ಬಿದ್ದರಿಂದ ಅದರ ಹತ್ತಿರ ಹೋಗಿ ಒಂದು ಎಳೆ ಬಿದಿರು ತರುವುದೂ ಕಠಿಣವಾಗಿತ್ತು. ಮುಳ್ಳಿನ ಜಾಳಿಗೆ ಪ್ರತಿ ವರ್ಷವೂ ಸ್ವಲ್ಪಸ್ವಲ್ಪ ಹಬ್ಬುತ್ತಲೇ ಇತ್ತು. ಯಾರೋ ಮಾತನಾಡಿದ ಸದ್ದು ಕೇಳಿದ ಪುರಸೊ ಮತ್ತು ಶಿವರಾಮ ತಮ್ಮ ತಮ್ಮ ಹೆಂಡತಿಯನ್ನು ಅಲ್ಲೇ ಬಿಟ್ಟು ಮೆಲ್ಲನೆ ಹೆಜ್ಜೆಯಿಡುತ್ತ ಬಿದಿರಿನ ಮೆಳೆಯತ್ತ ಸಾಗಿದರು.

ಅಲ್ಲಿ ಮೂವರು ದೂರ ದೂರ ನಿಂತಿದ್ದರು. ಮೂರು ಕಾಲಿನ ಹಲಿಗೆಯ ಮೇಲ ಒಂದು ಪುಟ್ಟ ಯಂತ್ರವನ್ನಿಟ್ಟಿದ್ದರು. ಒಬ್ಬ ಬಾವುಟ ಹಿಡಿದು ಅನತಿ ದೂರದಲ್ಲಿ ನಿಂತಿದ್ದ.

ಶಿವರಾಮ ಕೇಳಿದ: "ಏನ್ ಮಾಡಾಕ ಹತ್ತೀರಿ. ಏನ್ ನಡೆದೈತಿ?"

"ನಾವು ಕೆರೆಯ ಪರಿಸರದ ಸರ್ವೆ ಮಾಡ್ತಾ ಇದ್ದೀವಿ." ಅವರು ಕನ್ನಡದಲ್ಲಿ ಮಾತಾಡುತ್ತಿದ್ದರು.

"ಯಾಕ ಮಾಡ್ತೀರಪ್ಪ ಸರ್ವೇ?" ಶಿವರಮ ಕೇಳಿದ.

"ಡ್ಯಾಮ ಕಟ್ಟೋದಿದೆ.... ಇಲ್ಲಿ."

ಅವನನ್ನು ನೋಡಿದರೆ ಅವನೊಬ್ಬ ಧಡೂತಿ ಆಸಾಮಿಯಾಗಿದ್ದ. ಕಪ್ಪಾಗಿದ್ದ. ಎಂದೂ ಕೈಯಲ್ಲಿ ಪೆನ್ನು ಹಿಡಿದಂತಿರಲಿಲ್ಲ. ಅವನ ಕನ್ನಡವೂ ಅಷ್ಟಕಷ್ಟೆ.... ಅಷ್ಟರಲ್ಲಿ ಬಾವುಟ ಹಿಡಿಯುವವನು ಅಲ್ಲಿಗೆ ಬಂದ. ಅವನು ಕೊಂಕಣಿಗನಾಗಿದ್ದ. ಆತ ಹೇಳಿದ. "ನಿಮಗೆ ಗೊತ್ತಿಲ್ಲವೆ? ಕೆರೆಯ ಕೆಳಗೆ ದೊಡ್ಡ ಒಡ್ಡು ಕಟ್ಟೋದಿದೆ. ಆಗ ಕೆರೆಯ ನೀರು ಮೇಲೆ ಹೋಗುತ್ತದೆ. ಕೆರೆ ಮೇ ತಿಂಗಳಲ್ಲಿ ಕೂಡ ತುಂಬಿರುತ್ತದೆ."

"ಅಂದರೆ ಕೆರೆ ಯಾವಾಗಲೂ ಬತ್ತೊದಿಲ್ಲವೆ?"

–ಪುರುಶ್ಯಾ ಹೆದರುತ್ತಲೇ ಕೇಳಿದ.

"ಮತ್ತೆ ಒಡ್ಡು ಕಟ್ಟಿ ಏನುಪಯೋಗ? ಅದರಿಂದ ಬೇಸಿಗೆ ಕಾಲದಲ್ಲಿ ಕೆರೆಯ ಕೆಳಗಿನ ಜಮೀನು ಹಸಿಯಾಗಿರುತ್ತದೆ."

"ಈ ಕೆಲ್ಸ ಯಾವಾಗ ಮುಗೀತೈತಿ?"

"ಹೇಳೋಕ್ಕಾಗಲ್ಲ. ಸರಕಾರಿ ಕೆಲಸ. ಬೇಗ ಮುಗಿಯುತ್ತೆ."

ಶಿವರಾಮ ಮುಖ ಬಾಡಿಸಿಕೊಂಡು ಹೇಳಿದ. "ನಾವ್ ಕುಂಬಾರ ಮಂದಿ. ನಮಗೆ ಕೆರ್ಯಾಗಿನ ಮಣ್ಣ ಬಂಗಾರ. ಈ ಮಣ್ಣು ಸಿಗದಿದ್ರ ನಾವ್ ಮಣ್ಣ ತಿನ್ನಬೇಕಾಗತ್ತೈತಿ. ತಿಗರಿಯ ಮ್ಯಾಲಿ ನಮ್ಮ ಮಾಂಸ ಮೆತ್ತಿ ಗಡಗಿ ಮಾಡಬೇಕೇನು?" ಅವನು ಉಗುಳು ನುಂಗಿದ. "ಇಷ್ಟು ವರ್ಷ ಕೇಳಕೋತ ಬಂದಿದ್ವಿ. ಈಗ ಎದಿಮ್ಯಾಗ ಬಂದ ಕೂಡುದೈತಿ."

"ನೀವು ಮೊದಲೇ ನಿಮ್ಮ ಶಾಸಕರಿಗೆ, ಮಂತ್ರಿಗಳಿಗೆ ಹೇಳಬೇಕಿತ್ತು."

"ಕುಂಬಾರರ ಮಾತು ಯಾರ್ ಕೇಳತಾರ ಸಾಹೇಬ್ರ. ನಾವು ಸಣ್ಣ ಮಂದಿ. ಮಣ್ಣಿನ ಮುದ್ದೆಯಂತೆ ಯಾರ ಬೇಕಾದರೂ ತುಳಿಯಬಹುದು. ಅಡಚಬಹುದು."

"ಈಗ ಏನು ಮಾಡೋಕ್ಕೂ ಆಗೋದಿಲ್ಲ. ಆಗೋದಿಲ್ಲ" ಎಂದು ಅವನು ಬಾವುಟ ಹಿಡಿದು ಹೊರಟು ಹೋದ. ಶಿವರಾಮ ಮತ್ತು ಪುರುಸೊ ಭಾರವಾದ ಹೆಜ್ಜೆಗಳಿಂದ ಕೆರೆಯ ಬಳಿ ಬಂದರು. ಕೆರೆ ಒಣಗಿ ಮಣ್ಣಿಗೆ ಬಿರುಕು ಬಿಟ್ಟಿತ್ತು. ಒಣಗಿದ ಹೆಂಟೆಯಂತಹ ಕಪ್ಪು ಮಣ್ಣು. ಇಂಥ ಮಣ್ಣೇ ಮಡಕೆ ಮಾಡಲು ಬೇಕಾಗುತ್ತಿತ್ತು. ಆ ಮಣ್ಣನ್ನು ಒಣಗಿಸಿ, ಒಡಿದು ಗುಡ್ಡದ ಕೆಂಪು ಮಣ್ಣು ತಂದು ಸೇರಿಸಿ ಹದ ಮಾಡಿಕೊಳ್ಳಬೇಕಿತ್ತು. ಅದನ್ನು ನೀರಿನಲ್ಲಿ ನೆನೆಸಿ, ಕಲಿಸಿ, ಉಜ್ಜಿಸಿದಾಗ ಬೆಣ್ಣೆಯಂತಾಗುತ್ತಿತ್ತು. ಅದನ್ನು ತಿಗರಿಯ ಮೇಲೆ ಲಿಂಗ ನಿಲ್ಲಿಸಿದಂತೆ ನಿಲ್ಲಿಸಿ ಮಣ್ಣಿನ ಬೇರೆ ಬೇರೆ ಆಕೃತಿ ರೂಪಿಸಬಹುದಿತ್ತು.

ಅವರು ತಮ್ಮ ಬಲಹೀನ ಕೈಗಳಿಂದ ಹಾರೆ, ಗುದ್ದಲಿಗಳಿಂದ ಮಣ್ಣು ತೆಗೆದು ಮಕರಿಯಲ್ಲಿ ತುಂಬಿ ತಮ್ಮ ತಮ್ಮ ಹೆಂಡತಿಯರ ತಲೆಯ ಮೇಲಿಟ್ಟರು. ಅನಂತರ ತಾವೂ ಮಕರಿಗಳನ್ನು ತುಂಬಿಕೊಂಡು ಪರಸ್ಪರ ಆಧಾರ ಪಡೆದು ತಲೆಯ ಮೇಲಿಟ್ಟುಕೊಂಡರು. ಮಕರಿಯಲ್ಲಿ ಗುದ್ದಲಿ ಒಗೆದು ಹೆಗಲ ಮೇಲೆ ಹಾರೆಯಿಟ್ಟುಕೊಂಡರು. "ಶಿವರಾಮ ಕೆರೆಯಾಗ ವರ್ಸವಿಡೀ ನೀರು ತುಂಬಿದ್ರೆ ನಾವೆಲ್ಲಿ ಹೋಗೋದೋಯಪ್ಪಾ."

"ಹೋಗೋದಾದ್ರೂ ಎಲ್ಲಿ... ಹೆಂಡಿರು ಮಕ್ಕಳನ್ನು ಕರ್ಕೊಂಬಂದು ಕೆರ್ಯಾಗ ಹಾರೂದು."

"ಮತ್ತ ಬ್ಯಾರಿ ಊರಿಗೇನಾದರೂ...."

"ಮಣ್ಣು ಇರಬೇಕಲ್ಲಪ್ಪ. ಮತ್ತ ಪೂರಾ ಕೇರಿ ಎತ್ಕೊಂಡು ಎಲ್ಲಂತ ಹೋಗೋದು? ಯಾರ ಹೊಟ್ಟಿ ಮ್ಯಾಗ ಕಾಲ ಹಾಕಾಕ. ಅದರಾಗೂ ಎಲ್ಲಾ ಕಡೀನೂ ಕುಂಬಾರರು ಹಣ್ಣಾಗ್ಯಾರ..." ಶಿವರಾಮನ ಮುಂದಿನ ಮಾತುಗಳು ಹಸಿಯಾದ ಗಂಟಲಲ್ಲಿ ಸಿಕ್ಕುಕೊಂಡವು.

ಹೆಣ್ಣು ಮಕ್ಕಳೇ ಸುದ್ದಿಯನ್ನು ಕೇರಿಯಲ್ಲೆಲ್ಲ ಹರಡಿದರು. ಎಲ್ಲರೂ ಗಾಬರಿಯಾದರು. ಕೆರೆಗೆ ನೀರು ಬಂದು ಸೇರಿ, ತುಳುಕಿ ತಮ್ಮ ವಸತಿಯನ್ನೇ ತೊಳೆದುಕೊಂಡು ಹೋದೀತು ಎಂದು ಅವರಿಗೆ ಅನಿಸಿತು.

ಮುಸ್ಸಂಜೆಯಲ್ಲಿ ಕೆಲವರು ಹೆಂಡ ಕುಡಿದು ಬಂದರು. ಶಂಕರ ಮೀನು ತರುತ್ತೇನೆಂದು ಮಾಜಾಳಿ ಬಾಜಾರಿಗೆ ಹೋದವನು ಬರುವಾಗಲೇ ಸಾಕಷ್ಟು ಕುಡಿದು ಬಂದಿದ್ದ. ಮೀನು ಮನೆಯ ಹೊಸ್ತಿಲ ಬಳಿ ತಂದೊಗೆದು ಅವನು ನೇರವಾಗಿ ಆವಿಗೆ ಇರುವ ಸ್ಥಳಕ್ಕೆ ಬಂದು ದೊಡ್ಡ ದೊಡ್ಡಕೆ ಮಾತಾಡತೊಡಗಿದ. "ನಿಮ್ಮ ಕೈಯಾಗ ಮಣ್ಣು

ಬಡಿಯುವ ಪೆಟಣೆ ಐತಲ್ಲ. ಕೆರೆಯ ಒಡ್ಡಿನ ಮ್ಯಾಗ ಮಣ್ಣಿನ ಟ್ರಕ್ ತಂದ ಹಾಕಿದ್ರ ಅವರ ತಲಿ ಒಡೀರಿ. ಟ್ರಕ್ ಕೆರೆಯ ದಂಡೆ ಮ್ಯಾಗಿಂದ ದೂಡಿ ಕೆಳಗೆ ಒಗೀರಿ. ಈ ಶತಕಂಜೂಸ್ ಭೂಮಾಲಿಕರು ಬತ್ತ ಬೆಳೆಸ್ತಾರ, ಮೂರು ಮೂರು ಬೆಳಿ ತೆಗೀತಾರ. ತೆಂಗಿನ ಮರ ಬೆಳಸ್ತಾರ... ಮತ್ತ ನಮ್ಮ ಬಾಯಾಗ ಮಣ್ಣು. ಹಾಂಗಾಗಾಕ ಬಿಡೂದಿಲ್ಲ... ಬಿಡಾಂಗಿಲ್ಲ ನೆತ್ತರ ಓಕಳಿಯಾಗ್ಲಿ."

ಗೋಪಾಳ ದೂರದಲ್ಲಿ ನಿಂತು ಕೇಳುತ್ತಿದ್ದ. ಮುಂದೆ ಬರುತ್ತ ಅವನು "ಸರಾಯಿ ನಶೆದಾಗ ನಡದಾವ ನಿನ್ನ ಮಾತುಗಳು. ಕೇರಿಗೆ ಪಂಚಾಯತಿಯ ಕಾರಕೂನ ಬಂದ್ರ ನೀ ಒಲೀ ಮುಂದ ಅಡಗಿ ಕುಂತಕೋತಿ. ಸತ್ತಿ ನೀ ಟ್ರಕ್ ದೂಡಿ ಒಗಿಯುವಂವ."

"ಗೋಪಾಳಾ ನೀ ನನಗ ಹೇಳಬ್ಯಾಡ. ನನ್ನ ಹತ್ರ ಆಟ ಆಡಬ್ಯಾಡಾ. ನನಗೆ ಗೊತ್ತೈತಿ ನೀಯೆಷ್ಟು ಹುಲಿ ಹೊಡೆದಿದೀ ಅಂತ. ಒಂದ ಸಾರಿ ಒಬ್ಬ ರೈತನ ಹೆಂಡತಿ ಕೈಯಾಗ ಮಚ್ಚಿ ತಗೊಂಡು ನಿನ್ನ ಹಿಂದ ಬಿದ್ದಿದ್ದಳಲ್ಲ. ನೆನಪೈತ್ತೇನು? ನೀ ಓಡತಾ ಬಂದು ನಿನ್ನ ಹೇಂಡ್ತಿ ಸೀರಿ ಹಿಂದ ನಿಂತಕೊಂಡಿದ್ದೀ.

"ನಿನ್ನವ್ವನ... ಶಂಕರಾ ಬಾಯಿಗೆ ಬಂದದ್ದು ಮಾತಾಡ್ ಬ್ಯಾಡಾ. ನಿನ್ನ ದವಡಿ ತೆಗೆದು ಕೈಯಾಗ ಇಡ್ತೀನಿ ನೋಡು."

"ನಾ ಮಾತಾಡೇ ಆಡತೀನಿ. ನೀ ಬೇಕಾದರ ಫೌಜದಾರನಿಗೆ ಕರ್ಕೊಂಬಾ. ನಿನ್ನ ಹಿಡಿದು ಎಲ್ಲಾರ್ನು ನಾನು ಖರೀದಿ ಮಾಡೇನು. ಭೂಮಿ ಒಡೆಯನ ಎಲ್ಲಾ ಜಮೀನು ಖರೀದಿ ಮಾಡಿ ಏಳು ಜೊತೆ ಎತ್ತು ಹೂಡಾಕ ಹಾಕ್ತೀನಿ. ನಿನ್ನ ಹಂಗ ಒಲಿಮ್ಯಾಗ ನೀರಿಟ್ಟು ಅಕ್ಕಿಗಾಗಿ ಯಾರ ಮನಿ ಬಾಗಿಲಲ್ಲಿ ಹೋಗಿ ನಿಲ್ಲೂ ಮನಶ್ಯಾ ನಾನಲ್ಲ."

ಈಗ ಅಲ್ಲಿ ದೊಡ್ಡ ಗದ್ದಲ ಶುರುವಾಯಿತು. ಇಬ್ಬರೂ ತೋಳೇರಿಸಿದರು. ಕೆಲವರು ಸರಾಯಿ ಕುಡಿದು ಬಂದಿದ್ದೇನೊ ನಿಜ. ಆದರೆ ಅವರು ಸೀತಾಯಿಯ ಅಂಗಳದ ಕೊನೆಯಲ್ಲಿ ಅಳುತ್ತ ಕುಳಿತಂತೆ ಕೂತಿದ್ದರು. ತಮ್ಮ ತಮ್ಮ ದುಃಖ ಹಂಚಿಕೊಳ್ಳುತ್ತ ಗುಸು ಗುಸು ಮಾತಾಡುತ್ತಿದ್ದರು. ಈಗ ಅವರೂ ಎದ್ದರು. ಈಗ ಅವರು ಕುಡಿದ ಸರಾಯಿ ತಲೆಗೇರಿತ್ತು. ಆ ಗದ್ದಲದಲ್ಲಿ ಇವರೂ ಸೇರಿಕೊಂಡರು. ಸುಮ್ಮನೆ ಒಬ್ಬರ ಪಕ್ಷ ಹಿಡಿದು ಕೂಗಾಡತೊಡಗಿದರು. ಒಬ್ಬ ಗಟ್ಟಿಯಾಗಿ ಕೂಗುತ್ತಿದ್ದ. "ನಾವು ಸೀದಾ ಬೆಂಗಳೂರಿಗೆ ಹೋಗ್‌ತೀವಿ. ಮಂತ್ರಿಯ ಕುತ್ತಿಗೆ ಹಿಡಿದ್ ಕೇಳತೀವಿ. ಮುಂದಿನ ಚುನಾವಣ್ಯಾಗ ಓಟ ಕೇಳಾಕ ಬಂದ್ರ ಬಡಿಗೆ ಹಿಡಿದು ಓಡಸ್ತೀವಿ ಅಂತ ಹೇಳತೇವಿ"

ಈಗ ಸೀತವ್ವನೂ ಆ ಗದ್ದಲದಲ್ಲಿ ಸೇರಿಕೊಂಡಳು. "ನೀವ್ ಚುನಾವಣೆಗೆ ಮತಾ ಹಾಕಾಕ ಬಾ ಅಂತಂದ್ರ ನಮಗೆ ಸಹಿ ಮಾಡಾಕ ಬರೂದಿಲ್ಲ. ಹೆಬ್ಬೊಟ್ಟ ಒತ್ತಬೇಕಾಗತೈತಿ ಅಂತ ಓಟ ಹಾಕಾಕ ಬರಾಂಗಿಲ್ಲ. ಮತ್ತ ನೀವ್ ಬೆಂಗಳೂರಿಗೆ ಹೋಗೂ ಮಾತಾಡ್ತೀರೇನು?"

"ಮತ್ತ. ನಾಳೆ ನಮ್ಮ ಕೇರಿ ನೀರಾಗ ಮುಳುಗಿ ಹ್ವಾದ್ರ ನಾವೇನ ಮಾಡೂದವ್ವ?"

"ಏನಾಗ್ತದ ಆಗಲಿ... ಈಗ್ಲೆ ಏನ್ ಎದಿಮ್ಯಾಗ ಬಂದ ಬಿದ್ದಿಲ್ಲ... ಸರಕಾರಿ ಕೆಲಸ ಐತಿ... ಇನ್ನ ಹನ್ನೆರಡು ವರ್ಸ ಕಾಯಬೇಕು."

ಕುಡಿದ ಸರಾಯಿ ಇಳಿದಿತ್ತೊ, ಚಿಂತೆ ಮನಸ್ಸಿನ ತಳಕ್ಕೆ ಹೋಗಿ ಮುಟ್ಟಿತ್ತೊ, ಎಲ್ಲರೂ ಮರು ಮಾತಾಡದೆ ತಮ್ಮ ತಮ್ಮ ಮನೆಗೆ ಹೊರಟು ಹೋದರು.

* * *

ಅವರು ಜಾತಿಯಿಂದ ಕುಂಬಾರರಾಗಿರಲಿಲ್ಲ. ಅದೊಂದು ಅವರ ಉದ್ಯೋಗ ವಾಗಿತ್ತು. ಆ ಉದ್ಯೋಗದಿಂದಲೇ ಅವರ ಜಾತಿ ನಿರ್ಧಾರವಾಗಿತ್ತು. ಇದೇ ಮಾಜಾಳಿ ಊರಿನ ಕುಂಬಾರವಾಡೆಯಲ್ಲಿ ಮೂರು ಜಾತಿಯ ಕುಂಬಾರರಿದ್ದರು. ಈವತ್ತು ಅವರು ತಮ್ಮ ಮೂಲಜಾತಿ, ಮತ ಮರೆತು ಒಂದಾಗಿದ್ದಾರೆ. ಈಗ ಮದುವೆ ಸಂಬಂಧ, ಊಟಗೀಟ ಎಲ್ಲಾ ಮಾಡುತ್ತಾರೆ. ಆದರೆ ಇತ್ತೀಚಿನವರೆಗೆ ತಮ್ಮ ಜಾತಿಯ ತಂಬೂರಿ ಬಾರಿಸುತ್ತಿದ್ದರು. ತಮ್ಮ ಪೂರ್ವಜರ ಹಿರಿಮೆ ಗರಿಮೆ ಹೇಳುತ್ತಿದ್ದರು.

ಇಲ್ಲಿ ಭಗತ್ ಎಂಬ ಅಡ್ಡ ಹೆಸರಿನ ಒಂದು ಜಾತಿ ಇತ್ತು. ಅವರು ತಮ್ಮನ್ನು ಕ್ಷತ್ರಿಯ ಕುಂಬಾರ ಅಂತ ಹೇಳಿಕೊಳ್ಳುತ್ತಿದ್ದರು. ಈ ಮೊದಲು ಅವರು ಕಾಣಕೋಣದ ಪಾಳೊಳೆ ಪರಿಸರದಲ್ಲಿ ಇರುತ್ತಿದ್ದರು. ಕಾಣಕೋಣದ ಮಲ್ಲಿಕಾರ್ಜುನ ಅವರ ಕುಲದೇವರಾಗಿತ್ತು. ಆದರೆ ನೀವು ಈ ಕುಂಬಾರ ಧಂದೆ ಯಾವಾಗ ಸ್ವೀಕರಿಸಿದಿರಿ, ಮತ್ತು ನೀವಿಲ್ಲಿ ಹೇಗೆ, ಯಾವಾಗ ಬಂದಿರಿ ಅಂತ ಕೇಳಿದರೆ ಯಾರಿಗೂ ಸರಿಯಾಗಿ ಉತ್ತರ ಕೊಡಲು ಬರುತ್ತಿರಲಿಲ್ಲ. ಆದರೆ ಅವರು ಒಂದು ಮಾತನ್ನು ಮಾತ್ರ ಹೇಳುತ್ತಿದ್ದರು. ಒಮ್ಮೆ ಅವರ ಮನೆಯಲ್ಲೊಬ್ಬ ಅಮಟೆಕಾಯಿ ಮರದಿಂದ ಕೆಳಗೆ ಬಿದ್ದು ಸತ್ತು ಹೋದ. ಅಮಟೆ ಮರದಿಂದ ಬಿದ್ದು ಸಾಯುವುದು ಅವಲಕ್ಷಣವೆಂದು ಆ ಜನ ಭಾವಿಸುತ್ತಿದ್ದರು. ಹನ್ನೊಂದನೆಯ ದಿನ ಕಾಗೆಗೆ ಪಿಂಡ ಹಾಕಿದಾಗ ಒಂದು ಕಾಗೆ ಬಂದು ಪಿಂಡದ ಉಂಡೆ ಕಾಲಲ್ಲಿ ಹಿಡಿದುಕೊಂಡು ನೇರವಾಗಿ ಹೋಗಿ ಊರಿನ ಹಿರಿಯನ ಮನೆಯ ಮೇಲೆ ಕುಳಿತುಕೊಂಡಿತು. ಎಲ್ಲರೂ ಗಾಬರಿಯಾದರು ಪುರೋಹಿತರಲ್ಲಿ ಹೋಗಿ ಪ್ರಶ್ನೆ ಕೇಳಿದಾಗ "ಅಮಟೆ ಮರದಿಂದ ಬಿದ್ದು ಸಾಯುವುದು ಅನಿಷ್ಟಕಾರಕ. ಅದು ಊರಿಗೇ ಅಪಾಯವನ್ನುಂಟು ಮಾಡುತ್ತದೆ. ಇನ್ನು ಮುಂದೆ ಮೊದಲ ಸಾವು ಊರ ಹಿರಿಯನದಾಗುತ್ತದೆ. ಈಗ ಸತ್ತವನ ಅಸ್ಥಿ ಸಂಗ್ರಹಿಸಿಕೊಂಡು ಮನೆ, ಊರು ಬಿಟ್ಟು ಹೊರಡಬೇಕು" ಎಂದು ಹೇಳಿದರು.

ಊರಿನಿಂದ ಓಡಿಸಲ್ಪಟ್ಟ ಈ ಜನ ಅಲ್ಲಿ ಇಲ್ಲಿ ಎದ್ದು ಬಿದ್ದು ನಡೆಯುತ್ತ ಈ ಊರಿಗೆ ಬಂದು ಮುಟ್ಟಿದ್ದರು. ಬರುವ ದಾರಿಯಲ್ಲಿ ಎಲ್ಲೋ ಕೆಲವು ದಿನ ವಸತಿ ಮಾಡಿದಾಗ ಅವರು ಕುಂಬಾರಿಕೆ ಕಲಿತಿರಬೇಕು.

ಮತ್ತೊಂದು ಕುಟುಂಬವಿತ್ತು. ಅವರು ಸುಕೇರಕರ್ ಅಂತ ಅಡ್ಡ ಹೆಸರು ಹಚ್ಚುತ್ತಿದ್ದರು. ಅವರು ತಮ್ಮನ್ನು ತಾವು ಬ್ರಾಹ್ಮಣರೆನ್ನುತ್ತಿದ್ದರು. ಹಿಂದೊಮ್ಮೆ ಊರಲ್ಲಿ ಕ್ಷಾಮ ಬಿದ್ದಾಗ ದೊರೆ ಬಡವರಿಗಾಗಿ ಅನ್ನಛತ್ರ ಕಟ್ಟಿಸಿ ಊಟದ ವ್ಯವಸ್ಥೆ ಮಾಡಿದ. ಆ ಅನ್ನ ಛತ್ರದಲ್ಲಿ ಹದಿನೆಂಟು ಕೆಳಜಾತಿಯ ಜನ ಹೋಗಿ ಊಟ ಮಾಡುತ್ತಿದ್ದರು. ಒಂದು ದಿನ ಈ ಬ್ರಾಹ್ಮಣನಿಗೆ ಹಸಿವು ತಡೆಯಲಾಗದೆ ಮನೆಯವರನ್ನೆಲ್ಲ ಕರೆದುಕೊಂಡು ಅನ್ನಛತ್ರಕ್ಕೆ ಹೋಗಿ ಕೆಳಜಾತಿಯವರೊಡನೆ ಕುಳಿತು ಊಟ ಮಾಡಿದ. ಈ ಸುದ್ದಿ ಬ್ರಾಹ್ಮಣ

ಸಮಾಜಕ್ಕೆ ತಿಳಿದಾಗ ಅವರು ಆ ಮನೆತನದ ಮೇಲೆ ಬಹಿಷ್ಕಾರ ಹಾಕಿದರು. ಊಟ-ತಿಂಡಿ ಮಾತುಕತೆಯೆಲ್ಲ ನಿಂತು ಹೋಯಿತು. ಇವರು ಕಣ್ಣಿಗೆ ಬಿದ್ದರೆ ಅವರು ಪಚಕ್ ಅಂತ ಉಗುಳುತ್ತಿದ್ದರು. ಪೂರ್ವಜರಿಗೆ ಬೇಸರ ಬಂತು. ಅವರು ಊರ ಹೊರಗಿನ ಕುಂಬಾರ ಕೇರಿಯಲ್ಲಿ ಆಶ್ರಯ ಪಡೆದರು. ಅಂದಿನ ದಿನಗಳಲ್ಲಿ ಕುಂಬಾರನನ್ನು ಕೆಳಜಾತಿಯವನೆಂದು ಗಣಿಸುತ್ತಿದ್ದರು ಅವನನ್ನು ಭ್ರಷ್ಟ ಅಂದರೆ ಅಸ್ಪೃಶ್ಯ ಎಂದು ಭಾವಿಸುತ್ತಿರಲಿಲ್ಲ. ಸಮಯ ಬಂದರೆ ಅವರ ಕೈಯಿಂದ ಏನಾದರೂ ತಿನ್ನಲೂ ಹಿಂಜರಿಯುತ್ತಿರಲಿಲ್ಲ. ಬಹುಶಃ ಅವರು ಅಲ್ಲಿಯೇ ಕುಂಬಾರಿಕೆ ಕಲಿತಿರಬೇಕು. ಈಗಂತೂ ಅವರು ಪೂರ್ತಿಯಾಗಿ ಬ್ರಾಹ್ಮಣಿಕೆ ಮರೆತು ಬಿಟ್ಟಿದ್ದಾರೆ. ಅವರೀಗ ಕೊಂಕಣಿ ಕುಂಬಾರರ ಜೊತೆಗೆ ರಕ್ತಸಂಬಂಧ ಬೆಳೆಸುತ್ತಾರೆ. ಆದರೂ ಅವರ ಗೌರವರ್ಣ ಎದ್ದು ಕಾಣುತ್ತದೆ.

ಮೂರನೆಯ ಮನೆತನ ದೇವಳಿ ಕುಂಬಾರರದು. ಇಲ್ಲಿ ಅವರ ಮೂರು ಮನೆಗಳಿದ್ದವು. ಅವರು ಹಿಂದೆ ಎಲ್ಲೊ ಗೋವೆಯ ದೇವಾಲಯದಲ್ಲಿ ನೌಕರಿಗಿದ್ದರು. ಅವರ ಪೂರ್ವಜರ ತಾಯಿ ದೇವಾಲಯದಲ್ಲಿ ದೇವದಾಸಿಯಾಗಿದ್ದಳು. ಅವಳು ದೇವಳದಲ್ಲಿ ಎಲ್ಲ ರೀತಿಯ ಕೆಲಸ ಮಾಡುತ್ತಿದ್ದಳು. ದೇವಾಲಯದಲ್ಲಿ ಕಸ ಗುಡಿಸುತ್ತಿದ್ದಳು. ದೀಪ, ಪಂಚಪಾತ್ರೆ, ಲಕಲಕ ಹೊಳೆಯುವಂತೆ ಉಜ್ಜುತ್ತಿದ್ದಳು. ರಾತ್ರೆಯಾದ ಮೇಲೆ ಶೇಟ, ಶೆಣ್ವೈಯರಿಗೆ ಮನೆಯೊಳಗೆ ಸೇರಿಸಿಕೊಳ್ಳುತ್ತಿದ್ದಳು. ಅವಳ ತಂಗಿಯೂ ದೇವತೆಗೆ ಉಡಿ ತುಂಬಿ ದೇವದಾಸಿಯಾಗಿದ್ದಳು. ಅವರ ಪೂರ್ವಜ ಇದನ್ನೆಲ್ಲ ನೋಡಿ ಬೇಜಾರು ಪಟ್ಟ. ಕೆಲವು ದಿನ ಅವನು ಹುಚ್ಚನಂತೆ ದೇವಾಲಯದ ಆವರಣದಲ್ಲಿ ಓಡಾಡುತ್ತಿದ್ದ. ದೇವಾಲಯದ ಜಗಲಿಯ ಮೇಲೆ ಮಲಗುತ್ತಿದ್ದ. ಒಂದು ದಿನ ಅದನ್ನೆಲ್ಲ ಬಿಟ್ಟು ಆತ ಕುಂಬಾರವಾಡೆಗೆ ಬಂದು ನಿಂತ. ಅಲ್ಲಿಯೇ ಮನೆ ಮಾಡಿದ. ಅಲ್ಲಿಯೇ ಆತ ಕುಂಬಾರಿಕೆ ಕಲಿತ. ತಿಗರಿಯ ಮೇಲೆ ಕುಳಿತು ಮಣ್ಣಿನ ಮುದ್ದೆಯಿಂದ ಗಡಿಗೆ ತಯಾರಿಸುವ ಕಲೆಯಲ್ಲಿ ನುರಿತವನಾಗಿದ್ದ. ದೇವರ ಹರಕೆ ಕೊಡುವುದನ್ನು ದೇವರಿಗೆ ಪ್ರತಿವರ್ಷ ಕೊಡುವ ಮಾನಸ್ಮಾನ ಇತ್ಯಾದಿ ತಿಳಿದುಕೊಂಡ.

ಒಂದು ದಿನ ಅವನು ಎದ್ದು ತಾಯಿಯ ಬಳಿ ಹೋದ. "ಅಮ್ಮಾ ಇನ್ನು ಇಲ್ಲಿ ಇರೋದು ತರವಲ್ಲ. ನಮ್ಮನ್ನು ಜನ ಹೀನಾಯವಾಗಿ ನೋಡ್ತಾರೆ. ಗಂಡಸರಿಗೆ ಪುರುಷಾರ್ಥವಿಲ್ಲ ಅಂತಾರೆ. ಎಲ್ಲೋ ದೂರ ದೂರ ಹೊರಟು ಹೋಗೋಣ. ಹೊಟ್ಟೆ ತುಂಬುವ ವಿದ್ಯೆ ನಾನು ಕಲಿತಿದ್ದೇನೆ. ನಾನು ನಿಮ್ಮನ್ನೆಲ್ಲ ಸಾಕ್ತೇನೆ. ತಂಗಿಯನ್ನೂ ತಗೊಂಡು ಹೋಗೋಣ."

ತಾಯಿ ಮಗನೊಡನೆ ಹೊರಡಲು ತಕ್ಷಣ ತಯಾರಾದಳು. ಆದರೆ ತಂಗಿ ನಾನು ಬರುವುದಿಲ್ಲ ಎನ್ನತೊಡಗಿದಳು. ಆ ದಿನ ಅವಳ ಮನೆಯಲ್ಲಿ ಒಬ್ಬ ಬ್ರಾಹ್ಮಣ ಇದ್ದ. ಇಬ್ಬರೂ ಪೂರ್ವಜನೊಡನೆ ಜಗಳಕ್ಕೆ ನಿಂತರು. ಅವನು ತಂಗಿಯ ಹೊಕ್ಕುಳ ಕೆಳಗೆ ಒಂದ ಒದೆ ಕೊಟ್ಟು, ಅವಳು ನೆಲಕ್ಕೆ ಬಿದ್ದಳು. ಅವನು ತಾಯಿಯೊಂದಿಗೆ ಊರು ಬಿಟ್ಟು ಹೊರಟು ಬಿಟ್ಟ. ತಾಯಿ ಅವನೊಡನೆ ಬಹಳ ವರ್ಷ ಇದ್ದಳು. ಅವಳು ಅನಂತರ ಕೊರಳಲ್ಲಿ ತುಳಸೀಮಾಲೆ ಹಾಕಿಕೊಂಡು, ಕೈಯಲ್ಲಿ ತಾಳ ಹಿಡಿದುಕೊಂಡು ಅಲ್ಲಲ್ಲಿ ಹರಿಕಥೆ

ಹೇಳುತ್ತಿದ್ದಳು ಎಂದು ಹೇಳುತ್ತಾರೆ ಜನ. ಅವಳ ಕೀರ್ತನೆ ಕೇಳಲು ಜನ ಮುರುಕುತ್ತಿದ್ದರು.

ಕುಂಬಾರವಾಡೆಯ ಪಡುವಣದಲ್ಲಿ ಸುರಗಿ ಮರದ ಆಚೆಗೆ ಚಿಕ್ಕದೊಂದು ಗುಮ್ಮಟ ಇದೆ. ಅದಕ್ಕೆ ಗುಣಾಯಿಯ ಗುಮ್ಮಟ ಅನ್ನುತ್ತಾರೆ. ಕುಂಬಾರರ ಪತ್ನಿಯರು ಶ್ರಾವಣದಲ್ಲಿ ಆ ಗುಮ್ಮಟದ ಪೂಜೆ ಮಾಡುತ್ತಾರೆ. ಇವರ ಪೂರ್ವಜಳಾದ ಆ ದೇವದಾಸಿಯ ಹೆಸರು ಗುಣಾಯಿ ಎಂದಿತ್ತು ಎಂದು ಜನ ಹೇಳುತ್ತಿದ್ದಾರೆ.

ಆದರೆ ಈಗ ಅವರಲ್ಲಿ ಜಾತಿಯ ಬಗ್ಗೆ ಗೊಂದಲವಿಲ್ಲ. ಹೊರಗಿನ ಜನರಿಗಂತೂ ಏನೂ ಗೊತ್ತಿಲ್ಲ. ಈಗ ಅವರು ಯಾವ ಜಾತಿಯವರು, ಏನು ಮಾಡುತ್ತಿದ್ದರು ಎನ್ನುವುದನ್ನೆಲ್ಲ ಮರೆತು ಎಲ್ಲರೂ ಒಂದಾಗಿ ಚಂದಾಗಿ ಕೂಡಿ ಬಾಳುವೆ ಮಾಡುತ್ತಿದ್ದಾರೆ. ಅವರಲ್ಲಿ ಜಗಳವಾದರೂ ಜಾತಿಯ ಮಾತು ಬರುವುದಿಲ್ಲ. ಮೊದ ಮೊದಲು ಅವರಲ್ಲಿ ಕೆಲವು ರಕ್ತ ಸಂಬಂಧಗಳಾಗುತ್ತಿದ್ದವು. ಈಗಂತೂ ಅವುಗಳ ಸಂಖ್ಯೆ ಕಡಮೆಯಾಗಿದೆ. ತಮ್ಮ ಮಗ, ಮಗಳಿಗೆ ಹೊರಗಿನಿಂದ ಹೆಣ್ಣು-ಗಂಡು ತರುವುದೇ ಅವರಿಗೆ ಅಪ್ಯಾಯಮಾನವಾಗಿದೆ.

ಅವರು ತಮ್ಮ ಸುಖದುಃಖಗಳನ್ನು ಎಲ್ಲರೂ ಒಂದಾಗಿಯೆ ಒಮ್ಮತದಿಂದ ಅನುಭವಿಸುತ್ತಾರೆ. ಜಡತನ ಅನುಭವಿಸಲು ಸ್ವಲ್ಪ ಬಲ ಬರುತ್ತದೆಯೆಂಬ ಭಾವನೆಯಿಂದ ಅವರು ಹತ್ತಿರ-ಹತ್ತಿರ ಬರುತ್ತಿರುತ್ತಾರೆ. ಆದರೂ ಎಲ್ಲರಲ್ಲಿರುವಂತೆ ಅವರಲ್ಲಿಯೂ ಅವರದೇ ಹುಳುಕು ಕೊಳಕುಗಳಿವೆ. ಹೆಂಡ ಕುಡಿಯುತ್ತಾರೆ. ಜಗಳಾಡುತ್ತಾರೆ. ಒಬ್ಬರಿಗೊಬ್ಬರು ಶಪಿಸುತ್ತಾರೆ. ಮತ್ತೆ ಸ್ವಲ್ಪ ಹೊತ್ತಿನಲ್ಲಿ ಎಲ್ಲರೂ ಒಂದಾಗುತ್ತಾರೆ. ಒಬ್ಬರಿಗೊಬ್ಬರು ಅಪ್ಪಿಕೊಳ್ಳುತ್ತಾರೆ, ಸುಖದುಃಖದ ಸಮಾಚಾರ ಕೇಳುತ್ತಾರೆ. ಸರಕಾರ ಕೆರೆಗೆ ಮೇರೆ ಕಟ್ಟಿ ಕುಂಬಾರರಿಗೆ ಬೇಕಾಗುವ ಮಣ್ಣು ಮುಳುಗಿ ಹೋಗಲಿದೆಯೆಂಬ ಸುದ್ದಿಗಳು ಆಗಾಗ್ಗೆ ಕೇಳಿ ಬರುತ್ತಿರುತ್ತದೆ. ಆ ಸುದ್ದಿ ಕುಂಬಾರರ ಕಿವಿಯ ಮೇಲಿಂದ ಹೋದರೂ ಸಾಕು ಸಾಯಂಕಾಲ ಅವರೆಲ್ಲ ಒಟ್ಟಾಗಿ ಅಳಲು ಕುಂತಂತೆ ಕುಳಿತು ಕೊಳ್ಳುತ್ತಾರೆ. ಮಣ್ಣು ಸಿಗದಿದ್ದರೆ ಹೊಟ್ಟೆಗೆ ತಣ್ಣೀರ ಬಟ್ಟೆ ಸುತ್ತಿಕೊಳ್ಳಬೇಕಾಗುತ್ತದೆಯೆಂದು ಚಿಂತಿಸುತ್ತಾರೆ. ಯಾರಾದರೂ ಕಾಯಿಲೆ ಬಿದ್ದರೆ ಎಲ್ಲರೂ ಹೋಗಿ ಅವರ ಬಾಗಿಲಲ್ಲಿ ಕುಳಿತುಕೊಳ್ಳುತ್ತಾರೆ. ಯಾರ ಮನೆಯಲ್ಲಾದರೂ ಮದುವೆ, ಸಾವು ಘಟಿಸಿದರೆ ತಮ್ಮ ಮನೆಯಲ್ಲಿಯೇ ಘಟಿಸಿತೆಂಬಂತೆ ಎಲ್ಲರೂ ಸೇರುತ್ತಾರೆ.

* * *

**ಸೀ**ತವ್ವನು ಮನೆಯ ಮುಂದಿನ ಮಾವಿನ ಗಿಡದ ನೆರಳಿನಲ್ಲಿ ಕುಳಿತು ಹಣತೆ ಮಾಡುತ್ತಿದ್ದಳು. ಅವಳು ಮೊದಲು ಮಣ್ಣಿನ ಮುದ್ದೆ ಕೈಯಲ್ಲಿಟ್ಟುಕೊಂಡು ಅದುಮಿ ಅದಕ್ಕೆ ಹಣತೆಯ ರೂಪ ಕೊಡುತ್ತಿದ್ದಳು. ಗೋಲಾಕಾರದ ಹಣತೆಯ ಬತ್ತಿ ಇಡುವ ಸ್ಥಳದಲ್ಲಿ ಚುಂಚಿನಂತೆ ಕೊಂಚ ಬಗ್ಗಿಸಿ ಕೈಪಂಚಿಯಂತೆ ಮಾಡುತ್ತಿದ್ದಳು. ಹಣತೆ ಮಾಡುತ್ತಿರುವಾಗ ಅವಳು ಮನಸ್ಸಿನಲ್ಲಿಯೇ ಚಿಂತಿಸುತ್ತಿದ್ದಳು. ಸಾಮಾನ್ಯವಾಗಿ ದೇವಕಾರ್ಯಗಳಿಗೆ ವಿಧವೆಯರನ್ನು ಹತ್ತಿರ ಸೇರಿಸುವುದಿಲ್ಲ. ಆದರೆ ವಿಧವೆಯರು ಮಾಡಿದ ಹಣತೆಗಳು ದೇವಕಾರ್ಯಗಳಿಗೆ, ಪೂಜೆ ಪುರಸ್ಕಾರಗಳಿಗೆ ನಡೆಯುತ್ತದೆ. ವಿಧವೆ

ಸೀತವ್ವಳು ಮಾಡಿದ ಹಣತೆ ಮತ್ತು ವಾಮನ ಭಟ್ಟರ ವಿಧವೆ ತಾಯಿ ಮಾಡಿದ ಹತ್ತಿಯ ಬತ್ತಿಗಳು ದೇವರಿಗೆ ಪಂಚಾರತಿ ಎತ್ತಲು ನಡೆಯುತ್ತವೆ !

ಈ ಯೋಚನೆಯಲ್ಲಿ ಅವಳು ಸ್ವಲ್ಪ ನಕ್ಕಳು. ಅವಳ ಗೌರವರ್ಣದ ಚಹರೆಯ ಗೆರೆಗಳು ಲಕಲಕಿಸಿದವು. ಏನೇ ಆಗಲಿ ನಮ್ಮ ಪೂರ್ವಜರು ಶಾಸ್ತ್ರಕ್ಕಾಗಿಯಾದರೂ ಹಣತೆ ಮಾಡುವ ಕೆಲಸ ವಿಧವೆಯರಿಗಾಗಿ ಕಾದಿರಿಸಿದ್ದು ಒಳ್ಳೆಯದಾಯಿತು ಎಂದು ಮನಸ್ಸಿನಲ್ಲಿಯೇ ಹೇಳಿದಳು. ಇಲ್ಲದಿದ್ದರೆ ತೌಡು ತಿಂದು ಬದುಕುವ ಪರಿಸ್ಥಿತಿ ಬರುತ್ತಿತ್ತು. ನಾನೇನೂ ಹಸಿವೆಯಿಂದ ತೌಡನ್ನಾದರೂ ತಿಂದೇನು ಆದರೆ ವಿಧವೆ ಸೊಸೆ ಮತ್ತು ಅವಳ ಮಕ್ಕಳಿಗೆ ತಂದು ಎಲ್ಲಿಂದ ಹಾಕುವುದು? ವಿಧವೆಯರು ತಿಗರಿಗೆ ಕೈ ಹಚ್ಚುವಂತಿಲ್ಲ. ಮಣ್ಣನ್ನು ಪೆಟಣೆಯಿಂದ ಬಡಿದು ಹದ ಮಾಡುವಂತಿಲ್ಲ. ತಿಗರಿಯನ್ನು ತಿರುಗಿಸಿ ಮಣ್ಣಿಗೆ ಗಡಿಗೆಯ ಆಕಾರ ಕೊಡುವಂತಿಲ್ಲ. ತಿಗರಿಯ ಮೇಲೆ ಮಣ್ಣಿನ ಮುದ್ದೆಯಿಂದ ಗಡಿಗೆಯ ಕುತ್ತಿಗೆ ಮಾಡಿದರೆ ಒಂದು ಮಗುವಿಗೆ ಜನ್ಮ ಕೊಟ್ಟಂತೆಯಂತೆ. ಹೀಗೆ ನಮ್ಮ ಕೈಕಾಲು ಕಟ್ಟಿ ಹಾಕಿದ್ದಾರೆ. ಆದರೂ ನಾವು ಪೂರ್ವಜರು ಹಾಕಿಕೊಟ್ಟ ನೀತಿ ನಿಯಮ ಪಾಲಿಸಿದ್ದೇವೆ. ಸೊಸೆಗೂ ದೇವರು ವಿಧವೆ ಮಾಡಿಟ್ಟಿದ್ದಾನೆ. ಆದ್ದರಿಂದ ಕತ್ತಿಲ್ಲದ ಪಾತ್ರೆಗಳನ್ನಷ್ಟೇ ನಾವು ಮಾಡುವಂತಾಯಿತು.

ಸೀತವ್ವ ದಿಟ್ಟ ಹೆಣ್ಣು ಮಗಳು. ಸಾವಿನ ಮನೆಯಲ್ಲಿ ಮದುವೆಯ ಮನೆಯಲ್ಲಿ ಅವಳಿಲ್ಲದಿದ್ದರೆ ನಡೆಯುತ್ತಿರಲಿಲ್ಲ. ಹೆರಿಗೆ ಮಾಡುವ ದಾಯಿ ಸಮಯಕ್ಕೆ ಸರಿಯಾಗಿ ಬರದಿದ್ದರೆ ಅವಳೇ ಮುಂದಾಗಿ ಹೆರಿಗೆ ಮಾಡಿರುವುದೂ ಉಂಟು. ಅವಳ ಕೈ ಶಾಸ್ತ್ರದ ಹಗ್ಗದಿಂದ ಬಿಗಿಯಲ್ಪಟ್ಟಿದೆ. ಇಲ್ಲದಿದ್ದರೆ ಮಗ ತೀರಿಕೊಂಡ ಬಳಿಕ ಬದಿಗೆ ತೆಗೆದಿಟ್ಟ ತಿಗರಿ ಅವಳು ಕೆಳಗಿಳಿಸಿ ಮಡಕೆ ಮಾಡುತ್ತಿದ್ದಳು. ಮಣ್ಣಿನ ಬೇರೆ ಬೇರೆ ಉತ್ಪನ್ನಗಳನ್ನು ಮಾಡಿ ಆವಿಗೆಯಲ್ಲಿಟ್ಟು ಸುಡುತ್ತಿದ್ದಳು. ಅವಳಿಗೆ ನೆನಪಿದೆ, ಚಿಕ್ಕಂದಿನಲ್ಲಿ ಹುಡುಗಿಯಾಗಿದ್ದಾಗ ತಂದೆಯ ಮುಂದೆ ಕೂತು ತಿಗರಿ ತಿರುಗಿಸುತ್ತಿದ್ದಳು. ಹದ ಮಾಡಿಟ್ಟ ಮಣ್ಣಿನಿಂದ ಪಾತ್ರೆ ಮಾಡುವ ಆಟ ಆಡುತ್ತಿದ್ದಳು.

ಅವಳ ಸೊಸೆ ತಾರಾ ನಿಸ್ತೇಜ ಕಣ್ಣುಗಳಿಂದ ಹೊರಗೆಲ್ಲೊ ನೋಡುತ್ತ ಕೂತಿದ್ದಳು. ಅವಳ ಕೊನೆಯ ಮಗು ತಾಯಿಯ ಮಡಿಲಲ್ಲಿ ತೆಪ್ಪಗೆ ಬಿದ್ದುಕೊಂಡಿತ್ತು. ತಂದೆ ತೀರಿಕೊಂಡಾಗ ಆ ಮಗುವಿಗೆ ಮೂರು ತಿಂಗಳಾಗಿತ್ತು. ಆ ಮಗು ತಾಯಿಯ ಮಡಿಲಿಲ್ಲದೆ, ತಾಯಿಯ ಎದೆಯ ಹಾಲಿಲ್ಲದೆಯೆ ಬೆಳೆಯಬೇಕಾಯಿತು. ಯಾರಾದರೂ ಆ ಮಗುವನ್ನು ತಾಯಿಯ ಮಡಿಲಲ್ಲಿಟ್ಟರೆ ಸಾಕು ಅವಳು ಹುಚ್ಚಿಯಂತೆ ಕೂಗಿ ಮಗುವನ್ನು ದೂರಕ್ಕೆಸೆದು ಬಿಡುತ್ತಿದ್ದಳು.

ಹೊತ್ತು ಏರುತ್ತಿದ್ದರೂ ಆ ಮನೆಯಲ್ಲಿದ್ದ ಕತ್ತಲೆ ಇನ್ನೂ ಮಾಯವಾಗಿರಲಿಲ್ಲ. ಅದು ಮನೆಯಲ್ಲಿ, ಮನಸ್ಸಿನಲ್ಲಿ ಅಂಟಿಕೊಂಡಂತೆ ಕೂತಿತ್ತು. ರಾಘೋಬಾ ಅಲ್ಲಿ ಆವಿಗೆಯಲ್ಲಿ ಮಡಕೆಗಳನ್ನು, ಒಂದೊಂದಾಗಿ ಪೇರಿಸಿ ಅದರ ಮೇಲೆ ಹುಲ್ಲು ಹಾಸಿ, ಮತ್ತೊಂದು, ಇನ್ನೊಂದು ಸ್ತರ ಇಟ್ಟು ಮತ್ತೆ ಹುಲ್ಲು ಹಾಸಿ ಆವಿಗೆಯ ಬಾಯಿಗೆ ಮಣ್ಣು ಕಲಿಸಿ ಮುಚ್ಚುತ್ತಿದ್ದಂತೆ ಕೇರಿಯಲ್ಲಿದ್ದ ಹುಡುಗರೆಲ್ಲ ಬಂದು ಕುಣಿಯುತ್ತಿದ್ದರು. ಸೀತಕ್ಕನ

ಮೊಮ್ಮಗನೂ ಅಲ್ಲಿದ್ದ. ಆದರೆ ಮಕ್ಕಳ ಕಲರವವೂ ತಾರಾಳ ಮನಸ್ಸಿಗೆ ನೆಮ್ಮದಿ ಕೊಡುತ್ತಿರಲಿಲ್ಲ. ಅವಳ ಎದೆಯಲ್ಲಿ ಹಿಂದಿನ ನೋವಿನ, ದುಃಖದ ಗುಂಡುಕಲ್ಲು ಸ್ಥಿರವಾಗಿ ಕುಳಿತಿತ್ತು. ಸೀತಕ್ಕನ ಮಗ ಜಯಂತ ಸತ್ತು ಮೂರು ವರ್ಷಗಳಾಗಿವೆ. ಆದರೆ ಅವಳ ಸೊಸೆ ಆ ಆಘಾತದಿಂದ ಇದುವರೆಗೂ ಬಿಡುಗಡೆಗೊಂಡಿಲ್ಲ. ಮನೆಯ ಕೆಲಸವನ್ನು ಸರಿಯಾಗಿ ಮಾಡುತ್ತಿಲ್ಲ. ಏನೋ ಕೆಲಸ ಮಾಡಬೇಕೆಂದು ಮುಂದಾಗುತ್ತಾಳೆ. ಅಷ್ಟರಲ್ಲಿ ಚಿಂತೆಯ ಸುಳಿಯಲ್ಲಿ ಬಿದ್ದು ಕೈ ಹಿಡಿದ ಕೆಲಸವನ್ನು ಅಲ್ಲಿಯೇ ನಿಲ್ಲಿಸಿ ಏನೋ ಯೋಚಿಸುತ್ತ ಕೂಡುತ್ತಾಳೆ– ಹುಚ್ಚಳಂತೆ! ಮುಸ್ಸಂಜೆಯ ಹೊತ್ತಿನಲ್ಲಿ ಮಗುವನ್ನು ಕಂಕುಳಲ್ಲಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗುತ್ತಾಳೆ. ಹುಲಿ ಮನುಷ್ಯನನ್ನು ಕೊಂದರೆ ಚಿಂತೆಯಿಲ್ಲ. ಆದರೆ ಅದು ಎಳೆದೊಯ್ಯುವ ಯಾತನೆಯಿದೆಯಲ್ಲ ಅದನ್ನು ಕಣ್ಣಿಂದ ನೋಡಲು ಸಾಧ್ಯವಿಲ್ಲ.

ಸೀತಕ್ಕನಿಗೆ ಏನೂ ಹೊಳೆಯುವುದಿಲ್ಲ. ಅವಳು ಎದೆಯ ಮೇಲೆ ಮಣಭಾರದ ಕಲ್ಲಿಟ್ಟುಕೊಂಡಿದ್ದಾಳೆ. ತನ್ನ ಮಗನನ್ನು ಕಳೆದುಕೊಂಡ ದುಃಖವನ್ನು ಮೌನವಾಗಿ ನುಂಗಿ ತನ್ನ ಸೊಸೆಯ ಮತ್ತು ಮೊಮ್ಮಕ್ಕಳನ್ನು ಕಾಯುವ ಕೆಲಸ ಮಾಡುತ್ತಾಳೆ. ತನ್ನ ಕಣ್ಣುಗಳಲ್ಲಿ ಬರುವ ನೀರನ್ನು ತಡೆದು ಎದೆಗಟ್ಟಿ ಮಾಡಿ "ಹೋಗುವವನು ಹೋದ ತನ್ನ ದಾರಿಯಲ್ಲಿ ಅತ್ತು ತಲೆ ಚಚ್ಚಿಕೊಂಡರೆ ಪರತ ಬರ್‍ತಾನೆಯೇ? ಮಡಿಲಲ್ಲಿ ಮಕ್ಕಳಿದ್ದಾರೆ. ನಮ್ಮ ನಸೀಬಾನೇ ಒಡಕು ಅಂತ ತಿಳಿದು ಮನಸ್ಸು ಗಟ್ಟಿ ಮಾಡಿಕೊಬೇಕವ್ವ, ಪಾಲಿಗೆ ಬಂದುದು ಪಂಚಾಮೃತ ಅಂತ ತಿಳಕೊಂಡು ನಮ್ಮ ಹಣೆ ಬರದಾಗ ಬರದದ್ದನ್ನು ಅನುಭೋಗಿಸಬೇಕವ್ವ."

ಸೊಸೆ ಪೆಟ್ಟು ತಿಂದ ಪ್ರಾಣಿಯಂತೆ ಮುಸುಗುಟ್ಟುತ್ತ "ಏನ್ ಹಣೇಬರಾ... ನೀವು ಕುಂಬಾರರು ಭೂತಾಯಿ ಮಣ್ಣು ಸುಟ್ಟು ಪಾಪ ದುಡಕೋತೀರಿ. ನನ್ನ ತಂದಿ ರೈತ. ಅಂವಾ ಬೀಜ ಬಿತ್ತಿ ಮೊಳಕೆ ತಗೀತಾನ. ನನಗ್ಯಾಕ ಇಲ್ಲಿ ಕೊಟ್ರೊ ಮಣ್ಣ ತಿನ್ನಾಕ. ನಿಮ್ಮ ಮಗನನ್ನು ಮಣ್ಣೇ ನುಂಗಿ ಹಾಕ್ತಲ್ಲ. ನನ್ನ ಮಗಾ ಬಿಳಿ ಬ್ರಾಹ್ಮರವ, ನಿಮ್ಮ ಹಂಗ ಇಲಿ ಬಣ್ಣದಂವಾ ಅಲ್ಲ ಅಂತ ಮಿಜಾಸ್ ಹೇಳ್ತಿದ್ರಲ್ಲ. ನಿಮಗ ಮಗನ ಗರ್ವ ಇತ್ತು. ಅದಕ್ಕ ದೇವರು ಕಸಗೊಂಡು ಗರ್ವಹರಣ ಮಾಡ್ಯಾನ."

ಸೀತಕ್ಕ ಕೆಲವು ಬಾರಿ ಸುಮ್ಮನಿರುತ್ತಾಳೆ. ಆದರೆ ಸೊಸೆ ಮೂಲೆಯಲ್ಲಿ ಮುದ್ದೆಯಾಗಿ ಕುಳಿತರೆ ಸಾಕು ನೋಡಿ ಕಿರಿಚಾಡುತ್ತಾಳೆ. "ತಲಿ ಒಡಕೊಂಡ ಹಣೇಮ್ಯಾಗ ಬರದದ್ದ ಒರಸಾಕ ನೋಡತಿ ನೀನು. ನೀ ಹುಟ್ಟಿ ಬರೂಮುಂದ ರಂಡಿಯಾಗೂ ನಸೀಬ ಪಡಕೊಂಡು ಬಂದಿದಿ. ಇಲ್ಲಂದ್ರ ಇಧ ಮನೀಗ ಯಾಕಾರೂ ಬಂದಿ. ಮತ್ತ ಅವನೇ ಯಾಕ ಸತ್ತ? ಈಗ ನಗನಗ್ತಾ ಅನುಭವಿಸು ಇಲ್ಲಾಂದ್ರ ಅಳ ಅಳತಾ ಅನುಭವಿಸು. ಗಂಡನ ಮ್ಯಾಲ ಪ್ರೀತಿ ಮಾಡೇ ಮಕ್ಕಳಾಗ್ಯಾವಲ್ಲ. ಈಗ ಅವರನ್ನು ಸಾಕುವವರು ಯಾರು?"

ಸೊಸೆ ಕೆಲಸ ಮಾಡುತ್ತಿರಲಿಲ್ಲವೆಂದಲ್ಲ. ಸೊಸೆ ಮತ್ತು ಅತ್ತೆ ಸೇರಿಯೇ ಕೆರೆಗೆ, ಗುಡ್ಡಕ್ಕೆ ಮಣ್ಣು ತರಲು ಹೋಗುತ್ತಿದ್ದರು. ಮಣ್ಣು ತಂದು ಮನೆಯ ಅಂಗಳದಲ್ಲಿ ಒಣಗಲು ಹಾಕುತ್ತಿದ್ದರು. ಕಲ್ಲು ಅಥವಾ ಸುತ್ತಿಗೆಯಿಂದ ಸೊಸೆ ಹಂಟೆಗಳನ್ನು ಒಡೆದು ಪುಡಿ ಮಾಡುತ್ತಿದ್ದಳು. ಅತ್ತೆ ಸಾಣಿಗೆಯಲ್ಲಿ ಸೋಸುತ್ತಿದ್ದಳು. ಅತ್ತೆ ಮಾಡಿದ ಕಾವಲಿ, ತಟ್ಟೆ,

ಮಣ್ಣಿನ ಗಡಿಗೆಯ ಮೇಲೆ ಮುಚ್ಚುವ ಮುಚ್ಚಳ, ಹಣತೆಗಳನ್ನೆಲ್ಲ ಬುಟ್ಟಿಯಲ್ಲಿ ಹಾಕಿಕೊಂಡು ಸೊಸೆ ಮಾರಾಟಕ್ಕೆ ಹೋಗುತ್ತಿದ್ದಳು. ಆದರೆ ಹೆಂಟೆ, ಜಪ್ಪಿ, ಕುಟ್ಟಿ, ಕಲಿಸಿ ಹದ ಮಾಡಿದ ಮಣ್ಣಿಗೆ ಮಾತ್ರ ಅವಳು ಕೈ ಹಚ್ಚುತ್ತಿರಲಿಲ್ಲ. ಹಣತೆ ಮಾಡುತ್ತಿರಲಿಲ್ಲ. ಮೂಲತಃ ಅವಳು ಶಾಂತ ಸ್ವಭಾವದ ಹೆಣ್ಣು. ಅವಳ ನಡೆ, ನುಡಿ, ಕೆಲಸ ಮಾಡುವ ಪರಿ ಎಲ್ಲವೂ ಶಾಂತ ಸ್ಥಿತಿಯಲ್ಲಿ. ಹದಿನಾಲ್ಕನೆಯ ವರ್ಷದಲ್ಲಿ ಅವಳ ಮದುವೆ ಆಯಿತು. ಹದಿನಾರನೆಯ ವರ್ಷದಲ್ಲಿದ್ದಾಗ– ಮಗು ಹುಟ್ಟಿತು. ಇಪ್ಪತ್ನಾಲ್ಕನೆಯ ವಯಸ್ಸಿನಲ್ಲಿ ಗಂಡ ಪರಲೋಕ ವಾಸಿಯಾದ.

ಸೀತವ್ವನಿಗೆ ಈಗಲೂ ಸೊಸೆ ಶೃಂಗರಿಸಿಕೊಂಡು ಈ ಮನೆಯ ಪ್ರವೇಶ ಮಾಡಿದ ಆ ಶುಭ ಗಳಿಗೆಯ ನೆನಪಿದೆ. ಆ ಮುಗ್ಧ ಮುಖ, ಸುಂದರ ರೂಪ, ಸೊಗಸಾದ ನಡಿಗೆ ಅವಳಿಗೆ ಈಗಲೂ ಕಣ್ಣ ಮುಂದೆ ಹಾಯ್ದು ಹೋಗುತ್ತದೆ. ಒಂದು ದಿನ ಸಾಯಂಕಾಲ ಅವಳು ತನ್ನ ಮಗನೊಡನೆ ಅಂಗಳಕ್ಕೆ ಹೋಗಿದ್ದಳು. ತಲೆಯಲ್ಲಿ ರಾಶಿ ರಾಶಿ ಹೂವು, ಹಣೆಯ ಮೇಲೆ ದೊಡ್ಡ ಕುಂಕುಮ. ಅದಕ್ಕೆ ಅಂಟಿದ ಅಕ್ಷತೆಯ ಕಾಳು, ಸೊಂಟಕ್ಕೆ ಗಂಟು ಕಟ್ಟಿ ಸಿಕ್ಕಿಸಿಕೊಂಡ ಒಂಬತ್ತು ವಾರಿನ ಸೀರೆ... ತರುಣ ಸೊಸೆಯನ್ನು ಮನೆಗೆ ಕರೆತರುವಾಗ ಅವಳು ಅಮಾಯಕ ಹುಡುಗಿಯಂತೆ ಕಂಡಿದ್ದಳು. ಆಕೆಯನ್ನು ಸೊಸೆಯೆಂದು ಭಾವಿಸದೆ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳಂತೆ ನೋಡಿಕೊಂಡಿದ್ದಳು. ಸೀತವ್ವನಿಗೆ ಮೂರು ಬಾರಿ ಗರ್ಭ ನಿಂತು ಕರಗಿ ಕೊನೆಗೊಬ್ಬ ಮಗ ಹುಟ್ಟಿದ್ದ. ತನ್ನ ಹೊಟ್ಟೆಯಲ್ಲಿ ಗರ್ಭ ನಿಂತಿದೆಯೆಂದು ತಿಳಿದಾಗ ಸೀತವ್ವ ತುಂಬ ಗಾಬರಿಯಾಗಿದ್ದಳು. ಜೀವ ಕೈಯಲ್ಲಿ ಹಿಡಿದು ಬದುಕುತ್ತಿದ್ದಳು. ಅವಳ ಅತ್ತೆ ಅವಳನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು.

ಮಲಗಲು ಹೊಚ್ಚ ಹೊಸ ಚಾಪೆ, ಅದರ ಮೇಲೆ ಬೇರೇನೂ ಹಾಸುವಂತಿಲ್ಲ. ಚಾಪೆಗೆ ಗಂಡನ ಕೈಕಾಲು ತಾಗಬಾರದು... ಊಟಕ್ಕೆ ಕೂಡುವ ಮೊದಲು ಅತ್ತೆ ಸೆಗಣಿಯಿಂದ ನೆಲ ಶುದ್ಧವಾಗಿ ಸಾರಿಸಿ ಬಾಳೆ ಎಲೆಯನ್ನು ಹಾಸಿ ಬಡಿಸುತ್ತಿದ್ದರು. ಕುಚ್ಚಲು ಅಕ್ಕಿಯ ಅನ್ನ ಮತ್ತು ಹುಳಿ ಸಾರು. ನೆಂಜಿಕೊಳ್ಳಲು ಬಿಳಿಯ ಹರಿವಿಯ ಪಲ್ಲೆ ಇಲ್ಲವೆ ಸೋರೆಕಾಯಿಯ ಪಲ್ಲೆ. ಹೀಗೆ ಸಂಭ್ರಮದಲ್ಲಿದ್ದಾಗ ಆಕಸ್ಮಿಕ ಸೀರೆಯಲ್ಲಿ ಕೆಂಪು ಕಾಣಿಸಿಕೊಂಡು ಮನಿ ಮಂದಿಯೆಲ್ಲ ಚಿಂತೆಗೀಡಾಗಿದ್ದರು. ಹೀಗೆ ಎರಡು ಮೂರು ಬಾರಿ ಮುಗಿದು ಕೊನೆಗೊಮ್ಮೆ ಗರ್ಭ ನಿಂತಿತು.

ಅವಳ ಒಬ್ಬನೇ ಮಗ ಹೊರಟು ಹೋದ. ಹೃದಯ ಹರಿದೊಗೆದು ಹೋದ. ಒಂದು ದಿನ ಮಗ ಜಯವಂತ ಮತ್ತು ಸೊಸೆ ಗುದ್ದಲಿ ಪಿಕಾಸು ಹಿಡಿದುಕೊಂಡು ಗುಡ್ಡಕ್ಕೆ ಮಣ್ಣು ತರಲು ಹೋಗಿದ್ದರು. ಮಣ್ಣಿನ ಪಾತ್ರೆಗಳನ್ನು ತಯಾರಿಸಲು ಕೆರೆಯ ಜಿಗುಟು ಮಣ್ಣು ಮತ್ತು ಗುಡ್ಡದ ಕೆಮ್ಮಣ್ಣು ಎರಡೂ ಬೇಕಾಗುತ್ತಿದ್ದವು. ಆ ಗುಡ್ಡದ ಮಣ್ಣು ಮೊಟ್ಟೆಯ ಒಳಭಾಗದಂತೆ ಕೆಂಪು ಹಳದಿ ಬಣ್ಣದಿಂದ ಕೂಡಿರುತ್ತಿತ್ತು. ಸಾಣಿಗೆ ಗುಡ್ಡ ಗುಡ್ಡದ ಬೇರಿನಂತೆ ಊರಿನತ್ತ ಸರಿದಿತ್ತು.

ಗುಡ್ಡದಲ್ಲಿ ಕುಂಬಾರರು ಒಂದು ಕಡೆಯಿಂದ ಮಣ್ಣು ತೆಗೆದು ತೆಗೆದು ಸುರಂಗ ಕೊರೆದಂತೆ ಮಾಡಿದ್ದರು. ಸಾಮಾನ್ಯ ಜನರೂ ಒಲೆ ಹಾಕಲು ಅಂಗಳ ಸಾರಿಸಲಿಕ್ಕೆ

ಎಲ್ಲರೂ ಅಲ್ಲಿಂದಲೇ ಮಣ್ಣು ಒಯ್ಯುತ್ತಿದ್ದರು. ಅದರಿಂದಾಗಿ ಸುರಂಗ ದಿನದಿನಕ್ಕೆ ಒಳಸೇರುತ್ತಲೇ ಇತ್ತು.

ಚಳಿಗಾಲದ ದಿನಗಳು ಬೆಳಗೆದ್ದು ನೋಡಿದರೆ ಸುತ್ತಲಿನ ಪರಿಸರ, ಗುಡ್ಡ ಬೆಟ್ಟ ಹೊಗೆಯಿಂದ ತುಂಬಿ ಹೋದಂತೆ, ಆಕಾಶದಿಂದ ಮೋಡಗಳುದುರುವಂತೆ ತೋರುತ್ತಿತ್ತು. ಈ ಪ್ರದೇಶದಲ್ಲಿ ದೂರ ದೂರದಲ್ಲಿರುವ ಊರುಗಳು ಕಾಣುತ್ತಿರಲಿಲ್ಲ. ರೈತರು ಹೊಲದಲ್ಲಿ ಎತ್ತು ಹೂಡಿ ಓಡಿಸುವ ಸದ್ದೂ ಕೇಳಿ ಬರುತ್ತಿರಲಿಲ್ಲ. ನಾಲ್ಕೂ ಕಡೆ ಹಸಿ ಹಸಿ ತಂಪು.

ಜಯವಂತ ಮತ್ತು ತಾರಾ ಸ್ವಲ್ಪ ಇಬ್ಬನಿಯ ಹೊಗೆ ಕಡಮೆಯಾದ ನಂತರ ಹೊರಟಿದ್ದರು. ಈ ಹೊತ್ತೇನಾಗಿದೆ? ಸೂರ್ಯ ಆಕಾಶದಲ್ಲಿ ಬಂದು ಕೂತಿದ್ದರೂ ಚಳಿ ಏಕೆ ಕಡಮೆಯಾಗುತ್ತಿಲ್ಲ? ಅವರಿಬ್ಬರೂ ಚಳಿಯಲ್ಲಿ ಗಡಗಡ ನಡುಗುತ್ತ ಗುಡ್ಡದ ಗುಹೆಯ ಬಳಿ ಸಾರಿದ್ದರು. ಗುಡ್ಡದ ಮೇಲೆ ಸ್ವಲ್ಪ ಉಷ್ಣತೆಯಿತ್ತು. ಮಣ್ಣು ಕೊರೆದು ಗುಹೆ ಮಾಡಿದ ಸ್ಥಳದಲ್ಲಂತೂ ಬೆಚ್ಚನೆಯ ವಾತಾವರಣವಿತ್ತು.... ಜಯವಂತ ಆ ಪೊಳ್ಳಿನ ಒಳಗೆ ಹೋಗಿ ಮಣ್ಣು ತೆಗೆಯುತ್ತಿದ್ದ. ಪಿಕಾಸು ಹೊಡೆದಾಗ ಮೇಲಿನಿಂದ ಸಣ್ಣಗೆ ಮಣ್ಣು ಕುಸಿಯುತ್ತಿತ್ತು. ಅವನು ಅದನ್ನು ಮಕರಿಯಲ್ಲಿ ತುಂಬಿಕೊಳ್ಳುತ್ತಿದ್ದ. ತಾರಾ ಆ ಸುರಂಗದ ಹೊರಬದಿಯಲ್ಲಿ ನಿಂತಿದ್ದಳು. ಅಚಾನಕ ಮೇಲಿನಿಂದ ಮಣ್ಣು ಬುಟ್ಟಿಗಟ್ಟಲೆ ಕೆಳಗೆ ಕುಸಿದು ಬಿತ್ತು. ಮೇಲಿನ ಪೊದೆ ಗಿಡ ಕಲ್ಲು ಮಣ್ಣು ಎಲ್ಲ ಒಟ್ಟಿಗೆ ಕುಸಿದು ಬಿತ್ತು. ಆ ಮಣ್ಣಿನ ರಾಶಿಯಲ್ಲಿ ಜಯವಂತ ಕಣ್ಮರೆಯಾಗಿ ಬಿಟ್ಟ. ಹೆಂಡತಿ ಕೈಯಲ್ಲಿ ಬುಟ್ಟಿ ಹಿಡಿದು ನಿಂತಿದ್ದರೆ ಒಳಗಿನ ಗವಿಯಲ್ಲಿ ಆಕೆಯ ಗಂಡ ಮಣ್ಣಿನ ರಾಶಿಯಲ್ಲಿ ಹೂತು ಹೋಗಿದ್ದ. ಅವಳು ಜೋರು ಜೋರಾಗಿ ಕೂಗು ಹಾಕಿದಳು. ಎದೆ ಬಡಿದುಕೊಂಡು ಅಳುತ್ತಲೇ ಅವರಿವರ ಸಹಾಯಕ್ಕಾಗಿ ಕೂಗು ಹಾಕುತ್ತಿದ್ದಳು. ಅವಳು ಸುಮ್ಮನೆ ಕೂಗುತ್ತಾಳೊ, ಯಾರನ್ನಾದರೂ ಕರೆಯುತ್ತಿದ್ದಾಳೊ ಒಂದು ತಿಳಿಯುತ್ತಿರಲಿಲ್ಲ. ಕೀರಲು ದನಿಯ ಆ ಹೆಣ್ಣಿನ ದನಿ ಕೊಂಚ ಗಡಸಾದರೂ ಪರಿಸರದಲ್ಲಿ ನಿಖರವಾಗಿ ತಲುಪುತ್ತಿರಲಿಲ್ಲ. ಆದರೂ ಪರಿಸರ ಮಾತ್ರ ಅವಳ ಕೂಗಿನಿಂದ ಮರುಧ್ವನಿಸುತ್ತಿತ್ತು.

ಕೆಳಗಿನ ಭಾಗದಲ್ಲಿ ಒಂದೆರಡು ರೈತರು ಗದ್ದೆಯಲ್ಲಿ ಕೆಲಸ ಮಾಡುತ್ತಿದ್ದರು. ಮತ್ತೆ ಯಾರೊ ನೇಗಿಲಿಗೆ ಎತ್ತು ಹೂಡಿದ್ದರು. ಅವರು ಧಾವಿಸಿ ಬಂದರು. ಅವರು ಬಂದು ಗುದ್ದಲಿ ಇತ್ಯಾದಿ ತಂದು ರಾಶಿ ರಾಶಿಯಾಗಿ ಬಿದ್ದ ಮಣ್ಣು ಹೊರಗೆಳೆದು ತರುವುದರಲ್ಲಿ ಎಷ್ಟೊ ಹೊತ್ತು ಗತಿಸಿಹೋಗಿತ್ತು. ಅಷ್ಟರಲ್ಲಿ ಜಯವಂತ ಉಸಿರು ಕಟ್ಟಿ ಪ್ರಾಣಬಿಟ್ಟಿದ್ದ ಹೊರಗೆಳೆದು ತಂದುದು ಜಯಂತನ ಕಟ್ಟಿಗೆಯಂತೆ ಗಟ್ಟಿಯಾದ ಹೆಣ.

ಸೀತವ್ವನ ಮನೆಯ ಕಟಿ ಮುರಿದು ಬಿದ್ದಿತ್ತು. ಕೊನೆಗೆ ಉಳಿದದ್ದು ಬೆನ್ನೆಲಬು ಬಾಗಿದ ವೃದ್ಧೆ, ಪಾರಿವಾಳದಂತೆ ಚಿಂವ್... ಚಿಂವ್... ಮಾಡಿ ಅಳುತ್ತ ಕುಳಿತುಕೊಳ್ಳುವ ವಿಧವೆ ಸೊಸೆ ಮತ್ತು ಮೂವರು ಅಮಾಯಕ ಮಕ್ಕಳು. ಸೀತವ್ವ ಒಳಗಿನಿಂದ ಸೊರಗಿ ಹೋಗಿದ್ದಾಳೆ. ಆದರೆ ತಾನೇ ಇಂಥ ಪರಿಸ್ಥಿತಿಯಲ್ಲಿ ಹಾಸಿಗೆ ಹಿಡಿದು ಮಲಗಿದರೆ, ಸ್ವಲ್ಪವಾದರೂ ಅಳುಕು ತೋರಿದರೆ ಸಂಸಾರ ಮೂರಾಬಟ್ಟೆಯಾಗುತ್ತದೆಯೆಂದು ಅವಳು ಅತ್ತರೂ ಒಳಗೊಳಗೆ ಯಾರಿಗೂ ಕಾಣದಂತೆ ಅಳುತ್ತಾಳೆ.

ಈ ಒಂದೂವರೆ ಗಂಟೆಯ ಅವಧಿಯಲ್ಲಿ ಸೀತವ್ವ ಸಾಕಷ್ಟು ಹಣತೆ, ಬಟ್ಟಲು ಕೈಯಿಂದ ಮಾಡಿಟ್ಟಿದ್ದಳು. ಅವಳು ಹೊಸ್ತಿಲಲ್ಲಿ ಕುಳಿತ ಸೊಸೆಯನ್ನು ಕರೆದು ಅವನ್ನೆಲ್ಲ ಬಿಸಿಲಿಗೆ ಒಣಹಾಕಲು ಹೇಳಿದಳು. ಅವಳು ಮಡಿಲಲ್ಲಿದ್ದ ಮಗುವನ್ನು ಕೆಳಗಿಳಿಸಿ ಮಕರಿ ಹಿಡಿದುಕೊಂಡು ಬಂದು ಅವುಗಳನ್ನೆಲ್ಲ ತುಂಬ ತೊಡಗಿದಳು. ಅವುಗಳನ್ನೆಲ್ಲ ಮಕರಿಯಲ್ಲಿ ತುಂಬುತ್ತಿರುವಾಗ ಸೊಸೆ ಕೇಳಿದಳು. "ಅವ್ವಾ ಕುತ್ತಿಗೆಯಿಲ್ಲದ ಪಾತ್ರೆಗಳನ್ನು ನಾವೇ ಏಕೆ ಮಾಡಬೇಕು?"

"ಅವರು ಅಂಜತಾರವ್ವ.. ನಾವು ಮಡಕೆ ಮಾಡಿದ್ರ ನಮಗೆಲ್ಲಿ ಬಸರು ನಿಲ್ಲತದೊ ಅಂತ"

"ಛೆ... ಛೆ... ಹುಚ್ಚತನಾ..." ಎಂದು ತಾರಾ ಬುಟ್ಟಿಯನ್ನು ಎತ್ತಿಕೊಂಡು ಬಿಸಿಲು ಹುಡುಕುತ್ತ ಹೊರಟಳು.

*　　　　*　　　　*

**ಆ** ಕಡೆಯಿಂದ ದುಲಬಾ ಬಂದ. ಜನ ಊರಿನೊಳಗೆ ಪ್ರವೇಶಿಸುವ ದಾರಿಯಲ್ಲೇ ಸೀತವ್ವನ ಮನೆಯಿತ್ತು. ದುಲಬಾ ಆಗಾಗ್ಗೆ ಬಂದು ಜನ ಬಂದು ಹೋಗುವ ದಾರಿಯಲ್ಲಿ ಮುಖ ಮಾಡಿ ಅಂಗಳದ ಅಂಚಿನ ಕಿರುಗೋಡೆಯ ಮೇಲೆ ಕೂತಿರುತ್ತಿದ್ದ. 'ಯಾರಿಗಾಗಿ ಕಾಯ್ತಿಯೇ?' ದುಲಬಾ ಅಂತ ಕೇಳಿದರೆ 'ನಾ ಎಲ್ಲಾರಿಗಿಂತ ಸಣ್ಣಾಂವಾ ಅಲ್ಲೇನವ್ವ, ಅವ್ವ ಗಡಿಗೆ ಮಾರಾಕ ಪ್ಯಾಟಿಗ ಹ್ವಾದರ ಬರೂಮಟಾ ಸಂಜಿ ಆಗ್ತಿತ್ತು. ನಾನು ಇಲ್ಲೇ ಕುಂತು ಆಕಿ ದಾರಿ ಕಾಯುತ್ತಿದ್ದೆ. ಭಾಳ ವ್ಯಾಳ್ಯಾ ಆದರ ಅಳಾಕ್ ಶುರು ಮಾಡ್‌ತಿದ್ದೆ. ಈಗ ಅವ್ವ ಇಲ್ಲ.. ಆದರ ನೆನಪ ಹೋಗವಲ್ಲದು."

ದುಲಬಾನಿಗೆ ಈಗ ಯಾವುದೋ ರೋಗ ಅಂಟಿಕೊಂಡಿದೆ. ಕಳೆದ ಮೂರು ವರ್ಷಗಳಿಂದ ಅವನಿಗೆ ಸರಿಯಾಗಿ ನಿದ್ದೆಯೇ ಬರುತ್ತಿಲ್ಲ. ಅವನ ಬಣ್ಣ ಕಪ್ಪಗಿದ್ದರೂ ಈ ನಡುವೆ ಕೆಲವು ದಿವಸ ಅವನ ಕೆಂಪುಕೆಂಪಾಗಿ ಕಾಣುತ್ತಿದ್ದ.

ಈಗ ಆ ಕೆಂಬಣ್ಣ ಮಾಯವಾಗಿ ಹಲ್ಲಿಯ ಹೊಟ್ಟೆಯಂತೆ ಬೆಳ್ಳಬೆಳ್ಳಗಾಗಿದ್ದಾನೆ. ತಲೆಯ ಮೇಲಿನ ಕೂದಲೂ ಉದುರಿ ಹೋಗಿವೆ. ಇದ್ದ ಬೆರಳೆಣಿಕೆಯ ಕೂದಲುಗಳು ಮುಳ್ಳಿನಂತೆ ಸೆಟೆದು ನಿಂತಿವೆ. ಮಿದುಳು ಕೆಟ್ಟು ಹೋದಂತೆ ಏನೇನೋ ಮಾತಾಡುತ್ತಾನೆ. ಮೊನ್ನೆ ಗೋಪಾಳನು ಆವಿಗೆಯಿಂದ ಮಡಕೆಗಳನ್ನು ಕೆಳಗಿಳಿಸುತ್ತಿರುವಾಗ ಬಂದು ಒಂದು ಮಡಕೆ ಎತ್ತಿಕೊಂಡು ಓಡಿಬಿಟ್ಟ. 'ಅರೆ... ಅರೆ ಗಡಗಿ ಎಲ್ಲಿ ಹೊತ್ಕೊಂಡು ಹೊಕ್ಕಿ' ಅಂತ ಕೇಳಿದ್ರ "ನನ್ನ ಹೆಣದ ಮ್ಯಾಗ ಒಡಿಯಾಕ" ಅಂತಂದ. ಯಾರದ್ದೆ ಆವಿಗೆಯಲ್ಲಿನ ಕಟ್ಟಿಟ್ಟ ಜಾಳಿಗೆಯಿಂದ ಗಡಿಗೆ ಎತ್ತಿಕೊಂಡು ಹೊರಟು ಬಿಡುತ್ತಾನೆ. ಯಾರಾದರೂ ಗಡಿಗೆ ಒಯ್ಯಲು ಬಂದರೆ ದಾರಿಯಲ್ಲಿ ಇವನು ಮಡಕೆ ಸಹಿತ ಹಾಜರು! "ಈ ಗಡಗಿ ತಗೋರಿ ಮತ್ತ ನನಗೆ ಪಿಷಾ ತಿನ್ನಾಕ ಏನಾದ್ರೂ ಕೊಡ್ರಿ" ಅಂತ ಗಂಟು ಬೀಳುತ್ತಾನೆ.

ಅವನು ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಮದುವೆಯಾಗಿದ್ದ. ಆಗವನಿಗೆ ಹದಿನಾರು ವರ್ಷ, ಹೆಂಡತಿಗೆ ಹನ್ನೊಂದು ವರ್ಷ. ಒಂದು ಬಾರಿ ಅವನು ತನ್ನ ಹೆಂಡತಿಯ ಮೇಲೆ ಬಲಾತ್ಕಾರ ಮಾಡಿದ ಎಂದೂ ಹೇಳುತ್ತಾರೆ. ಅವಳ ಮರ್ಮಾಂಗ ದಿಂದ ರಕ್ತ ಹರಿಯ ತೊಡಗಿದ್ದು ನಿಲ್ಲಲ್ಲೇ ಇಲ್ಲ. ಅದರಲ್ಲೇ ಅವಳು ಕೊನೆಯುಸಿರೆಳೆದಳು.

ಸೀತವ್ವ ಒಮ್ಮೊಮ್ಮೆ ಹೇಳುತ್ತಾಳೆ. "ಆ ಹುಡುಗಿ ಗೂದದಿಮ್ಯಾಗ ಹಂಗ ಬಿದ್ದಿತ್ತು. ಮುಂಜಾನಿ ಅತ್ತಿ ನೋಡಿದ್ರ ಗೂದದ್ಯಾಗಿನಿಂದ ರಕ್ತ ನೆಲದ ಮ್ಯಾಲೆಲ್ಲ ಹರದ ಬಂದಿತ್ತು."

ಈಗ ಬಂದವನೆ ಎಂದಿನಂತೆ ಅಂಗಳದ ಅಂಚಿನಲ್ಲಿ ಕೂತಿದ್ದಾನೆ. ಅಲ್ಲಿಂದಲೇ ದೊಡ್ಡಕೆ ಮಾತಾಡತೊಡಗಿದ. "ನನ್ನ ಅತ್ತಿಗೆ ನನಗ ಹಗಲ ದೆವ್ವ ಅಂತಾಳ. ನಾ ಹತ್ರ ಹ್ವಾದ್ರ ಮೂಗ ಮುರಿತಾಳ... ನೀ ಭೂಮಿಗ ಭಾರ ಅಂತಾಳ. ಸೀತವ್ವ ಎಲ್ಲಾರಿಗೂ ಬೇಕಾದಂವಾ ಭಾಳ ಬೇಗ ಸಾಯತಾನ. ಬ್ಯಾಡಾದಂವಾ ನನ್ನಂಗ ದಿವಸಾ ದೂಡತಾ ಇರತಾನ."

ಆಗ ಯಾರೂ ಒಬ್ಬ ಅಪರಿಚಿತ ಮೆಲ್ಲನೆ ಹೆಜ್ಜೆಯಿಡುತ್ತ ಊರಿನಲ್ಲಿ ಬರುತ್ತಿರುವುದು ಕಾಣಿಸಿತು. ಎಷ್ಟೋ ವರ್ಷಗಳಾದವು. ಯಾರೇ ಅಪರಿಚಿತರು ಹೊತ್ತಲ್ಲದ ಹೊತ್ತಿನಲ್ಲಿ ಊರೊಳಗೆ ಬಂದರೆ ಸೀತವ್ವನ ಎದೆಬಡಿತ ಜಾಸ್ತಿಯಾಗುತ್ತಿತ್ತು. ಅವಳಿಗೆ ಗೊತ್ತಿತ್ತು. ಬಡಬಡಿಸುತ್ತ ಬರುವವ ಏನಾದರೂ ಕೆಟ್ಟ ಸಮಾಚಾರ ತರುತ್ತಾನೆಂದು. ಅವನು ಬಂದವನೇ ಸೀತವ್ವನ ಮುಂದೆ ನಿಂತ ಅವಳಿಗೆ ಅವನು ಯಾರು ಅಂತ ಗೊತ್ತಾಯಿತು. ಅವನು ಸಾವಂತವಾಡೆಯ ಶಾಂಬಾನ ಮಗ ರಾಮ.

"ಏನಾಗ್ಯದಪ್ಪ ರಾಮಾ?"

"ನಮ್ಮ ನೀಲಕಂಠ ಸಾವಂತ ಈವತ್ತ ಮುಂಜಾಗಿ ಹೋಗಿಬಿಟ್ಟ. ಈವತ್ತ ಸಂಜೀ ಮುಂದ ಸ್ಮಶಾನಕ್ಕ ಒಯ್ತಾರ. ಒಬ್ಬಾಂವಾ ಅವನ ಮಗಳು ಅಳಿಯನನ್ನು ಕರ್‍ಕೊಂಬರಾಕ್ ಪಣಜಿಗೆ ಹೋಗ್ಯಾನ. ಮಧ್ಯಾಹ್ನಮಟಾ ಬರ್‍ಬಹುದು."

"ಹಾಂಗ ಮನಸ್ಯಾ ಒಳ್ಳೆಯವನಿದ್ದ. ಐದು ಹೆಣ್ಣು ಮಕ್ಕಳ ನಡುವೆ ಅಂವಾ ಒಬ್ಬೇ ತಮ್ಮ. ಅಂವಾ ಸಣ್ಣಾಂವನಿದ್ದಾಗ ಅವನಪ್ಪ ಹೋಗಿ ಬಿಟ್ಟ. ನೀಲಕಂಠ ಪಾಪ ಹಗಲು ರಾತ್ರಿ ದುಡ್ದು ಅಕ್ಕತಂಗ್ಯಾರ ಮದುವಿ ಮಾಡಿಸ್ದ.

"ಈಗ ಅವರೆಲ್ಲ ಬಂದ ಮುಟ್ಯಾರ ಕಾಣಕೋಣಕ್ಕೆ. ಎಲ್ಲಾರೂ ತಮ್ಮನ ನೆನಪ ಮಾಡಿ ಅಳಾಕ ಹತ್ಯಾರ"

ಸೀತವ್ವ ಅವನನ್ನು ಯಶವಂತನ ಹತ್ತಿರ ಕಳಿಸಿಕೊಟ್ಟಳು. "ನಿನ್ನಿ ಅಷ್ಟ ಆವಿಗೆ ಇಳಿಸ್ಯಾರ. ಸಿಗತಾವ ಹೋಗು ಮಡಕೆ"

ರಾಮನು ಹೋಗಿ ಯಶವಂತನಿಂದ ಎರಡು ಮಡಕೆ ತೆಗೆದುಕೊಂಡು ಬಂದ. ಒಂದು ಕುಳ್ಳು ಹಾಕಿ ಬೆಂಕಿಯಿಡಲು, ಮತ್ತೊಂದು ಸ್ಮಶಾನದಲ್ಲಿ ಹೆಣ ಸುಡುವಲ್ಲಿ ನೀರಿನ ಮೇರೆ ಹಾಕಲು.

ರಾಮ ಹೊರಟು ಹೋದ. ದುಲಬಾ ಕುಳಿತಲ್ಲಿಯೇ ಕೂತಿದ್ದ. ರಾಮ ಹೋಗುತ್ತಿರುವುದನ್ನು ಅವನು ಗುಣಗುಣಿಸತೊಡಗಿದ. "ಏನಾದ್ರ ಆಗಲಿ. ಮನುಷ್ಯಾ ಸಾಯೂ ಮಟಾ ಕುಂಬಾರನ ಗಡಗಿಗೆ ಸಾವು ಬರೂದಿಲ್ಲ. ಸುಡುವಾಗ ಎರಡು. ಹನ್ನೊಂದನೆ ದಿವಸ ಮೂರು ಸೀತವ್ವ, ಇನ್ನ ಕುಂಬಾರ ದೇವರ ಹತ್ರ ಬೇಡೂದು ಒಂದೇ ಮನಸ್ಯಾರು ಹಿಂಗ ಸಾಯ್ತಿರಲಿ ಅಂತ"

ಸೀತವ್ವ ಕೊಂಚ ಕೋಪದಿಂದಲೆ ಹೇಳಿದಳು. "ದುಲಬಾ. ನೀ ನಿನ್ನ ಸಾವನ್ನೇ ಮೊದ್ಲ ಕರಿ. ಬ್ಯಾರಿ ಮಂದಿ ಸಾವಿಗೆ ಕಾಯ್‍ಬ್ಯಾಡಾ." ಆದರೂ ಸೀತವ್ವನಿಗೆ ಗೊತ್ತೆ ಇತ್ತು.

ಯಾರಾದರೊಬ್ಬರು ಮಡಕೆ ಕೇಳಲು ಬಂದರೆ ಕುಂಬಾರರಿಗೆ ದೇವರು ಬಂದಷ್ಟು ಖುಷಿಯಾಗುತ್ತಿತ್ತು. ಹೆಚ್ಚಾಗಿ ಮಳೆಗಾಲದ ದಿನಗಳಲ್ಲಿ, ದಾರಿಯಲ್ಲಿ ಹೋಗುವವನನ್ನು ನಡುವೆ ಅಡ್ಡೈಸಿ 'ಮಡಕೆ ಬೇಕೆ' ಅಂತ ಕೇಳುವುದು ಸರಿ ಕಾಣುತ್ತಿರಲಿಲ್ಲ. ಆದರೂ ಕೆಲವು ಹೆಣ್ಣು ಮಕ್ಕಳು ದಾರಿಯ ಬದಿಯಲ್ಲಿ ನಿಂತು, ಕಿಟಕಿಯಲ್ಲಿ ತಲೆ ಹಾಕಿ ಸಣ್ಣ ದನಿಯಲ್ಲಿ "ಮಾಮಾ ಮಡಕೆ ಬೇಕೇ?" ಅಂತ ಕೇಳುತ್ತಿದ್ದರು.

* * *

ಶಿವರಾಮ ಮತ್ತು ಪುರುಶನ ಮಗ ಸಖಾರಾಮ ಕೇರಿಯ ನಡುವೆ ಇರುವ ಮಾವಿನ ಮರದ ಕೆಳಗೆ ಕುಳಿತು ನಾಟಕದ ಸಂಭಾಷಣೆ ಪಾಠ ಮಾಡುತ್ತಿದ್ದರು. ದೇವರ ಹಬ್ಬದಲ್ಲಿ ಭಾಂಡಿ ಕಟ್ಟೆಯ ವೇದಿಕೆಯ ಮೇಲೆ ನಾಟಕವಿತ್ತು. ಅದರಲ್ಲಿ ಸಖಾರಾಮನಿಗೂ ಒಂದು ಪಾತ್ರ ಕೊಟ್ಟಿದ್ದರು. ಅವನು ಶಿವರಾಮನ ಮುಂದೆ ಕುಳಿತು ದೊಡ್ಡ ದೊಡ್ಡಕೆ ಸಂಭಾಷಣೆ ಹೇಳಿ ತೋರಿಸುತ್ತಿದ್ದ. ಶಿವರಾಮ ಅವನ ಮಾತು ಕೇಳುತ್ತಿದ್ದ. ಹಿರಿಯರಂತೆ ಆಗಾಗ್ಗೆ ಸೂಕ್ತ ಸೂಚನೆಯನ್ನು ಕೊಡುತ್ತಿದ್ದ. ಮಧ್ಯೆ ಮಧ್ಯೆ ಅವರ ಸಂಭಾಷಣೆಯ ಜುಗಲಬಂದಿ ನಡೆಯುತ್ತಿತ್ತು. ಶಿವರಾಮ ತನ್ನ ತಾರುಣ್ಯದಲ್ಲಿದ್ದಾಗ ದಶಾವತಾರಿ ಆಟದಲ್ಲಿ, ಐತಿಹಾಸಿಕ ನಾಟಕಗಳಲ್ಲಿ ಪಾತ್ರ ನಿರ್ವಹಿಸುತ್ತಿದ್ದ. ಈಗ ಅವನಿಗೆ ಸಾಮಾಜಿಕ ನಾಟಕದಲ್ಲಿರುವ ಸಂವಾದಗಳೂ ಹಿಡಿಸುತ್ತಿವೆ. ಅವನು ಹಿಂದೆ ಕಂಠಪಾಠ ಮಾಡಿದ ಸಂಭಾಷಣೆಗಳನ್ನು ಏರುಧ್ವನಿಯಲ್ಲಿ ಈಗಲೂ ಹೇಳಿ ತೋರಿಸುತ್ತಿದ್ದ. ಅವರಿಬ್ಬರ ಧ್ವನಿ ಮಧ್ಯಾಹ್ನದ ನಿಶ್ಯಬ್ದವನ್ನು ಸೀಳಿ ಸಂಪೂರ್ಣ ಕುಂಬಾರಕೇರಿಯಲ್ಲಿ ಧುಮುಧುಮಿಸುತ್ತಿತ್ತು. ಕೇರಿಗೊಂದು ದೇವರ ಆಗಮನವಾದಂತಾಗಿತ್ತು. ಜನರಿಗೂ ಅವರ ಮಾತುಗಳು ಹಿಡಿಸುತ್ತಿದ್ದವು. ಶಿವರಾಮನ ಧ್ವನಿ ತುಂಬುಧ್ವನಿಯಾದರೂ ಅವನಿಗೆ ಸಖಾರಾಮನ ಧ್ವನಿ ಹಿಡಿಸುತ್ತಿತ್ತು. ಸಖಾರಾಮನೊಬ್ಬ ಒಳ್ಳೆಯ ಕಲಾವಿದ. ಅವನು ತನ್ನ ಧ್ವನಿಯಲ್ಲಿ ಒಂದು ಸುವರ್ಣ ಮಾಧ್ಯಮ ಅನುಸರಿಸುತ್ತಿದ್ದ. ಅದರಲ್ಲಿ ಮಾಧುರ್ಯವೂ ಇತ್ತು. ಗಡಸುತನವೂ ಇತ್ತು. ಅದರಿಂದ ಅವನೊಬ್ಬ ಒಳ್ಳೆಯ ನಟ ಎಂದು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಪ್ರಸಿದ್ಧಿ ಪಡೆದಿದ್ದ. ಸುತ್ತಲಿನ ಯಾವ ಊರಿನಲ್ಲಿ ನಾಟಕ ಪ್ರದರ್ಶನವಿದ್ದರೂ ಆತನನ್ನು ಹುಡುಕಿಕೊಂಡು ಬಂದು ಪಾತ್ರ ಕೊಟ್ಟು ಹೋಗುತ್ತಿದ್ದರು. ಊರಿಗೆ ಬರುವ ದಾರಿಯಲ್ಲಿ ಸಿಗುವ ಹಳ್ಳದಾಚೆಗೆ ವಾಹನ ಅಂದರೆ ಸೈಕಲ್ಲು, ಮೋಟರ ಸೈಕಲ್ಲು ಇಟ್ಟು ನಾಟಕದ ಪುಸ್ತಕ ಹಿಡಿದು ಸಖಾರಾಮನನ್ನು ಹುಡುಕುತ್ತ ಜನ ಬರುತ್ತಿದ್ದರು. ಅವನಿಗೆ ಕೊಡುವ ಪಾತ್ರ ಇಂಥದ್ದೇ ಎಂದು ನಿಶ್ಚಿತವಿರಲಿಲ್ಲ. ಹೀರೊ, ಖಳನಾಯಕ, ಕೊಡಂಗಿ, ಕೆಲವೊಮ್ಮೆ ಹೆಣ್ಣು ಪಾತ್ರಗಳೂ ಇರುತ್ತಿದ್ದವು. ಅವನು ಚೆನ್ನಾಗಿ ಹಾಡುತ್ತಿದ್ದ. ದುಂಡು ಮುಖದ, ಗೌರವರ್ಣದ ಸುಂದರ ಹುಡುಗ. ಅವನ ಹಾವಭಾವಗಳಲ್ಲಿ ನಾಟ್ಯಮಯತೆ ಇತ್ತು. ತನ್ನ ಹದಿನಾಲ್ಕನೆಯ ವಯಸ್ಸಿನಲ್ಲಿ ಆತ ಮೊದಲ ಬಾರಿ ಮುಖಕ್ಕೆ ಬಣ್ಣ ಹಚ್ಚಿಕೊಂಡಿದ್ದ. ಈಗ ಅವನಿಗೆ ಇಪ್ಪತ್ತೊಂದು. ನಲವತ್ತಕ್ಕೂ ಹೆಚ್ಚು. ನಾಟಕಗಳಲ್ಲಿ ಪಾತ್ರ ನಿರ್ವಹಿಸಿದ್ದಾನೆ.

ಒಮ್ಮೊಮ್ಮೆ ನಾಲ್ಕೆಂಟು ದಿನ ಮನೆಯಿಂದ ಮಾಯವಾಗಿ ಬಿಡುತ್ತಿದ್ದ. ತಾಯಿ ದಾರಿ ಕಾಯುತ್ತ ಕೂತಿರುತ್ತಿದ್ದಳು. ತಂದೆ ಬಾಯಿಗೆ ಬಂದಂತೆ ಬಯ್ಯುತ್ತಿದ್ದ. 'ಮನೆಗೆ ಬಂದರೆ

ಕಾಲಿಡಾಕ್ಕೆ ಜಿಡೂದಿಲ್ಲ. ಕಾಲು ಮುರಿದ್ಹಾಕ್ತೀನಿ. ಆದರೆ ಮಾಜಾಳಿ ಸಂತೆ ಪೇಟೆಗೆ ಹೋದಾಗ ಬರುವಾಗ ದಾರಿಯಲ್ಲಿ ಯಾರಾದರೂ ಭೇಟಿಯಾದರೆ ಅವರ ಮುಂದೆ ತನ್ನ ಮಗನ ಗುಣಗಾನ ಮಾಡುತ್ತಿದ್ದ.

ಮಳೆಗಾಲದಲ್ಲಿ ಮಾತ್ರ ಮನೆಯಲ್ಲಿ ತೆಪ್ಪಗೆ ಬಿದ್ದಿರುತ್ತಿದ್ದ. ತಂದೆ-ತಾಯಿ ಹೇಳಿದ್ದೆಲ್ಲ ಮಾಡುತ್ತಿದ್ದ. ಆದರೆ ದೀಪಾವಳಿ ಮುಗಿದರೆ ಸಾಕು, ಅವನು ಮತ್ತೆ ಹೊಸ ಹುರುಪಿಗೆ ಮರಳುತ್ತಿದ್ದ. ಹೊರಗಿನ ಹವೆ ಮೂಗಿನಿಂದ ಎಳೆದುಕೊಳ್ಳುವಂತೆ ಕಾಣುತ್ತಿದ್ದ. ಜಾತ್ರೆಗಳಲ್ಲಿ, ಸಂತೆಗಳಲ್ಲಿ ಓಡಾಡುತ್ತಿರುತ್ತಿದ್ದ, ನಾಟಕಗಳನ್ನು ನೋಡುತ್ತಿದ್ದ. ನಾಟಕಗಳಲ್ಲಿ ಅಭಿನಯಿಸುತ್ತಿದ್ದ ಕೂಡ. ಕೈಗೇ ಸಿಕ್ಕುತ್ತಿರಲಿಲ್ಲ.

ಆಗ ತಂದೆ ತಾಯಿ ಗೊಳಾಡುತ್ತಿದ್ದರು. "ಕೆಲಸಕ್ಕೆ ಬಾರದೆ ಹೋದ. ಸ್ವಲ್ಪ ಕರ್ರಗೆ ಇಲಿಯ ಮರಿಯ ಹಾಗೆ ಹುಟ್ಟಿದ್ದರೆ ನಮ್ಮ ಮುದಿಪ್ರಾಯದಲ್ಲಿ ಆಧಾರವಾದರೂ ಆಗುತ್ತಿದ್ದ" ಎಂದು.

ಒಂದು ಇಳಿ ಮಧ್ಯಾಹ್ನ ಒಂದು ಹುಡುಗಿ ಬಂದಳು. ಹೊಲದಲ್ಲಿ ನಡೆದು ಬರುತ್ತಿರವುದು ಕಾಣಿಸಿತು. ಕೈಯಲ್ಲಿ ಪರ್ಸ್ ಬಿಸಿಲಿಗೆ ಕೊಡೆ, ಮೈಮೇಲೆ ನುಣುಪಾದ ಸೀರೆ, ಕೆಂಪು ಕುಪ್ಪುಸ ಧರಿಸಿದ್ದಳು. ಅವಳು ಕೇರಿಯ ಕಡೆಗೆ ಮುಖ ಮಾಡಿ ನಿಂತ ಸೀತವ್ವನ ಸೊಸೆ ತಾರಾಳಿಗೆ "ನನಗ ಸಖಾರಾಮನನ್ನು ಭೆಟ್ಟಿಯಾಗಬೇಕಿತ್ತು" ಎಂದಳು. ತಾರಾ ಕೊಂಚ ಗಡಬಡಿಸಿದಳು. ಏನೂ ಮಾತನಾಡದೆ ಉತ್ಸುಕತೆಯಿಂದ, ಆತ್ಮೀಯ ಭಾವನೆಯಿಂದ ಅವಳನ್ನೇ ನೋಡುತ್ತ ನಿಂತಳು. ಮುಂದೆ ಅವಳಿಗೇನೇನಿಸಿತೊ ಗೊತ್ತಿಲ್ಲ ಅವಳು ನೇರವಾಗಿ ಹೋಗಿ ಅವಳ ಕುಪ್ಪುಸವನ್ನು ಮುಟ್ಟಿ ನೋಡಿದಳು. ಹುಡುಗಿ ಕೊಂಚ ಗಾಬರಿಯಾಗಿ ಹಿಂದೆ ಸರಿದಳು. ತಾರಾ ಕೇಳಿದಳು. "ನೀ ವಾಸನೆಯ ಸಾಬೂನಿನಿಂದ ಜಳಕ ಮಾಡ್ತಿಯಲ್ಲ?"

ಸ್ವಲ್ಪ ದೂರ ಆವಿಗೆಯ ಅಂಗಳದಲ್ಲಿ ಧುರ್ಮುನ ಮಗ ಪ್ರೇಮಾನಂದ ನಿಂತಿದ್ದ. ಅವನು ಆಶ್ಚರ್ಯದಿಂದೆಂಬಂತೆ ಕಣ್ಣಗಲಿಸಿ ಅವಳನ್ನೇ ನೋಡುತ್ತಿದ್ದ. ತಾರಾ ಅವನಿಗೆ ಹೇಳಿದಳು. "ಸಖಾರಾಮನಿಗೆ ಸಿಗಾಕ ಬಂದಾಳ ಈಕಿ. ಅಂವಾ ಮನ್ಯಾಗಿದ್ರ ಕರ್‍ಕೊಂಬಾ ದೌಡ."

ತುಕಾರಾಮನಿಗೆ ಹಿಂದಿನ ಮಾವಿನ ಮರದಿಂದ ಗಿಡುಗ ಹಾರಿ ತಲೆಯ ಮೇಲಿಂದ ಫಡಫಡನೆ ಸದ್ದು ಮಾಡುತ್ತ ಹೋದಂತೆ ಭಾಸವಾಯಿತು. ಯಾರೋ ತನ್ನ ತಲೆಯ ಮೇಲೆ ಮುಷ್ಟಿಯಿಂದ ಗುದ್ದಿದಂತೆನಿಸಿತು. ಅವನು ಓಡುತ್ತ ಹೋಗಿ ಸಖಾರಾಮನನ್ನು ಕರೆದುಕೊಂಡು ಬಂದ. ಎಲ್ಲರೂ ಸ್ವಲ್ಪ ದೂರ ದೂರ ಸರಿದು ನಿಂತರು. ವಾಡೆಯ ಒಳಗೆ ಬರುವ ದಾರಿಯಲ್ಲಿ ಕಲ್ಲಿನ ಎರಡು ಕಂಬಗಳಿದ್ದವು. ಅಲ್ಲೊಂದು ಬೇಲಿ ಇದ್ದಿರಬೇಕು. ಈಗ ಅಲ್ಲಿ ಬೇಲಿ ಇರಲಿಲ್ಲ. ಆದರೆ ಹಿಂದೆ ಅವರು ನಿಲ್ಲಿಸಿದ ಬೇಲಿಯ ಗಿಡ್ಡ ಕಂಬಗಳು ಮಾತ್ರ ಇದ್ದವು. ಆ ಹುಡುಗಿ ಹೋಗಿ ಆ ಬೇಲಿಯ ಕಂಬಕ್ಕೆ ಒರಗಿ ನಿಂತಳು. ಅಲ್ಲಿಯೇ ಇಬ್ಬರೂ ನಿಂತು ಮಾತು ತೊಡಗಿದರು.

ವಾಡೆಯಲ್ಲಿದ್ದ ಪ್ರತಿಯೊಬ್ಬರೂ ಕಣ್ಣೆವೆ ಮುಚ್ಚದೆ ಅವರಿಬ್ಬರಿಗೆ ಕಾಣದಂತೆ ಮರೆಯಲ್ಲಿ ನಿಂತು ನೋಡುತ್ತಿದ್ದಳು. ಸಖಾರಾಮನ ತಂದೆ-ತಾಯಿಯೂ ನಿಂತು

ನೋಡುತ್ತಿದ್ದರು. ಅವರಿಗೆ ಮಗನ ಬಗ್ಗೆ ಒಮ್ಮೊಮ್ಮೆ ಸಿಟ್ಟೂ ಬರುತ್ತಿತ್ತು. ಕನಿಕರವೂ ಅನಿಸುತ್ತಿತ್ತು. ಆದರೆ ಮುಂದೆ ಬರುವ ಧೈರ್ಯವಿರಲಿಲ್ಲ.

ಈ ಹುಡುಗಿಯನ್ನು ಎಲ್ಲೋ ನೋಡಿದಂತೆ ಎಲ್ಲರಿಗೂ ಅನ್ನಿಸುತ್ತಿತ್ತು... ಅದೇ ಹೊತ್ತಿಗೆ ಯಶವಂತನ ಕಿರಿಯ ಮಗ ನರಸಿಂಹ ಎಲ್ಲರಿಗೂ ಸಣ್ಣ ದನಿಯಲ್ಲಿ ಹೇಳುತ್ತ ಹೊರಟಿದ್ದ. "ಆಕಿ ಹೆಸರು ಶೀಲಾ. ನಾಟಕದ ನಟಿ ಅವಳು. 'ಯಾತನಾ ಚಕ್ರ' ನಾಟಕದಲ್ಲಿ ಆಕಿ ಭ್ಹಾಳ ಛಲೊ ಪಾರ್ಟ ಮಾಡಿದ್ಲು"

ಆಗ ಜನರೂ 'ಹಾಂ... ಹೌಂದ ನೋಡ. ಬಣ್ಣ ಹಚ್ಚಿಕೊಂಡಾಗ ಭಾಳ ಸಲ ನೋಡೀವಿ ಆಕೀನ್ನ" ಎಂದು ಎಲ್ಲರೂ ಹೂಂಗುಟ್ಟಿದರು.

ಸುಮಾರು ಒಂದು ಗಂಟೆ ಅವರಿಬ್ಬರೂ ಮಾತಾಡಿರಬೇಕು. ಸಖಾರಾಮ ಕೇರಿಯ ಕಡೆಗೆ ಕೈತೋರಿಸುತ್ತ ಹೇಳಿದ. "ಈಕಿನ್ನ ರಸ್ತೆ ಮಟಾ ಮುಟ್ಟಿಸಿ ಬರ್‌ತೀನಿ" ಎಂದು ಎಲ್ಲರಿಗೂ ಹೇಳಿದಂತೆ ಹೇಳಿದ.

ಅವರಿಬ್ಬರೂ ಹೋದ ನಂತರ ಕೇರಿಯ ಎಲ್ಲ ಜನರು ದಬದಬಿಸಿ ಬಂದು ಗುಂಪು ಕಟ್ಟಿ ನಿಂತರು. ಸುಮ್ಮನೆ ಗುಸು ಗುಸು ಶುರು ಮಾಡಿದರು. "ನೋಡ್ರಿ ಹ್ಯಾಂಗದ್ಯ ಹೆಣ ಮಗಳು ಒಬ್ಬಾಕೀ ಗಂಡು ಮಗನ್ನ ಭೆಟ್ಟಿಯಾಗಾಕ ಬಂದಾಳ. ಆಕಿ ಧೈರ್ಯ, ಹುಶಾರಿತನ ನೋಡ್ರಲ್ಲ"

"ಎಷ್ಟು ಚಂದಾಗಿ ಎಷ್ಟು ನುಣುಪಾಗಿ ಮಾತಾಡ್‌ತಿದ್ಲಲ್ಲ"

"ಏನಾದರೂ ನಾಟಕದ ಕೆಲ್ಸ ಇರಾಕ್‌ಬೇಕು"

"ಲಗ್ಣಾಗಿಗ್ಣಾ ಮಾಡಿಕೊಳ್ಳುದಿಲ್ಲಲ್ಲ?"

ಇದಕ್ಕೆ ಅವನ ತಂದೆ ಪುರುಷ ಸ್ವಲ್ಪ ಜಾಣತನದಿಂದಲೇ ಹೇಳಿದ. "ಮದವಿ ಆಗೂದಾದ್ರ ಯಾರ ಬ್ಯಾಡಾಂತಾರೆ ಅವರಿಗೆ."

ಈ ಮಾತಿಗೆ ಸೀತವ್ವ ಅಂದಳು.

"ನಿನ್ನ ಮನಿ ಮಣ್ಣ ತುಳೀತಾಳಲ್ಲ. ಮಣ್ಣಿನ ಗಡಗಿ ಬುಟ್ಟಿ ತಲೆಯ ಮೇಲಿಟ್ಟುಕೊಂಡು ಗಡಗಿ ಮಾರಾಕ ಹೋಗ್ತಾಳಲ್ಲ ಮತ್ತ?"

*　　*　　*

**ಈ** ದಿನಗಳಲ್ಲಿ ಮಾವಿನ ಗಿಡಕ್ಕೆ ಮೈತುಂಬ ಹಣ್ಣು ಬಿಟ್ಟಿದ್ದವು. ದಿನವಿಡೀ ಮಾವಿನ ಮರದ ಕೆಳಗೆ ಮಕ್ಕಳ ಕಲರವ ಇತ್ತು. ಅಳಿಲು, ಕಾಗೆಗಳು ಯಾವ ಮಾವಿನ ಹಣ್ಣಿನತ್ತ ಹೋಗಿ ಹಣ್ಣನ್ನು ಕುಕ್ಕುತ್ತವೆಯೆಂದು ಅಂದಾಜಿಸಿ ಹುಡುಗರು ಅತ್ತ-ಇತ್ತ ಧಾವಿಸುತ್ತಿದ್ದರು. ಮಾವಿನ ಗಿಡದ ಕೆಳಗೆ 'ಡುಬ್' ಎಂಬ ಸದ್ದು ಕೇಳಿದರೆ ಸಾಕು ಮಕ್ಕಳ ಗೋಲೆ ಅತ್ತ ಓಡುತ್ತಿತ್ತು. ಹಗಲು ಹೊತ್ತಿನಲ್ಲಿ ಮಕ್ಕಳ ಓಡಾಟವಿದ್ದರೆ ರಾತ್ರೆಯ ಹೊತ್ತಿನಲ್ಲಿ ಮುದುಕರ ಓಡಾಟ. ವಯಸ್ಸಾದವರೆಲ್ಲ ಕೈಯಲ್ಲೊಂದು ಚೀಲವೊ, ಬಟ್ಟೆಯೊ ತೆಗೆದುಕೊಂಡು ಬಿದ್ದ ಹಣ್ಣು ಆರಿಸಿ ತರಲು ಹೋಗುತ್ತಿದ್ದರು. ಒಂದು ರಾತ್ರೆ ಹಣ್ಣು ಸಂಗ್ರಹಿಸಲು ಬಂದ ಹೆಣ್ಣು ಮಗಳೊಬ್ಬಳು 'ಭೂತ ಭೂತ' ಎಂದು ಕೂಗುತ್ತ ಯಾರದೋ ಮನೆಯೊಳಗೆ ನುಗ್ಗಿದಳು. ಅವಳು ಕೊಂಚ ಸುಧಾರಿಸಿಕೊಂಡ ಮೇಲೆ ಕೇಳಿದರೆ 'ನಾನು ಹಣ್ಣ ಆರಸಾಕ ಹತ್ತಿದ್ದೆ. ನನ್ನ ಹಿಂದೆ ಒಂದು ಭೂತ ನನ್ನ ಹಿಂದ ಹಣ್ಣ ಆರಿಸಿಕೊಂಡ ಬರ್ತಿತ್ತು.

ನಾನ್ ನಿಂತ್ರ ಅದೂ ನಿಲ್ಲತಿತ್ತು. ನಾನು ಬಗ್ಗಿದರ ಅದೂ ಬಗ್ಗತಿತ್ತು." ಅದೇ ಹೊತ್ತಿಗೆ ಧರ್ಮುವಿನ ಹೆಂಡತಿ ತುಳಸಿ ಅಲ್ಲಿಗೆ ಬಂದಳು. ಅವಳು ಮೊದಲೇ ಕಪ್ಪು ಬಣ್ಣದವಳು. ಅದರಲ್ಲೂ ಅವಳು ಕಪ್ಪು ಬಣ್ಣದ ಸೀರೆ ಉಟ್ಟಿದ್ದಳು. ತಲೆಯ ಮೇಲಿನ ಕೂದಲು ಗಾಳಿಗೆ ಸೆಟೆದು ನಿಂತಿದ್ದವು. ಅವಳು ಹೇಳಿದಳು. "ನಾನೂ ಈಕಿ ಹಿಂದ ಹಣ್ಣ ಆರಸಾಕ ಹತ್ತಿದ್ದೆ. ಈಕಿ ನನ್ನ ನೋಡಿ 'ಭೂತ ಭೂತ' ಅಂತ ಹೊಯ್ಕೋತ ಓಡಿ ಬಂದ್ಲು ನೋಡ್ರಿ"

ಅದೊಂದು ಹೆಮ್ಮರ. ನಾಲ್ಕೂ ಕಡೆಗೆ ಅದರ ಟೊಂಗೆಗಳು ಪಸರಿಸಿದ್ದವು. ಅದು ಕೇರಿಗೇ ದಟ್ಟ ನೆರಳು ನೀಡುತ್ತಿತ್ತು. ಅದಕ್ಕೆ ರೆಂಬೆಗಳು ಮರವನ್ನು ಇಬ್ಭಾಗಿಸಿದಂತೆ ಒಡೆದಿತ್ತು. ಬಿರು ಬಿಸಿಲ ದಿನಗಳಲ್ಲಿ ಕುಂಬಾರರ ಮನೆ ಈ ಮರದ ನೆರಳಿನಲ್ಲೆ ನಡೆಯುತ್ತಿತ್ತೆಂದರೆ ತಪ್ಪಲ್ಲ. ಈ ಮರದ ತಣ್ಣೆಳಲ್ಲಿ ಅವರು ಶೆಕೆಯ ಬೇಗೆ ಮರೆಯುತ್ತಿದ್ದರು. ಗಂಡಸರಂತ ಹಗಲಿರುಳು ಇಲ್ಲಿಯೇ ಬಿದ್ದಿರುತ್ತಿದ್ದರು. ಅದರಲ್ಲೂ ಮರದ ಕೆಳಗೆ ಮಾವಿನ ಹಣ್ಣಿನ ಸುರಿಮಳೆ ಬೇರೆ! ಆ ದಿನಗಳಲ್ಲಿ ಮಾವಿನ ಮರದ ಕೆಳಗೆ ಮನುಷ್ಯರಷ್ಟೇ ಅಲ್ಲ ಮರದ ಮೇಲೂ ಅಳಿಲು, ಗುಬ್ಬಿಗಳ ಸಂತೆ ನೆರೆಯುತ್ತಿತು. ಜನ ಅಳಿಲು ತಿಂದು ಒಗೆದ ಮಾವಿನ ಹಣ್ಣು ತುಂಬ ರುಚಿಯಾಗಿರುತ್ತದೆ ಎಂದು ಹೇಳುತ್ತಿದ್ದರು. ಈ ಮರ ಯಾರು ನೆಟ್ಟರು, ಯಾವಾಗ ಚಿಗುರಿ ಮೇಲೆ ಬಂತು ಅಂತ ಯಾರಿಗೂ ಗೊತ್ತಿಲ್ಲ. ಆದರೆ ಅಲ್ಲಿದ್ದ ಎಂಟು ಕುಂಬಾರರ ಮನೆಗಳಿಗೂ ಸಂಬಂಧಿಸಿದ ಸಮಾನ ಮರವಾಗಿತ್ತು. ಅಂದರೆ ಈ ಮರ ಕುಂಬಾರರು ಇಲ್ಲಿಗೆ ಬರುವ ಮೊದಲೇ ಎಷ್ಟೋ ವರ್ಷಗಳ ಹಿಂದೆ ಬೆಳೆದು ನಿಂತಿತ್ತು.

ಈ ಮರದ ಮೇಲೆ ಹತ್ತಿ ಹಣ್ಣೋ, ಕಾಯೋ ಕೆಳಗಿಳಿಸುವಂತಿರಲಿಲ್ಲ. ಹಣ್ಣಾಗಿ ಬಿದ್ದಾಗಲೆ ಆರಿಸಿ ತಿನ್ನಬೇಕಾಗಿತ್ತು. ಮಾವಿನ ಹಣ್ಣು ತುಂಬ ಸಿಹಿಯಾಗಿತ್ತು. ಆದರೆ ಒಳಗೆ ಮಾತ್ರ ನಾರುನಾರಾಗಿತ್ತು. ಆ ಹಣ್ಣು ಕತ್ತರಿಸಿ ತಿನ್ನುವಂಥದಲ್ಲ ಚೀಪಿ ತಿನ್ನಬೇಕಾಗಿತ್ತು. ಮಕ್ಕಳಂತೂ ಗಂಟೆಗಟ್ಟಲೆ ಹಣ್ಣು ಚೀಪುತ್ತ ಕೂತಿರುತ್ತಿದ್ದರು. ಕೆಲವು ಊರುಗಳಲ್ಲಿ ಹಣ್ಣಿಗೆ ಕ್ಷಾಮವಿದ್ದರೂ ಈ ಮರಕ್ಕೆ ಮಾತ್ರ ಮೈತುಂಬ ಕಾಯಿ ಬಿಡುತ್ತಿದ್ದವು. ಅದು ದೇವರ ತೇರಿನಂತೆ ಹೂವಿನಿಂದ ತುಂಬಿರುತ್ತಿತ್ತು. ಅದಕ್ಕೆ ಗೊಂಚಲು ಗೊಂಚಲುಗಳಾಗಿ ಕಾಯಿಗಳು ಜೋಲುತ್ತಿದ್ದವು. ಮಾವಿನ ಮರದ ರಚನೆಯೇ ಸೊಗಸಾಗಿತ್ತು. ಅದು ಪುರುಷನ ರೂಪ ಪಡೆದು ನಿಂತಂತೆ ವಿಶಾಲವಾಗಿ ಬೆಳೆದಿತ್ತು.

ಯಾವಾಗದರೊಮ್ಮೆ ಭೂಮಿಯ ಒಡೆಯರು ಬಂದು ಹಕ್ಕಿನಿಂದ ಹಣ್ಣು ಆರಿಸಿಕೊಂಡು ಹೋಗುತ್ತಿದ್ದುದುಂಟು. "ನಮ್ಮ ಪೂರ್ವಜರು ನಿಮಗೆ ಇರಲು ಕೊಟ್ಟು ಜಾಗೆಯಿದು" ಎಂದು ಪರೋಕ್ಷವಾಗಿ ಅವರು ತಮ್ಮ ಹಕ್ಕು ಪ್ರಸ್ತಾಪಿಸುತ್ತಿದ್ದರು.

ಕಾರ್ತಿಕದಲ್ಲಿ ಒಂದು ದಿನ ಇಬ್ಬರು ಅಂಬಿಗರು ಬಂದು ಮರದ ಮೇಲೆ ದಬ್... ದಬ್... ಎಂದು ಕೈಯಿಂದ ಬಡಿದರು. "ಪೊಕಳ ಇಲ್ಲದ್ಹಂಗ ಕಾಣತದ" ಎಂದು ಹೇಳುತ್ತ ಅಲ್ಲಿಯೇ ನಿಂತಿದ್ದ ಯಶವಂತನನ್ನು "ಈ ಮರ ಕೊಡ್ತೀರಾ ನಮಗೆ ದೋಣಿ ಮಾಡೂಕ್ಕೆ ಬೇಕು" ಎಂದರು.

ಯಶವಂತ ಸುಮ್ಮನೆ ಹೋಗಿ ಮಣ್ಣು ಕಲಿಸುತ್ತ ಕುಳಿತ ಘನಶ್ಯಾಮ, ಶಿವರಾಮ, ಗೋಪಾಳನನ್ನು ಕರೆದುಕೊಂಡು ಬಂದ. "ಈ ಅಂಬಿಗರು ಮರ ಕೇಳಾಕ ಬಂದಾರ"

ಗೋಪಾಳನು ಕೇರಿಯತ್ತ ಕೈ ಹೊರಳಿಸುತ್ತ ಹೇಳಿದ. 'ಇಲ್ರಿ' ಕೊಡೂದಿಲ್ಲ... ನಮ್ಮ ಎಲ್ಲಾರ್ರೂ ಆಸ್ತಿ ಅಂದ್ರ ಇದೊಂದೇ. ನಮ್ಮ ಎಲ್ಲಾರ್ದು ಹಕ್ಕಿನ ಮರ. ಈ ಮರದ ಕಾಯಿಗೆ ಹುಡುಗರು ಒಂದ ವರ್ಸದಿಂದ ಕಾಯ್ತಾ ಕೂಡತಾವ. ಹುಡುಗರು, ದೊಡ್ಡವರು ಅಂತಿಲ್ಲ ಎಲ್ಲಾರೂ ಹಣ್ಣಿಗಂತ ಕಾದಕೊಂಡ ಕುಂತಿರತಾರ. ಈ ಹಣ್ಣಿನ ರುಚಿಗೆ ಈ ಹಳ್ಳಿ ಹುಡುಗ್ಯಾರು ತವರು ಮನೆಗೆ ಓಡೋಡಿ ಬರತಿರ್‍ತಾರ."

ಶಿವರಾಮನು "ನಮ್ಮ ತಲೀಮ್ಯಾಗ ನೆಳ್ಳು ಹಿಡಿದಾನ ಕಾಣೂದಿಲ್ಲ ನಿಮಗ? ನೆಳ್ಳು ಹ್ಯಾಂಗ ಮಾರಿಕೊಂಡು ತಿನ್ನಾಕ ಬರ್‍ತದ? ಅಂಥ ದರಿದ್ರ ಪರಿಸ್ಥಿತಿ ಬಂದಿಲ್ಲ ನಮಗ. ಬ್ಯಾಸಗಾಗ ಈ ನೆಳ್ಳೇ ನಮ್ಮ ಮನಿಯಾಗ್ಯದ."

"ಆದ್ರ ನಾವು ಭ್ಹಾಳ ಕಿಮ್ಮತ್ತ ಕೊಡಕ ತಯಾರದೀವಿ." ಅವರಲ್ಲೊಬ್ಬ ಅಂಬಿಗ ತನ್ನ ಚಡ್ಡಿಯ ಕಿಸೆಯ ಮೇಲೆ ಒಂದೆರಡು ಬಾರಿ ಮೆಲ್ಲನೆ ಕೈಯಾಡಿಸಿದ. ಹಿರಿಯನಾದ ಘನಶಾಮ ಸಾದಾ ಮನುಷ್ಯ. ಆದರೆ ಕೊಂಚ ಏನಾದರೊಂದು ಗೊಣಗುಟ್ಟುತ್ತ ಇರುತ್ತಿದ್ದ. ಅವನು ಬಿಸಿಯಾದ "ಒಂದು ಲಕ್ಸ ಕೊಟ್ರೂ ಕೊಡಾಂಗಿಲ್ಲರಿ. ನಮ್ಮ ಮೂಲ ಪುರುಷನ ಮ್ಯಾಗ ಕೊಡಲಿ ನಡಸಾಕ ನೋಡತೀರೇನು?"

ಹೊರಡುವಾಗ ಅಂಬಿಗನೊಬ್ಬ ಹೇಳಿದ. ನಾವೇನು ಪೋರ್ಸಿನಿಂದ ಕಡಕೊಂಡು ಹೋಗಾಕ ಬರ್‍ತದೇನು? ನಿಮ್ಮದೆ ಒಬ್ಬ ಮನಶಾ ತಂದು ತೋರಿಸ್ದ ಈ ಮರ. "ಕೊಡ್ತಾರ ಕೇಳು" ಅಂದಿದ್ದ.

ಅವನ ಕೊನೆಯ ಮಾತಿನಿಂದ ಮಾತ್ರ ಕುಂಬಾರರೆಲ್ಲ ಸ್ತಂಭೀಭೂತರಾದರು.

* * *

ಅವನ ಹೆಸರು ಧರ್ಮ್ಯಾ. ಆದರೆ ಅವನು ಎಂದೂ ಧರ್ಮದಿಂದ ನಡೆದುಕೊಂಡ ದಾಖಲೆಯಿಲ್ಲ. ಗಟಗಟ ಸರಾಯಿ ಗಂಟಲಲ್ಲಿ ಸುರಿಯುತ್ತಿದ್ದ ಮತ್ತು ಯಾರದಾದರೂ ಜಗಲಿಯ ಮೇಲೆ ಹೋಗಿ ಮಲಗುತ್ತಿದ್ದ. ತೊಡೆಯನ್ನು ಬೆಳಕಿಗೆ ಒಡ್ಡಿ ಖರಖರ ತುರಿಸುತ್ತಿದ್ದ. ಬಾಯಿಯಲ್ಲಿ ಉಗುಳು ಇಟ್ಟುಕೊಂಡು ಎಷ್ಟೋ ಹೊತ್ತು ಅದನ್ನೇ ಮೆಲಕು ಹಾಕುತ್ತಿದ್ದ. ಅನಂತರ ಎಲ್ಲಿಯಾದರೂ ಪಚ್ ಅಂತ ಉಗುಳುತ್ತಿದ್ದ.

ಯಾರದಾದರೂ ಮನೆಯ ಮಾಡಿನಡಿಯಲ್ಲಿ ಕೆಂಪು ಕೆಂಪು ಉಗುಳು ಮೆತ್ತಿರುತ್ತಿತ್ತು. ಯಾವುದೇ ಹೆಣ್ಣು ಮಗಳಿರಲಿ ಅವಳ ಸೊಂಟವನ್ನು ಸೂಕ್ಷ್ಮವಾಗಿ ನೋಡಿ ಹೇಳುತ್ತಿದ್ದ. "ಗಂಡ ಜಬರದಸ್ತಾಗಿ ಹಾಲು-ಹೈನ ಹಾಕ್ತಾನಂತ ನಿನ್ನ ಸೊಂಟದಾಗ ಬ್ರಾಹ್ಮರ ಹೆಂಗಸರ್‍ಧಂಗ ನೆರಿಗೆ ಬೀಳತಾವ. ಏನ್ ಬೇಕಾದ್ರೂ ಅನ್ನು ನಿನ್ನ ಗಂಡ ಮಡಕೆ ಮಾಡೂದರಲ್ಲಿ ಜಾಣ. ಆಕಳು ಮತ್ತು ಗವಳಿ ಒಂದಾದ್ರ ಆಕಳು ಯಾವಾಗ ಬೇಕಾದರೂ ಹಾಲ ಕೊಡತೈತಂತ ಕೇಳಿಯೊ ಇಲ್ಲೊ."

ಅವನ ಬಾಯಿಗೆ ಯಾರೂ ಬೀಳುತ್ತಿರಲಿಲ್ಲ. ಜಗಳಕ್ಕೆ ನಿಂತರೆ ಹೊಲಸು ಹೊಲಸು ಮಾತಾಡುತ್ತಿದ್ದ. ಮಾತಾಡಿ ಮಾತಾಡಿ ನಾಲಿಗೆಯ ತುರಿಕೆ ನೀಗಿಸಿಕೊಳ್ಳುತ್ತಿದ್ದ. ಅದರಲ್ಲೂ ಸರಾಯಿ ಬೇರೆ. ಅವನು ಕೆಲವೊಮ್ಮೆ ಸರಾಯಿ ಕುಡಿದು ಕೂಗು ಹಾಕುತ್ತಾನೆಯೋ ಸುಮ್ಮನೆ ಕೂಗುತ್ತಿದ್ದಾನೋ ತಿಳಿಯುತ್ತಿರಲಿಲ್ಲ. ಅವನಿಗೆ ಹೆಂಡತಿಯಿದ್ದಳು. ಬೆಳೆಯು

ತ್ತಿರುವ ಮಕ್ಕಳಿದ್ದರು. ಆದರೆ ಇವನ ಸುಗ್ಗಿ ಹಬ್ಬಕ್ಕೆ ಕೊನೆಯಿರಲಿಲ್ಲ. ಇವನ ತಾಯಿ ಇವನ ಕಾಟ ತಡೆಯಲಾರದೆ ವಿಷದ ಕಾಯಿಗಳನ್ನು ತಿಂದು ಆತ್ಮಹತ್ಯೆ ಮಾಡಿಕೊಂಡಳು ಎಂದು ಹೇಳುತ್ತಾರೆ. ಸೋಜಿಗವೆಂದರೆ ಇವನ ಅಜ್ಜಿ ಅಂದರೆ ತಂದೆಯ ತಾಯಿ ಇನ್ನುವರೆಗೆ ಬದುಕಿದ್ದಳು. ಅವಳು ತೊಂಬತ್ತು ಸಮೀಪದ ವರ್ಷದವಳಾಗಿಯೂ ಅವರಿವರ ಮನೆಯಲ್ಲಿ ಏನು ಸಿಕ್ಕರೂ ತಿಂದು ಬದುಕುತ್ತಿದ್ದಳು. ಕೈಯಲ್ಲಿ ಕೋಲು ಹಿಡಿದು ಅತ್ತಿತ್ತ ಒಲಿಯುತ್ತ ರೈತರ ಮನೆಗೆ ಹೋಗಿ ಭಿಕ್ಷೆ ಬೇಡಿ ಅವರು ಕೊಟ್ಟದ್ದನ್ನು ತಿಂದು ದಿನ ದೂಡುತ್ತಿದ್ದಳು.

ಧರ್ಮು ಸರಾಯಿಯ ಭಟ್ಟಿ ಹಾಕುವ ದೊಡ್ಡ ಹಂಡೆಯಂತಹ ಮಡಕೆ ಮಾಡುವುದರಲ್ಲಿ ಪರಿಣತನಾಗಿದ್ದ. ಅವನು ಅಂಥ ಭಟ್ಟಿಯ ಹಂಡೆಗಳನ್ನು ಹೆಚ್ಚಾಗಿ ಮಾಡುತ್ತಿದ್ದ.

ಎತ್ತರವಾದ ಮಡಕೆಗಳನ್ನು ಎದ್ದು ನಿಂತು ತುಂಬ ಮೃದುವಾಗಿ ತಟ್ಟುತ್ತ ಕಲಾತ್ಮಕವಾಗಿ ಮಾಡುತ್ತಿದ್ದ. ಆವಿಗೆಯಲ್ಲಿ ಇಂಥ ಒಂದೇ ಹಂಡೆಯನ್ನಿಟ್ಟು ಬೆಂಕಿ ಹಾಕಿ ಸುಡುತ್ತಿದ್ದ. ಚಿಕ್ಕ ಚಿಕ್ಕ ಗಡಿಗೆಗಳನ್ನು ಮಾಡಲು ಅವನ ಕೈ ಸರಿಹೋಗುತ್ತಿರಲಿಲ್ಲ. ಅವನು ಮಾಡಿದ ಭಟ್ಟಿಯ ಹಂಡೆಗಳು ಆಗೊಂದ, ಪಾಳೊಳೆ, ಸಾದೊಳಶೆ, ಗಾಂವಡೊಂಗರಿ ವರೆಗಿನ ಊರುಗಳಿಗೆ ತಲುಪುತ್ತಿತ್ತು. ಹೊಳೆಯ ಆಚೆಗೆ ಮೋಟರ್ ಸೈಕಲ್ ಬಂದು ನಿಂತರೆ ಸಾಕು ಧರ್ಮು ಕೇರಿಯ ಕಡೆಗೆ ಓಡೋಡಿ ಬರುತ್ತಿದ್ದ. ಕೇವಲ ಸದ್ದಿನಿಂದಲೇ ಅವರು ಎಲ್ಲಿಂದ ಬಂದಿದ್ದಾರೆ ಎಂದು ಗುರುತಿಸುತ್ತಿದ್ದ. ಸರಿಯಾಗಿ ಅವರನ್ನು ಹಿಡಿದು ಮಾತಾಡಿಸುತ್ತಿದ್ದ. ಹದಿನೈದು ದಿನಗಳಲ್ಲಿ ಹಂಡೆ ತಯಾರಾಗುತ್ತಿತ್ತು. ಅನಂತರ ಅವರು ಆ ಹಂಡೆಯನ್ನು ತಲೆಯ ಮೇಲಿಟ್ಟುಕೊಂಡು ಹೊಳೆಯನ್ನು ದಾಟಿಸಿ ಅವರು ತಂದ ಪಿಕ್‌ಅಪ್‌ನಲ್ಲಿಡುತ್ತಿದ್ದರು.

ಹೆಂಡ ಸಾಕಷ್ಟು ಕುಡಿದು ರಾತ್ರೆಯಿಡೀ ಹಂಡೆ ತಟ್ಟುವುದರಲ್ಲಿ ಮಗ್ನನಾಗಿ ಬಿಡುತ್ತಿದ್ದ. ಈ ಕೇರಿಯಲ್ಲಿ ತಾನೊಬ್ಬನೇ ಇಷ್ಟು ದೊಡ್ಡ ಹಂಡೆ ಮಾಡಬಲ್ಲ ಏಕೈಕ ವ್ಯಕ್ತಿ ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ. ಊರಲ್ಲಿ ಹೋದರೆ "ಈ ಕುಂಬಾರರಿಗೆ ಮಣ್ಣು ಹದ ಮಾಡಾಕೂ ಬರೂದಿಲ್ಲ. ದೊಡ್ಡ ಮಡಕೆ ಮಾಡಲೂ ಬರೂದಿಲ್ಲ. ಇವರು ಸಣ್ಣ ಪುಟ್ಟ ಮಣ್ಣಿನ ಗಡಿಗೆಗಳನ್ನ ಮಾಡೂದು. ಬಾಕಿದೇನು ಬರತೈತಿ ಇವರಿಗೆ. ದೊಡ್ಡ ಹಂಡೆ ಮಾಡಾಕ ಹೊಂಟ್ರ ಇವರ ಸೊಂಟ ಮುರದ ಬೀಳತೈತಿ. ಇಂಥ ಕೆಲಸ ಎಲ್ಲಾರೂ ಮಾಡಾಕ ಬರೂದಿಲ್ಲ. ಮರ್ದ ಗಂಡಸರ ಮಾಡಬೇಕು" ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ.

ಶಿವರಾಮ ಕುಂಬಾರ ಕುಂಬಾರಿಕೆಯ ಎಲ್ಲ ಕೆಲಸಗಳಲ್ಲಿಯೂ ಪರಿಣತನಾಗಿದ್ದ. ತಿಗರಿ ತಿರುಗಿಸಿ ಅದರ ಮೇಲೆ ಮಣ್ಣಿನ ಮುದ್ದೆಯಿಟ್ಟು ಎಷ್ಟೊಂದು ಸೊಗಸಾದ ಮಡಕೆಗಳನ್ನು ರಚಿಸುತ್ತಿದ್ದ. ತಿಗರಿ ತಿರುಗುವ ತಾಲದಲ್ಲಿ ಅವನ ಕೈ ಬುಗುರಿಯ ಮೇಲೆ ತಿರುಗಿದಂತೆ ನಾಜೂಕಾಗಿ ತಿರುಗಿ ಸುಂದರವಾದ, ಕಲಾತ್ಮಕವಾದ ಗಡಿಗೆಗಳನ್ನು ಹೊರತೆಗೆಯುತ್ತಿದ್ದ. ಅವನ ಕೈ ಮಣ್ಣಿನ ಮೇಲೆ ಸುಮ್ಮನೆ ತಿರುಗದೆ ಅದರಿಂದ ಒಂದು ಬಗೆಯ ಸಂಗೀತ ಹೊರಟು ಒಂದು ಕಲಾತ್ಮಕ ರೂಪ ಪಡೆಯುತ್ತಿತ್ತು. ಅವನು ನೀರು ಕಾಯಿಸುವ, ಭತ್ತ ಬೇಯಿಸುವ ಹಂಡೆಗಳನ್ನು, ಅಡ್ಡ ಹಂಡೆಗಳನ್ನೆಲ್ಲ ಮಾಡುತ್ತಿದ್ದ. ಆದರೆ ಹೆಂಡದ ಭಟ್ಟಿ ಹಾಕುವ ಹಂಡೆ ಮಾಡುವ ಕೆಲಸಕ್ಕಿನ್ನು ಕೈ ಹಾಕಿರಲಿಲ್ಲ. ಎದ್ದು ನಿಂತು,

ಬಗ್ಗಿ ನಿಂತು ಮಾಡುವ ಆ ಕೆಲಸಕ್ಕೆ ತುಂಬ ತಾಳ್ಮೆ ಬೇಕಾಗುತ್ತಿತ್ತು. ಆದರೆ 'ತಾನು ಆ ಕೆಲಸ ಕೈಗೆತ್ತಿಕೊಂಡರೆ ಯಶಸ್ವಿಯಾಗಿ ಮಾಡಿ ಮುಗಿಸಬೇಕು' ಎಂಬ ಆತ್ಮ ವಿಶ್ವಾಸ ಅವನಲ್ಲಿತ್ತು. ಹಂಡೆ ಹೊಟ್ಟೆಯ ಆಕಾರದಿಂದ ಕೊಂಚ ದೊಡ್ಡದಾದರೇನು ಇತರ ಹಂಡೆಗಳಂತೆಯೇ ಅಲ್ಲವೆ?

ಒಂದು ದಿನ ಒಂದು ಮೋಟರ ಸೈಕಲ್ ಹೊಳೆಯ ಆಚೆಗೆ ಬಂದು ನಿಂತುದು ಕುಂಬಾರನಿಗೆ ಕಂಡಿತು. ಧರ್ಮು ಖುಷಿಯಿಂದ ವಾಡೆಯ ಕಡೆಗೆ ಓಡಿ ಬಂದು ನಿಂತು ಕೊಂಡ. ಈಗ ಮತ್ತೊಂದು ಹೊಸ ಹಂಡೆ. ಒಂದು ಹಂಡೆಯಿಂದ ಹದಿನೈದು-ಇಪ್ಪತ್ತು ದಿನಗಳ ತುತ್ತು. ಹೆಂಡ ಮತ್ತು ಬೀಡಿಗಳ ಖರ್ಚು. ಈ ಜನ ತಮಗೆ ಗಣಪತಿಯ ಮೂರ್ತಿ ಮಾಡಲು ಬರುವುದಿಲ್ಲವೆನ್ನುತ್ತಾರೆ. ನಾನು ಮಾಡಿದ ಭಟ್ಟಿಯ ಹಂಡೆಗಳಿಂದ ಸಾವಿರಾರು ಕೊಡ ಹೆಂಡ ಇಳಿಸಿರಬೇಕು.

ಆ ಇಬ್ಬರೂ ಮೋಟರ್ ಸೈಕಲ್ಲಿನವರು ನೇರವಾಗಿ ಬಂದು ಧರ್ಮುನ ಮುಂದೆ ನಿಂತುಕೊಂಡರು. ಅವರು ಬಾಯಿ ತೆರೆಯುವುದರಲ್ಲಿ ಧರ್ಮುನೇ ಹೇಳಿದ "ಭಟ್ಟಿಯ ಹಂಡೆ ಬೇಕಲ್ಲ. ನಾ ಮಾಡಿಕೊಡ್ತೀನಿ. ಈ ವಾಡೆಯಲ್ಲಿ ಭಟ್ಟಿಯ ಹಂಡೆ ಮಾಡೋದ್ರಲ್ಲಿ ನನಗ ಬಿಟ್ಟರ ಮತ್ತ್ಯಾರೂ ಸಿಗೋದಿಲ್ಲ."

'ಶಿವರಾಮ ನಮಗೆ ಬೇಕಾಗಿದ್ದ. ನಾವು ಪಾಳೊಳೆಯಿಂದ ಬಂದೇವಿ. ಅವನ ಸೋದರತ್ತಿ ಮಗ ನಮಗ ಕಳಿಸ್ಯಾನ. ಅಂವ ನಮ್ಮ ನೆರೆಮನಿಯಲದಾನ. ಅಂವಾ ಬ್ಹಾಳ ಮಜಬೂತ ಭಟ್ಟಿ ಹಂಡಿ ಶಿವರಾಮ ತಯಾರಿಸಿಕೊಡ್ತಾನಂತ ನಮಗ ಹೇಳ್ಯಾರ."

"ಛೆ... ಛೆ.... ಅಂವಾ ಮಾಡೂದಿಲ್ಲರಿ. ಅವನಿಂದ ಆಗೂ ಹ್ವಾರೆ ಅಲ್ಲ ಬಿಡ್ರಿ."

"ಆದರ ಅವರ ಸೋದರತ್ತಿ ಮಗಾ ಕಳಿಸ್ಯಾನಲ್ರಿ ನಮಗ? ಅವನ ಮನೀನ ತೋರಿಸ್ರಿ ಸಾಕು"

ಧರ್ಮು ಅವನ ಮನೆಯ ಕಡೆಗೆ ಬೆರಳು ತೋರಿಸುತ್ತ "ಅಲಿ ನೋಡ್ರಿ... ಅಲ್ಲಿ ಝೋಪಡಿ ಹಂಗ ಕಾಣತೈತಲ್ಲ. ಅಧ ಮನೀರಿ. ಅಂಗಳದಾಗ ಸೀರಿ-ಅಂಗಿ ಒಣಗಿಸ್ಯಾರ ನೋಡ್ರಿ."

ಅವರು ಶಿವರಾಮನ ಮನೆಯ ಕಡೆ ಹೊರಟರು. ಧರ್ಮು ಅವರ ಹಿಂದೆ ವಟಗುಡ ತೊಡಗಿದ. "ಅವನು ಮಾಡಿದ ಹಂಡಿ ಒಂಥ ತಿಂಗಳಾಗ ಲಟಕ್ ಅಂತದ. ಮರದಿಂದ ಹೆಂಡ ಇಳಿಸುವ ಮಂದಿ ಗೇಣುದ್ದ ಚಡ್ಡಿ ಹಾಕ್ಕೋತಾರೆ. ಹೊರಗ ಅಡ್ಡಾಡೂ ಮುಂದ ಜಬರದಸ್ತ ಅಂಗಿ ಚಡ್ಡಿ ಹಾಕ್ಕೊಂಡು ಸೊಕ್ಕಿನಿಂದ ನಡದಾಡತಾರ."

ಅವರು ಹೋಗಿ ಶಿವರಾಮನ ಮನೆಯ ಮಾಡಿನ ಬಳಿ ನಿಂತುಕೊಂಡರು. ಅವನು ಕೋಣೆಯಲ್ಲಿ ಗಡಿಗೆ ಮಾಡುತ್ತ ಕೂತಿದ್ದ. "ನಿನ್ನ ಸೊದರತ್ತಿ ಮಗ ಸಹದೇವ ನಮಗ ಕಳಿಸ್ಯಾನ. ನಮಗೊಂದು ಭಟ್ಟಿ ಹಂಡಿ ಮಾಡಿಕೊಡಬೇಕು. ನಾವು ಪಾಳೋಳೆಯಿಂದ ಬಂದೀವಿ."

ಸಹದೇವನ ಹೆಸರು ಕೇಳಿದೊಡನೆ ಶಿವರಾಮನಿಗೆ ಬಹಳ ಸಂತೋಷವಾಯಿತು. "ಎಷ್ಟು ದಿವಸಾ ಆತಪಾ, ಒಬ್ಬರ ಮನಿಗೊಬ್ಬರು ಮುಟ್ಯೋದಿಲ್ಲ. ಹಿಂದಿನ ವರ್ಷ ಒಮ್ಮೆ

ಛಂಡಿಜಾತ್ರೆಗೆ ಬಂದಿದ್ದನಪ್ಪ. ಎಲ್ಲಾರೂ ಆರಾಮದಾರಲ್ಲ. ಟ್ರಕ್ ತಗೋಂಡಾರ ಅಂತ ಕೇಳಿದ್ದೆ. ತಂದೀನ ಕುಂಬಾರ ಧಂದಿ ಬಿಟ್ಟಿದ್ದನಲ್ಲ."

ಅವರು ಭಟ್ಟಿ ಇಡುವ ಹಂಡೆ ಬೇಕು ಎಂದು ಹೇಳಿದಾಗ ಶಿವರಾಮನಿಗೆ ಖುಷಿಯಾಯಿತು. ಅವನ ಹೃದಯ ಹಿಗ್ಗಿತು. ನಾನು ಎಷ್ಟೋ ಹಂಡೆ–ಸಣ್ಣದು ದೊಡ್ಡದು ಮಾಡೇನಿ. ನಾನು ಭಟ್ಟಿ ಹಂಡೆ ಮಾಡಿರಲಿಕ್ಕಿಲ್ಲ. ಆದರೆ ನನ್ನ ತಂದೆ ಮಾಡೋದನ್ನು ನೋಡಿದ್ದೀನಿ. ಅವನಿಗೆ ನಾನು ಸಹಾಯ ಮಾಡಿದ್ದೀನಿ. ಅವನು "ಹದಿನೈದ ದಿವಸದಾಗ ಮಾಡಿ ಕೊಡತಿದ್ದ ಭಟ್ಟಿ ಹಂಡಿ. ಹತ್ತು ವರ್ಷವಾದ್ರೂ ಜಪ್ಪನ್ನಂಗಿಲ್ಲ. ಒಳ್ಳೆ ಮಣ್ಣು ನಮ್ಮ ಕೆರ್‍ಯಾಗ ಸಿಗತದ. ಭ್ಯಾಳ ನುಣುಪಾಗಿರತೈತಿ."

ಅವರಲ್ಲಿ ಒಬ್ಬ ವಾಚಾಳಿಯಾಗಿದ್ದ, ನಗು ಮುಖದವನಿದ್ದ. ಈಗ ಮಂದ್ಯಲ್ಲ ತಾಮ್ರದ ಹಂಡ್ಯಾಗ ಸರಾಯಿ ಕಾಯಿಸ್ತಾರ. ನಾವ್ ಇನ್ನೂ ಮಟ ಬದಲಾಗಿಲ್ಲ. ಮಣ್ಣಿನ ಹಂಡ್ಯಾಗ ತಯಾರಾದ ಸರಾಯಿ ರುಚೀನೇ ಬ್ಯಾರೆ. ಮೈಗೂ ಒಳ್ಳೇದು. ಗೋವೆಯಲ್ಲಿ ಬ್ರಾಹ್ಮಣ ಕ್ರಿಶ್ಚಿಯನ್‌ರಿಗೆ ಮಣ್ಣಿನ ಹಂಡ್ಯಾಗ ತೆಗೆದ ಸರಾಯೀನ ಬೇಕು. ನಮ್ಮ ಅಜ್ಜ, ಅಪ್ಪ ಎಲ್ಲಾರೂ ಮಂಣಿನ ಹಂಡ್ಯಾಗ ಸರಾಯಿ ತೆಗೀತಿದ್ರು, ನಾವೂ ಅದನ್ನ ನಡಸ್ಕೊಂಡು ಬಂದೇವಿ. ಕಟ್ಟಿಗೆ ಸ್ವಲ್ಪ ಜಾಸ್ತಿ ಬೇಕಾಗತದ ಅನ್ನೂ ಮಾತು ಖರೇ ಐತಿ."

ಈ ಬಗ್ಗೆ ಶಿವರಾಮ ಹೇಳಿದ "ತಾಮ್ರದ ಹಂಡಿ, ಸ್ಟೀಲ್, ಪ್ಲ್ಯಾಸ್ಟಿಕ್‌ನ ಪಾತ್ರೆಗಳು ಕುಂಬಾರರ ಹೊಟ್ಟಿ ಮ್ಯಾಗ ಕಲ್ಲು ಹೇರ್‍ಯಾವ. ಇವೆಲ್ಲ ಕುಂಬಾರರ ಹೊಟ್ಟಮ್ಯಾಗ ಹೊಡಿಯೋ ಶೋಧ ಐತಿರಿ. ಈಗ ಈ ಧಂದಿ ಮುಗಿದು ಹೋತು ನೋಡ್ರಿ."

ಇನ್ನು ಹದಿನೈದು ದಿನಗಳಲ್ಲಿ ಹಂಡೆ ಒಯ್ಯಲು ಪಿಕ್ ಅಪ್ ತೆಗೆದುಕೊಂಡು ಬರುತ್ತೇವೆ ಎಂದು ಹೇಳಿ ಅವರು ಹೊರಟು ಹೋದರು. ನಿಶ್ಚಿತಾಗಿ ಯಾವ ದಿನ ಬರುತ್ತೇವೆ ಎಂದು ಹೇಳಿಯೂ ಹೋದರು. ಶಿವರಾಮ ಮನಸ್ಸಿನಲ್ಲಿಯೇ ಅಂದ ನಾನು ಇವರಿಗಾಗಿ ಬಂಗಾರದ ಹಂಡೇನೂ ಮಾಡಿಕೊಟ್ಟೇನು.

ಅವರು ಹೋದ ಮೇಲೆ ಧರ್ಮುç ಸುಮ್ಮನೆ ಮನೆಯ ಮುಂದೆ ಬಂದು ನಿಂತ. "ಶಿವರಾಮೂ... ಈಗ ಬಂದು ಹ್ವಾದರಲ್ಲ. ಅವರ ಗುರುತು ಹಿಡೀತೀನಿ ನಾನು. ಒಳ್ಳೆ ಮಂದಿ ಅಲ್ಲ. ಜಗಳಕ್ಕ ಮುಂದ. ರೊಕ್ಕ ಕೊಡೂ ಮುಂದ ಅಳಸ್ತಾರ. ಅವರ ನಾದಕ್ಕ ಬೀಳ ಬ್ಯಾಡಾ."

ಶಿವರಾಮ ಒಂದೇ ಸಮನೆ ಮಡಕೆ ಮಾಡುವುದರಲ್ಲಿ ತಲ್ಲೀನನಾಗಿದ್ದ. ಅವನು ಧರ್ಮುçಗೆ ಶಾಂತ ರೀತಿಯಲ್ಲಿ ಹೇಳಿದ. "ನನ್ನ ಸೋದರಳಿಯಾ ಕಳಿಸ್ಯಾನ ಅವರನ್ನು. ನೀ ನಡುವೆ ಬಾಯಿ ಹಾಕ್‌ಬ್ಯಾಡಾ." ಆಗ ಅವನು ಕೊಂಚ ಬಗ್ಗಿದ. ಕಣ್ಣುಗಳು ಹೊರಬಂದ, ಹೊಲಸು ಗಡ್ಡದ ಧರ್ಮುç ಅಂಗಳದಿಂದ ನಡೆದು ಹೋದಂತೆ ಕಂಡಿತು.

* * *

ಎರಡನೆಯ ದಿನವೇ ಶಿವರಾಮ ಹೆಂಡತಿಯನ್ನು ಕರೆದುಕೊಂಡು ಗುಡ್ಡದ ಕಡೆಗೆ ನಡೆದ. ಅಲ್ಲಿಂದ ನುಣುಪಾದ ಕೆಮ್ಮಣ್ಣು ಐದು ಮಕರಿ ತುಂಬಿ ತಂದ.

ಅದೇ ದಿನ ಸಂಜೆ ಕೆರೆಗೆ ಹೋಗಿ ಅಷ್ಟೇ ಅಂಟು ಮಣ್ಣು ತೆಗೆದುಕೊಂಡು ಬಂದ. ಮಣ್ಣು ಒಣಗಿದ್ದರೂ ಅವನು ಮತ್ತಿಷ್ಟು ಬಿಸಿಲಿಗೆ ಹಾಕಿ ಒಣಗಿಸಿದ. ಅನಂತರ ಸುತ್ತಿಗೆಯಿಂದ ಹೆಂಟೆ ಜಪ್ಪಿ ಪುಡಿ ಮಾಡಿದ, ಸೋಸಿ ತೆಗೆದ. ಬಟ್ಟೆಯಲ್ಲಿ ಸೋಸಿದ ನಯವಾದ ಮಣ್ಣು. ಗುಡ್ಡದ ಮಣ್ಣಿಗೆ ಕೆರೆಯ ಮಣ್ಣು ಸೇರಿಸಿ ಕಲಿಸಿ ಒಂದು ದೊಡ್ಡ ತೊಟ್ಟಿಯಲ್ಲಿ ನೆನೆ ಹಾಕಿದ. ರಾತ್ರಿ ಒಂದು ಆಳು ಎತ್ತರದ ದೊಡ್ಡ ಹಂಡೆ ಅವನ ಕಣ್ಣೆದುರು ಸುಳಿಯ ತೊಡಗಿತು.

ಎರಡು ದಿನ ಚೆನ್ನಾಗಿ ಮಣ್ಣು ಕೊಳೆಸಿ, ನೆನೆಸಿ ದೊಡ್ಡದೊಂದ ಮಣ್ಣಿನ ಮುದ್ದೆ ಮಾಡಿ ತಿಗರಿಯ ಮೇಲಿಟ್ಟು ನಿಧಾನವಾಗಿ ಸುತ್ತಿ ಅದಕ್ಕೊಂದು ಕೊರಳು ರೂಪಿಸಿದ.

ಮಣ್ಣು ಒಣಗಲು ಬಿಡುವಂತಿರಲಿಲ್ಲ. ಹಸಿಯಿದ್ದಾಗಲೇ ಹಂಡೆಯ ಕೆಲಸ ಆರಂಭಿಸಬೇಕಿತ್ತು. ಹಂಡೆಯ ಸರಿಯಾದ ಎತ್ತರ ಅವನಿಗೆ ಸರಿಯಾಗಿ ತಿಳಿದಿರಲಿಲ್ಲ. ಧರ್ಮುಗೆ ಕೇಳಿ ಪ್ರಯೋಜನವಿರಲಿಲ್ಲ. ಅವನು ಎದ್ದು ಹಿರಿಯರಾದ ಪಾಂಡುರಂಗ ದಾದಾನ ಕಡೆಗೆ ಹೋದ. ಪಾಂಡುರಂಗ ದಾದಾನಿಗೆ ವಯಸ್ಸಾಗಿತ್ತು, ಸರಿಯಾಗಿ ಕಿವಿ ಕೇಳುತ್ತಿರಲಿಲ್ಲ. ಕಣ್ಣಿಗೆ ದಪ್ಪ ಕನ್ನಡಕ ಹಾಕಿಕೊಳ್ಳುತ್ತಿದ್ದ. ಅದು ಒಂದು ಕಡೆ ಮುರಿದು ಹೋಗಿದ್ದರಿಂದ ಅವನು ಅದನ್ನು ದಾರದಿಂದ ಕಿವಿಗೆ ಸುತ್ತಿಕೊಳ್ಳುತ್ತಿದ್ದ. ಅವನ ಒಬ್ಬ ಮಗ ವಿಶ್ರಾಮ ಮತ್ತು ಮತ್ತೊಬ್ಬ ಗೋಪಾಳ ಒಂದೇ ಮನೆಯಲ್ಲಿ ಬೇರೆ ಬೇರೆ ಒಲೆ ಹೂಡಿ ಇರುತ್ತಿದ್ದರು. ಅವನ ಕಿರಿಯ ಸೊಸೆ ತುಂಬ ಒಳ್ಳೆಯವಳಾಗಿದ್ದಳು. ದೊಡ್ಡ ಸೊಸೆ ಅಡಿಗೆ ಮಾಡುವಷ್ಟರಲ್ಲಿ ತಾನು ಅಡಿಗೆ ಮಾಡಿ ಮಾವನನ್ನು 'ಅಪ್ಪಾ ಊಟಕ್ಕೆ ಬನ್ನಿ' ಎಂದು ಕರೆಯುತ್ತಿದ್ದಳು. ಪಾಂಡು ದಾದಾ ಯಾರು ಮೊದಲು ಕರೆಯುತ್ತಾರೆ. ಅವರಲ್ಲಿ ಹೋಗಿ ಊಟಕ್ಕೆ ಕುಳಿತುಕೊಳ್ಳುತ್ತಿದ್ದ. ಆಗ ಒಬ್ಬರು ಗಂಜಿ ಹಾಕಿದರೆ ಮತ್ತೊಬ್ಬರು ಪಲ್ಲೆ ತಂದು ಬಡಿಸುತ್ತಿದ್ದರು. ಒಬ್ಬರಲ್ಲಿ ಅನ್ನ ಉಣ್ಣುತ್ತಿದ್ದರೆ ಮತ್ತೊಂದು ಸೊಸೆ ಮೀನಿನ ತುಂಡು ಬಡಿಸಿ ಹೋಗುತ್ತಿದ್ದಳು. ಅವನು ಮೊದಲು 'ಗುಮಟೆ ಗಡಿಗೆಯನ್ನೇ ಹೆಚ್ಚಾಗಿ ತಯಾರಿಸುತ್ತಿದ್ದ. ಆದ್ದರಿಂದ ಅವನಿಗೆ 'ಗುಮಟೆಕಾರ ಪಾಂಡು' ಎಂದು ಕರೆಯುತ್ತಿದ್ದರು.

ಶಿವರಾಮ ಹಂಡೆಯ ಎತ್ತರ ಕೇಳುತ್ತಿದ್ದಂತೆ ಶಿವರಾಮನಿಗೆ ಕೇಳಿಸದಿರುವಷ್ಟು ಸಣ್ಣ ಸೀಳು ಸ್ವರದಲ್ಲಿ ದೊಡ್ಡಕೆ ಹೇಳಿದ "ಈ ವಾಡೆಯಲ್ಲಿ ನೀನೊಬ್ಬ ದೊಡ್ಡ ಕುಂಬಾರ. ನಿನ್ನ ಎದೆಯ ಮಟ್ಟ ಎತ್ತರ ಇದ್ರ ಸಾಕು."

ಅಂಗಳದ ಹೊರಗೆ ನೆರಳಿನಲ್ಲಿ ಮಣ್ಣು ಕಲಿಸಿ ಶಿವರಾಮ ಹಂಡೆ ಮೆತ್ತಲು ಆರಂಭ ಮಾಡಿದ. ಜಾರುವ ನೀರಿನಲ್ಲ ಮಣ್ಣು ಒದ್ದೆ ಮಾಡಿಕೊಳ್ಳುತ್ತಿದ್ದ. ಮತ್ತೆ ಮತ್ತೆ ಮಣ್ಣು ಮೆತ್ತಿ ಕೈ ಪೆಟಣೆಯಿಂದ ಸುತ್ತಲು ಆಕಾರ ಬರುವಂತೆ ಬಲಗೈಯಿಂದ ಬಡಿಯುತ್ತಿದ್ದ. ಎಡ ಕೈಯಲ್ಲಿ ಬೋಳು ಕಲ್ಲು ಹಿಡಿದು ಒಳಬದಿಯಲ್ಲಿ ತಟ್ಟುತ್ತಿದ್ದ.

ಹಂಡೆಯ ಹೊಟ್ಟೆ ಆಕಾರ ಪಡೆಯುವವರೆಗೆ ಅವನು ತಿಗರಿಯ ಮೇಲಿಟ್ಟು ತಟ್ಟುತ್ತಲೇ ಇದ್ದ. ಅದುವರೆಗೆ ಬಗ್ಗಿ ನಿಂತು ಕೆಲಸ ಮಾಡುತ್ತಿದ್ದ ಅವನು ಈಗ ಎದ್ದು ನಿಂತು ಕೆಲಸ ಮಾಡ ತೊಡಗಿದ. ಮಧ್ಯೆ ಮಧ್ಯೆ ಬಗ್ಗಿ ತಟ್ಟುವ ಕೆಲಸವನ್ನು ಮಾಡುತ್ತಿದ್ದ. ಒಂದು ಕೈಯಲ್ಲಿ ಕೈ ಪೆಟಣೆ ಮತ್ತು ಮತ್ತೊಂದು ಕೈಯಲ್ಲಿ ನಯವಾದ ಕಲ್ಲು. ಈ ಮಧ್ಯೆ ನೀರು ಸಿಂಪಡಿಸಲು ನೀರು ತೆಗೆದುಕೊಳ್ಳಲು ಆಗಾಗ್ಗೆ ಬಗ್ಗೆ ಬೇಕಾಗುತ್ತಿತ್ತು. ಕೂತು ಕೂತು

ಕುಂಬಾರನ ಸೊಂಟ ಓಡಿದು ಹೋಗಿತ್ತು. ಅದರಲ್ಲೂ ಬಗ್ಗಿ ಕೆಲಸ ಮಾಡುವಾಗಲಂತೂ ಕೇಳುವ್ರುದೇ ಬೇಡ. ನೀರು ಎತ್ತುವಾಗಂತೂ ಕುಂಬಾರನ ಸೊಂಟ ಮುರಿದು ಬೀಳುವಂತಾಗಿತ್ತು. ಅಂತೂ ಇಂತೂ ತಟ್ಟಿ ತಟ್ಟಿ ಹಂಡೆ ಎದೆಯ ಮಟ್ಟಕ್ಕೆ ಬಂತು.

ಶಿವರಾಮ ಹಂಡೆ ರಚಿಸಿದ್ದ. ಅದೂ ಅಳೆತ್ತರದ ಹಂಡೆ! ಸುಂದರ, ಗೋಲಾಕಾರದ ಕುತ್ತಿಗೆ ಹೊಟ್ಟೆ ನಾಲ್ಕೂ ಕಡೆ ಅಳತೆಗೆ ಸರಿಯಾದ ಆಕಾರ ಪಡೆದಿತ್ತು. ಅದು ರಥದ ಶಿಖರದಂತೆ, ದೇವಾಲಯದ ಮೇಲಿನ ಗೋಪುರದಂತೆ ಕಾಣುತ್ತಿತ್ತು. ಶಿವರಾಮ ತನ್ನ ಶಕ್ತಿಯುಕ್ತಿಯನ್ನೆಲ್ಲ ಉಪಯೋಗಿಸಿ ಹಂಡೆ ತಯಾರಿಸಿದ್ದ. ಅಖಂಡ ಒಂದೂವರೆ ದಿನ ಆತ ಹಂಡೆ ತಟ್ಟುತ್ತಿದ್ದ.

ಅವನು ಮೂರು ದಿನ ಬಿಸಿಲಿನಲ್ಲಿ ಒಣಗಿಸಿದ. ನಾಲ್ಕನೆಯ ದಿನ ಸುಡಲು ಆವಿಗೆಯಲ್ಲಿ ಹಾಕಿದ. ಆವಿಗೆಯ ಬಾಯಿಯಲ್ಲಿ ಮೂರು ನಾಲ್ಕು ಬಾರಿ ಸ್ವಲ್ಪ ಸ್ವಲ್ಪ ಕೆಂಡ ದೂಡಿ ಆವಿಗೆ ಸ್ವಲ್ಪ ಬಿಸಿ ಮಾಡಿಕೊಂಡ. ಬಳಿಕ ಒಳಗೆ ಇಟ್ಟ ಹುಲ್ಲು ಮತ್ತು ಚಿಕ್ಕ ಪುಟ್ಟ ಕಟ್ಟಿಗೆಗೆ ಬೆಂಕಿಯಿಟ್ಟ. ಆವಿಗೆಯ ಸಂದು, ಕಿಂಡಿಗಳಿಂದ ಹೊಗೆ ಹೊರಡತೊಡಗಿತು.

ಆದರೆ ಏನಾಯಿತು? ಎಲ್ಲಿ ತಪ್ಪಿತೊ ಗೊತ್ತಾಗಲಿಲ್ಲ. ಆವಿಗೆಯಲ್ಲಿಟ್ಟು ಹಂಡೆ ಬಿಸಿ ಮಾಡುತ್ತಿದ್ದಂತೆ ಬಿರುಕು ಬಂದು ಒಡೆದ ಸದ್ದು ಬರತೊಡಗಿತು. ಅರಳು ಹುರಿದಂತೆ ಸದ್ದು ಬರತೊಡಗಿತು. ಶಿವರಾಮನಿಗೆ ಆಶ್ಚರ್ಯವಾಯಿತು. ಇದೇನು ದೇವರೇ! ಎಲ್ಲಿ ಏನು ತಪ್ಪಾಯಿತು? ಅವನಿಗೆ ದುಗುಡದಿಂದ ಮೈಯೆಲ್ಲ ಬೆವರು ಬಿಟ್ಟಿತು. ಅವನು ಕೂಗಿ ಗೋಪಾಳ, ಶಂಕರ, ವಿಶ್ರಾಮನನ್ನು ಕರೆದ. ಧರ್ಮು ಕೂಡ ಅಲ್ಲಿಗೆ ಬಂದಿದ್ದ. ಸಂಪೂರ್ಣ ಕುಂಬಾರ ಕೇರಿಯೇ ಅಲ್ಲಿ ಜಮಾಯಿಸಿ ಏನು ತಪ್ಪಿದೆ ಎಂದು ಯೋಚಿಸ ತೊಡಗಿತು. ಆವಿಗೆಯ ಮುಖದಿಂದ ಬೆಂಕಿಯ ಜ್ವಾಲೆಗಳು ಹೊರಗೆ ತೂರಿ ಬರುತ್ತಿದ್ದವು. ಅದರ ಶಿಖೆ ಅಲ್ಲಿ ಸೇರಿದ ಜನರ ಮುಖದ ಮೇಲೆ ಕೆಂಪುಕೆಂಪಾಗಿ ಪ್ರತಿಫಲಿಸಿತು. ಧರ್ಮುನ ಮುಖದ ಮೇಲೆ ಸ್ವಲ್ಪ ಅದು ಕೊಂಚ ದಪ್ಪವಾಗಿ ಪ್ರತಿಫಲಿಸಿತ್ತು. ಮೇಲಿನ ಮಾವಿನ ಗಿಡ ಮಾತ್ರ ರಾತ್ರೆಯ ತಂಪಿನಲ್ಲೂ ತನ್ನ ಕಪ್ಪು ನೆರಳು ಕತ್ತಲಿನ ಮೇಲೆ ಪಸರಿಸಿ ನಿಂತಿತ್ತು. ಹಂಡೆ ಒಳಗೆ ಒಂದು ಬಗೆಯ ವಾದ್ಯದ ಸದ್ದು ಹೊರಡಿಸುತ್ತ ಕುದಿಯುತ್ತಿತ್ತು.

ಯಶವಂತ ಕೇಳಿದ 'ಶಿವರಾಮಾ, ಮಣ್ಣು ಹದವಾಗಿ, ಅಂದರೆ ಸಾಣಿಸಿ, ಕೊಳೆಸಿದ್ದಿಯಲ್ಲವೇ?"

"ಗುಡ್ಡದ ಮಣ್ಣು ಮತ್ತು ಕೆರೆ ಮಣ್ಣು ತಂದು ಗಾಳಿಸಿ, ಒಣಗಿಸಿ, ಕೊಳೆಸಿ ಹದವಾಗಿ ಕಲಿಸಿದ್ದೆ. ಮಣ್ಣಂದ್ರ ಚಿಕಣಿ ಆದಾಂಗಾಗಿತ್ತು. ಜಪ್ಪುವಾಗ ಜಾರುತ್ತಿತ್ತು ನೋಡ್ರಿ"

ಗೋಪಾಳ ಅಂದ "ಆವಿಗೆ ಅಂದ್ರ ಯಜ್ಞಕಾರ್ಯ ಮಾಡಿದ್ಹಾಂಗ. ಒಂದೀಟು ಮುಟ್ಟುಬೆಟ್ಟು ಆದ್ರೂ ಆವಿಗೆ ಬಿರುಕು ಬಿಡ್ತದಂತಾರ"

ಶಿವರಾಮ ಸುಮ್ಮನೆ "ಛೆ... ಛೆ... ಅಂದ. ನನ್ನ ಆವಿಗ್ಯಾಗ ಇನ್ನೂ ಮಟ ಒಂದು ಗಡಿಗೀನು ಒಡೆದಿದ್ದಲ್ಲ."

ಆವಿಗೆಯಿಂದ ಹಂಡೆಯ ಬಿರುಕು ಬಿಟ್ಟು ತಡ್ ತಡ್ ಸದ್ದು ಕೇಳಿಸಲಾರಂಭಿಸಿತ್ತು. ಘನಶ್ಯಾಮ ಹೇಳಿದ. "ಓಂದೊಮ್ಮೆ ಸೈರು ಆವಿಗೆ ಬಿಸಿ ಮಾಡಲು ಹೊಂಟಾಗ ಪುಡಿ ಕಟ್ಟಿಗೆ

ಮತ್ತು ಹುಲ್ಲಿಗೆ ಮೊದಲು ಬೆಂಕಿ ಹಿಡಕೊಂಡು ಬಿಟ್ಟತಂತ. ಹಿಂಗಾಗಿ ಆವಿಗ್ಯಾಗಿನ ಮೂರ್‍ನಾಲ್ಕು ಗಡಿಗೆಗಳು ಬೂದಿಯಾಗಿ ಬಿದ್ವಂತೆ. ಪಾಪ ಸೈರೂ ಸಾಯೂಮಟಾ ನೆನಪ ಮಾಡಿ ಹೇಳತಿರ್‍ತಿದ್ದ."

ಬಳಿಕ ಆವಿಗೆಯ ಮೇಲೆ ಮಣ್ಣಿನಿಂದ ಕಲಿಸಿ ಮೆತ್ತಿದ ಹುಲ್ಲಿಗೆ ಬೆಂಕಿ ಹೊತ್ತಿ ಕೊಂಡಿತು. ಹಂಡೆ ಬಾಯಿ ಬಿಟ್ಟಿತು. ನೋಡಿದರೆ ಹಂಡೆಯ ಮೇಲೆ ಅಲ್ಲಲ್ಲಿ ಬಿರುಕು ಬಿಟ್ಟ ಕೆಲವು ಕಡೆ ಸುಟ್ಟು ಪದರು ಬಿಟ್ಟು ಹೋಗಿದ್ದವು. ಹಂಡೆಯ ಕಂಠವೂ ಒಡೆದಿತ್ತು. ಅದರಿಂದ ಹಂಡೆ ಅಕರಾಳ ವಿಕರಾಳವಾಗಿ ಕಾಣುತ್ತಿತ್ತು. ಅದನ್ನು ನೋಡುತ್ತಿದ್ದಂತೆ ಶಿವರಾಮನ ಕಣ್ಣಲ್ಲಿ ನೀರು ಸುರಿಯಿತು. ಅವನು "ನಾನು ಅವರಿಗೆ ಹದಿನೈದು ದಿವಸಗಳಲ್ಲಿ ಹಂಡೆ ಮಾಡಿಕೊಡ್ತೀನಂತ ಮಾತು ಕೊಟ್ಟಿದ್ದೆ. ಹ್ವಾದ ಎಂಟೊಂಭತ್ತು ದಿವಸ ಅದೇ ಕೆಲಸ ಮಾಡ್ಕೋತ ಕುಂತಿದ್ದೆ. ಮಾತಿಗೆ ತಪ್ಪಿದ್ಹಂಗ ಆಗ್ತದಲ್ಲಪ್ಪೊ. ದೇವರೇ!"

ಕ್ರಮೇಣ ಜನ ಅಲ್ಲಿಂದ ಚದುರಿದರು. ಹೋಗುವಾಗ ಶಂಕರ ಗೊಣಗುತ್ತಿದ್ದ. "ಕಲಿಯುಗ ಅಂದ್ರ ಇಧ್ರ ನೋಡ್ರಿ, ಸಂತ ತುಕಾರಾಮ ಮೊದಲೇ ಹೇಳ್ಯಾನ. "ಕಲಿಯುಗದಾಗ ಎರೆಮಣ್ಣಿನ ಹುಳದ ಬೆನ್ನಿಗೆ ಹಲ್ಲು ಮೂಡತಾವಂತ. ಇಲ್ಲಂದ್ರ ಆವಿಗ್ಯಾಗ ಯಾರು ಸುತ್ತಿಗೆ ಹಿಡಕೊಂಡು ಕುಂತಿದ್ರು?"

ಸೀತವ್ವನೂ ಆಗಿನಿಂದ ಅಲ್ಲೇ ನಿಂತಿದ್ದಳು. ಅವಳು ಅಂದಳು "ಮನಷ್ಯಾರ ತಪ್ಪ ಮಾಡತಾರ ಮತ್ತ ದೇವರ, ದೆವ್ವಗಳ ತಲೀಗ ಕಟ್ಟತಾರ, ಅಳತೀ ಯಾಕ? ನಿ ಗಂಡಸ ಅದೀ. ಮತ್ತ ಹಂಡಿ ಮಾಡು"

ಧರ್ಮು ಬಹಳ ಹೊತ್ತಿನಿಂದ ಅಲ್ಲೇ ನಿಂತಿದ್ದ. ವ್ಯಂಗ್ಯವಾಗಿ ನಗುತ್ತಿದ್ದ. ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಅವನು ಹೇಳಿದ. "ಆದದ್ದು ಆಗಿ ಹೋತು. ಕೈಗೆ ಬಲ ಇಲ್ಲ. ಜಯ ಇಲ್ಲಾಂತ ತಿಳಿದು ಈ ಕೆಲಸ ಬಿಟ್ಟು ಬಿಡಬೇಕ. ಇದು ನಿಮಗಾದ ಅವಲಕ್ಷ್ಮಣ.... ನಾವಿನ್ನು ಆವಿಗೆ ಮ್ಯಾಗ ಗಡಗಿ ಹಾಕೂದ್ಯೆತೇನು?"

ಶಿವರಾಮನು ಅವನತ್ತ ಒಮ್ಮೆ ಸಿಟ್ಟಿನಿಂದ ದೃಷ್ಟಿ ಬೀರಿದ. ಆದರೆ ಅವನು ತನ್ನ ಡೊಂಕು ಕಾಲು ಊರುತ್ತ ನರಿಯಂತೆ ನಡೆಯುತ್ತ ಹೊರಟು ಹೋದ.

ಮರುದಿನ ಶಿವರಾಮ ಜೋಶಿಯವರ ಮನೆಗೆ ಹೋಗಿ ಅಕ್ಕಿ ಮಂತ್ರಿಸಿಕೊಂಡು ಬಂದ. ಜೋಶಿಯವರು ಹೇಳಿದಂತೆ ಕೆಲವು ಅಕ್ಕಿಕಾಳುಗಳನ್ನು ಮನೆಯ ಮೇಲೆ ಇನ್ನು ಕೆಲವು ಕಾಳುಗಳ ಮನೆಯ ಒಳಗೆ ಬೀರಿದ. ಮಿಕ್ಕ ಕೆಲವು ಕಾಳುಗಳನ್ನು ಆವಿಗೆಯ ಸುತ್ತಮುತ್ತ ಚೆಲ್ಲಿದ.

ಇನ್ನು ಸರಿಯಾಗಿ ಎಂಟು ದಿನ ಉಳಿದಿದ್ದವು. ಅವನು ಎರಡನೆಯ ಬಾರಿ ಹಂಡೆ ತಯಾರಿಸುವ ಕಾರ್ಯ ಕೈಗೆತ್ತಿಕೊಂಡ. ಮಣ್ಣು ಹೊಸದಾಗಿ ಸಾಣಿಸಿ, ಬಡಿದು, ಹದವಾಗಿ ಕಲಿಸಿಕೊಂಡ. ಮನಸ್ಸಿನಲ್ಲಿಯೆ ಗೊಣಗಿದ. 'ನಾನು ಮಾತು ತಪ್ಪಲಿಕ್ಕಿಲ್ಲ. ಮಾತು ಕೊಟ್ಟಿಂಗ ನಡಕೋತೀನಿ."

ಮಣ್ಣು ಸರಿಯಾಗಿ ಬೆರೆಸಿ ಎಂದಿನಂತೆ ಮಾಡಿನ ಹೊರಗೆ ದೊಡ್ಡ ಮರಿಗೆಯಲ್ಲಿ ಕೊಳೆಯಲು ಇಟ್ಟ. ನಡುವೆ ಒಂದು ದಿನ ದಾಟಿತು. ಮರುದಿನ ಮಣ್ಣು ಎಷ್ಟು ಕೊಳೆತಿದೆ

ಎಂದು ನೋಡಲು ಮಣ್ಣಿನ ವಾಸನೆ ತೆಗೆದುಕೊಳ್ಳಲು ಮರಗೆಯ ಹತ್ತಿರ ಹೋದಾಗ ಅಲ್ಲಿ ಸುತ್ತಲು ಉಪ್ಪಿನ ಹರಳುಗಳು ಬಿದ್ದುದು ಗೊತ್ತಾಯಿತು. ಮರಗೆಯ ಹತ್ತಿರ ದೊಡ್ಡದೊಂದು ಉಪ್ಪಿನ ಹರಳು ಬಿದ್ದುದು ಸ್ಪಷ್ಟವಾಗಿ ಕಾಣುತ್ತಿತ್ತು. ಮಣ್ಣಿನ ಮೇಲೆ ಒಂದು ಬಿಳಿಯ ಹಳದಿ ನೀರಿನ ಥರವೂ ನಿಂತುಕೊಂಡಿತ್ತು. ಶಿವರಾಮ ಅದನ್ನು ಬಾಯಿಗೆ ಹಾಕಿಕೊಂಡು ರುಚಿ ನೋಡಿದ. ಉಪ್ಪುಪ್ಪಾಗಿತ್ತು.

ಇದು ಧರ್ಮುನ ಕೆಲಸ ಎಂದು ಅವನಿಗೆ ಗೊತ್ತಾಯಿತು. ಅವನು ಯಾರು ಯಾರಿಗೂ ಕರೆದು ಅದನ್ನು ಅವರಿಗೆ ತೋರಿಸಿದ. "ಇಲ್ನೋಡ್ರಿ ಉಪ್ಪು. ಮಣ್ಣಾಂಗಂತೂ ಉಪ್ಪು ಕೂಡ್ಸದ. ಹಿಂದಿನ ಸಾರಿನೂ ಅಂವ ಹಿಂಗೆ ಉಪ್ಪು ಸೇರಿಸಿದ್ದ."

ಶಿವರಾಮ ಈಗ ಅವನಿಗೆ ಕೆಟ್ಟ ಬಯ್ಗುಳು ಹಾಕುತ್ತ ಅವನ ಮನೆಯ ಕಡೆ ಹೋದ. ಅವನ ಹಿಂದೆ ಇನ್ನೂ ಕೆಲವರಿದ್ದರು. ಆದರೆ ಅವನು ಮನೆಯಲ್ಲಿರಲಿಲ್ಲ. ಅವನ ಹೆಂಡತಿ ಹೇಳಿದಳು. 'ಅಂವಾ ಎಲ್ಲಿ ಹೋಗ್ಯಾನೊ ಗೊತ್ತಿಲ್ಲರಿ. ಈವತ್ತ ಬರ್ತಾನಂತ ಅನಸೂದಿಲ್ಲ."

ಆದರೆ ಅಲ್ಲಿ ನಿಂತಿದ್ದ ಒಬ್ಬ ಹತ್ತು ಹನ್ನೆರಡು ವರ್ಷದ ಹುಡುಗ ಕೇಳಿದ. "ಆ ಕಡಿಂದ ಮಾತು ಕೇಳಿ ಬಂದಾಗ ಅಂವಾ ಈ ಕಡಿ ತಂಬಗಿ ತಗೊಂಡು ಹೊಳಿ ಕಡಿ ಹೋಗ್ಯಾನ್ರಿ" ಎಂದು ಹೇಳಿ ಓಡುತ್ತ ಅವನ ಮನೆಯ ಹಿಂದೆ ಹೋಗಿ ನಿಂತುಕೊಂಡು "ನೋಡ್ರಿ ಅಲ್ಲಿ ನೋಡ್ರಿ, ಹೊಂಟಾನ ಅಂವಾ. "ನೋಡ್ರಿ ಅಲ್ಲಿ ಓಡಿ ಹೋಗಾಕ ಹತ್ಯಾನ" ಎಂದು ತೋರಿಸಿದ.

ಜನ ನೋಡಿದರು. ಅವನು ಕೈಯಲ್ಲಿ ತಂಬಿಗೆ ಹಿಡಿದುಕೊಂಡು ಅತ್ತಿತ್ತ ವಾಲುತ್ತ ಹೋಗುತ್ತಿದ್ದ. ಹಳ್ಳದ ದಂಡೆಯ ಹೊಲಗಳು. ಅವುಗಳಲ್ಲಿ ಮಿಂಚುವ ಬಿಸಿಲು. ಆ ಲಕಲಕಿಸುವ ಬಿಸಿಲಿನಲ್ಲಿ ಅವನು ಒಂದು ದೊಡ್ಡ ಕಪ್ಪು ಕಲೆಯಂತೆ ಕಾಣುತ್ತಿದ್ದ. ಆದರೂ ದೂರದಿಂದ ಅವನಿಗೆ ಶಿವರಾಮನು ಬಯ್ಗಳ ಸುರಿಮಳೆ ಮಾಡಿದ. ಸೀತವ್ವ ಹೇಳಿದಳು. "ಅವನು ಕೆಟ್ಟ ಮನಶ್ಯಾ. ತಂದಿ–ತಾಯಿಗ್ಗ ಅನ್ನಾ ಹಾಕದ ಕೊಂದು ಹಾಕಿದ. ಈ ಅವನ ಅಜ್ಜಿ ಅದಾಳ– ಆಕಿ ಬಿಕ್ಕಿ ಬೇಡಿಕೊಂಡು ಹೊಟ್ಟ ತುಂಬ್ಕೋತಾಳ. ಒಂದ್ ಮಾರಿ ಮ್ಯಾಗ ಬಿದ್ರ ನೆಲದ ಮ್ಯಾಗ ಬಿದ್ದು ಒದ್ದಾಡಿ ಅಳತಾನ. ಅವನ ಸೊಂಟದ ಮ್ಯಾಗ ಒಂದ್ ಪೆಟಣೆಯಿಂದ ಬಡೀಬೇಕಾಗಿತ್ತ.

ಧರ್ಮುನ ದೊಡ್ಡ ಮಗ ಪ್ರೇಮಾನಂದ ಹದಿನಾರು ವರ್ಷದವನಿದ್ದ. ಅವನ ಅಲ್ಲಿ ರಾಮಫಲದ ಗಿಡಕ್ಕೆ ಆತು ನಿಂತುಕೊಂಡಿದ್ದ. ಅವನ ಕಣ್ಣು ಒದ್ದೆಯಾಗಿದ್ದವು. ಮುಖ ಕೆಂಪೇರಿತ್ತು. ಅವನು ಏದುಸಿರು ಬಿಡುತ್ತಿದ್ದ. ಅವನಿಗೆ ಸಿಟ್ಟು ಬಂದಿದೆಯೋ, ಲಜ್ಜೆಯಿಂದ ತಲೆ ತಗ್ಗಿಸಿ ನಿಂತಿದ್ದಾನೊ ತಿಳಿಯುತ್ತಿರಲಿಲ್ಲ.

ರಾತ್ರಿ ತುಂಬ ತಡವಾಗಿ ಧರ್ಮು ಮನೆಗೆ ಬಂದ. ಸರಾಯಿಯ ಗುಂಗಿನಲ್ಲಿದ್ದ. ಒಂದು ಹೆಜ್ಜೆಯೂ ಎತ್ತಿ ಇಡಲಾರದ ಸ್ಥಿತಿಯಲ್ಲಿದ್ದ. ನಿಶೆಯ ಮತ್ತಿನಲ್ಲಿ ಏನೇನೊ ಅಸ್ಪಷ್ಟವಾಗಿ ಬಡಬಡಿಸುತ್ತಿದ್ದ. 'ಹಂಡಿ ಒಡೆದು ಹೋತಲ್ಲಪ್ಪೊ... ಹೇಂತಿ ಓಡಿ ಹೋಗಿಲ್ಲೇನು?... ನೂರು ಲಕ್ಷಗಳ ಲಾಟರಿ ಬಂದೈತಿ ನನಗ... ಒಡೆಯರ ಎಲ್ಲಾ ಜಮೀನು ಖರೀದಿ ಮಾಡತೇನಿ. ಕೆರೆಗೆ ಒಡ್ಡು ಕಟ್ಟ ಹೊಲದ ಸಾಗುವಳಿ ಮಾಡತೀನಿ.

ಆಮ್ಯಾಗ ಕುಂಬಾರರ ಬಾಯಾಗ ಮಣ್ಣು. ಮಣ್ಣೂ ಇಲ್ಲ. ಗಡಗೀನೂ ಇಲ್ಲ. ಬರ್ರಿ... ನನ್ನ ಕಾಲಮ್ಯಾಗ ಅಡ್ಡ ಬೀಳ್ರಿ."

ಅವನ ದನಿ ಕೇಳಿ ಶಿವರಾಮ ಬಾಗಿಲು ತೆರೆದು ಹೊರಗೆ ಬರಲು ನೋಡುತ್ತಿದ್ದ. ಆದರೆ ಅವನ ಹೆಂಡತಿ ತಡೆದಳು. "ಈಗ್ಯಾಕ ಹೋಗ್ತೀರಿ ಆ ಕುಡುಕನ ಮುಂದ. ಏನಾದ್ರು ಆದ್ರ ನಮ್ಮ ಮ್ಯಾಗ ಬರತದ. ಅಂವ ಹಂಗ ಸತ್ರೂ ನಮ್ಮ ಕೈಯಿಂದಲೇ ಹ್ವಾದ ಅಂತಾರ"

ಈಗ ಶಿವರಾಮನ ಬಳಿ ಐದು ದಿನಗಳಿದ್ದವು. ಪಾಳೊಳೆಯ ಜನರಿಗೆ ಕೊಟ್ಟ ಮಾತನ್ನು ನಡೆಸಿಕೊಡಬೇಕಾಗಿತ್ತು. ಅವನು ಯಶವಂತ ಮತ್ತು ಗೋಪಾಳನನ್ನು ತನಗೆ ಸಹಾಯ ಮಾಡಲು ಕರೆದ.

ಮೂವರೂ ಸೇರಿ ಮಣ್ಣು ಕಲಿಸಿ, ಕೊಳೆಸಿ ಹಂಡೆ ಮಾಡಿದರು. ಅದನ್ನು ಬಿಸಿಲಲ್ಲಿ ಒಣಗಿಸಿ ಆವಿಗೆಯಲ್ಲಿ ಸುಡಲು ಇಟ್ಟರು.

ಪಾಳೊಳೆಯ ಜನ ಪಿಕಪ್ ಹೊಳೆಯಾಚೆ ನಿಲ್ಲಿಸಿ ಬರುತ್ತಿರುವಾಗಲೆ ಹಂಡೆಯ ಮೇಲಿನ ಹುಲ್ಲಿನ ರಾಶಿಗೆ ಬೆಂಕಿ ಹೊತ್ತಿಕೊಂಡಿತು. ಕೆಲವು ಕ್ಷಣಗಳಲ್ಲಿ ಹಂಡೆಗೆ ಬಿಡುಗಡೆ ಸಿಕ್ಕಿತು. ಯಶವಂತನು ಅದರ ಕುತ್ತಿಗೆ ಹಿಡಿದು ನಿಧಾನವಾಗಿ ಹೊರಗೆ ತೆಗೆದ. ಆವಿಗೆಯಲ್ಲಿದ್ದ ಬೆಂಕಿ ಇನ್ನೂ ಉರಿಯುತ್ತಲೇ ಇತ್ತು. ಹಂಡೆ ಮಾತ್ರ ಆವಿಗೆಯ ಹೊರಗೆ ಗಾಳಿಯಲ್ಲಿ ತಣ್ಣಗಾಗತೊಡಗಿತ್ತು. ಹೊಟ್ಟೆ ಉಬ್ಬಿದಂತೆ ಕೆಂಬಣ್ಣದ ಕೇಸರ ಮೆತ್ತಿದಂತಹ ಸುಂದರವಾದ ಹಂಡೆ ನೋಡುತ್ತಿದ್ದಂತೆ ಶಿವರಾಮನಿಗೆ ತನ್ನ ಶ್ರಮ ಸಾರ್ಥಕವಾದ ತೃಪ್ತಿ ನೀಡಿತು.

ಗೋಪಾಳ ಹಂಡೆಯ ಮೇಲೆ ಬೆರಳಾಡಿಸುತ್ತ ಪಾಳೊಳೆಕಾರರಿಗೆ ಹೇಳುತ್ತಿದ್ದ. "ಇದು ಮಣ್ಣಿನ ಹಂಡಿ ಅಂತ ನೋಡಬ್ಯಾಡ್ರಿ, ತಾಮ್ರದ ಹಂಡಿ ಆಗ್ಯದ, ಇಪ್ಪತ್ತು ವರ್ಷ ಕಾಳಜಿಯಿಲ್ಲ."

* * *

**ಬೆ**ಳಗ್ಗೆ ಹೊತ್ತೇರುವುದರಲ್ಲಿ ರಾಘೋಬನ ಹೆಂಡತಿ ಅಪರೂಪೆ ಕೆಂಪು ಬಟ್ಟೆ ಧರಿಸಿ ಎಲ್ಲಿಗೊ ಹೋಗಲು ಹೊರಟಿದ್ದಳು. ಕೆಂಪು ಸೀರೆಯ ಸೆರಗ ಪಾದಗಳವರೆಗೆ ಬಿಟ್ಟಿದ್ದಳು. ಮೈಗೆ ಕೆಂಪು ಕುಪ್ಪಸ ಹಾಕಿಕೊಂಡು ಮುಡಿಗೆ ಕೆಂಪು ದಾಸವಾಳದ ಹೂವು ಮುಡಿದುಕೊಂಡಿದ್ದಳು. ಹಣೆಗೆ ಕೆಂಪು ಕೆಂಪಾದ ರೂಪಾಯಿ ನಾಣ್ಯದಷ್ಟು ಅಗಲ ಕುಂಕುಮ. ಅವಳು ಬೆಳ್ಳಗಿರಲಿಲ್ಲ ಆದರೆ ಗೋದಿ ಮಿಶ್ರಿತ ಕೆಂಪು ಬಣ್ಣದವಳಾಗಿದ್ದಳು. ಬೆಳಗ್ಗಿನ ಬೆಳ್ಳಿಯ ಬಿಸಿಲಿನಲ್ಲಿ ಅವಳು ಬಿಸಿಲು ತುಳಿಯುತ್ತ ನಡೆದಂತಿತ್ತು. ಸೀತವ್ವ ಅಂಗಳದಲ್ಲಿ ಕುಳಿತು ಮಣ್ಣಿನ ಹೆಂಟೆಗಳನ್ನು ಒಡೆಯುತ್ತಿದ್ದಳು. ಅವಳು ಕೇಳಿದಳು. "ಅಪರೂಪ್ಯಾ, ಎಲ್ಲಿ ಹೊಂಟಿ? ಎಷ್ಟು ಛಂದ ದೇವಿ ಹಂಗ ಕಾಣ್ತಿ."

"ಹೋಗಿ ದೇವತೆ ತಾಯಿಯ ಉಡಿ ತುಂಬಿ ಬರತೀನಿ. ಪ್ರತಿ ಬುಧವಾರಕ್ಕೊಮ್ಮೆ ಏಳು ವಾರ ಉಡಿ ತುಂಬತೀನಿ ಅಂತ ಬೇಡಿಕೊಂಡಿದ್ದೆ. ಕೆಂಪು ಬಣ್ಣದ ಬಟ್ಟಿ ಹಾಕ್ಕೊಂಢ ಉಡಿ ತುಂಬಾಕ ಬೇಕಂತೆ."

"ಆಗಲಿ, ನಡಿ ಮತ್ತ... ದೇವಿ ನಿನ್ನ ಮಾತ ಕೇಳ್ತಾಳ ಹೋಗು"

ಸೀತವ್ವನಿಗೆ ಈ ಹೊಸ ಹುಚ್ಚು, ಯಾರೋ ಹೆಣ್ಣು ಮಗಳಿಗೆ ಹಚ್ಚಿಟ್ಟಿದ್ದಾರೆ ಅನಿಸಿತು.

ಅವಳ ಬಗ್ಗೆ ಕರುಣೆ ಮೂಡಿತು. ಆರು ವರ್ಷದಿಂದ ಆಕೆಗೆ ಮಕ್ಕಳಾಗಲಿಲ್ಲ. ಅಂತ ಹಳ ಹಳಿಸ್ತಿದ್ದಾಳೆ. ಅವಳು ಬಿಸಿಲಿನಲ್ಲಿ ಹೋಗುತ್ತಿರುವಾಗ ಅವಳು ಸೂಕ್ಷ್ಮವಾಗಿ ನೋಡಿದಳು. ಮೊದಲು ಮೈಕಲ್ಲಿ ತುಂಬಿಕೊಂಡಿದ್ದ ಹೆಣ್ಣು ಈಗ ಸೊರಗಿದ್ದಾಳೆ. ಕೆಂಪು ಬಟ್ಟೆ ಅವಳನ್ನು ಮುಷ್ಠಿಯಲ್ಲಿ ಬಿಗಿದಿಟ್ಟಂತೆ ಅನಿಸಿತು. ಮೊದಲು ತಲೆಯ ಮೇಲೆ ಗಡಿಗೆಯ ಹೆಡಿಗೆ ಇಟ್ಟುಕೊಂಡು ನಡೆಯುವಾಗ ಅವಳು ಹೆಡಿಗೆಯೊಡನೆ ಗಾಳಿಯಲ್ಲಿ ತೇಲುತ್ತಿದ್ದಾಳೆ ಎಂದು ಅನಿಸುತ್ತಿತ್ತು. ಈಗ ಆ ಹೆಜ್ಜೆಗಳಲ್ಲಿ ಆ ಉತ್ಸಾಹವಿಲ್ಲ.

ಅಪರೂಪೆಯ ಗಂಡ ಅವಳ ಹಿಂದೆಯ ಗಡಿಗೆಯ ಬುಟ್ಟಿ ತಲೆಯ ಮೇಲಿಟ್ಟುಕೊಂಡು ಬರುತ್ತಿದ್ದ. ಅವನು ಆ ಗಡಿಗೆಗಳನ್ನು ಕೇರಿಯ ತುದಿಯಲ್ಲಿ ಒಣ ಹಾಕುತ್ತಿದ್ದ. ಸೀತವ್ವ ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದಳು. ರಾಘೋಬಾ ಇದುವರೆಗೆ ಈ ತಿಗರಿಯಲ್ಲಿ ಎಷ್ಟೊಂದು ಗಡಿಗೆ ಮತ್ತು ಬೇರೆ ಬೇರೆ ಆಕಾರದ ಪಾತ್ರೆಗಳನ್ನು ಮಾಡಿದ್ದಾನೆ. ಚಿಕ್ಕ ಪುಟ್ಟ ಎಷ್ಟೊ ಪಾತ್ರೆಗಳನ್ನು ಮಾಡಿದ್ದಾನೆ. ಒಣಗಿಸಿದ್ದಾನೆ, ಆವಿಗೆಯಲ್ಲಿಟ್ಟು ಸುಟ್ಟು ತಾಮ್ರದ ಪಾತ್ರೆ ತಟ್ಟಿದರೆ ಬರುವ ಸದ್ದಿನಂತಹ ಮಣ್ಣಿನ ಪಾತ್ರೆ ರಚಿಸಿದ್ದಾನೆ. ಆದರೆ ಪಾಪ, ಕಳೆದ ಆರು ವರ್ಷಗಳಿಂದ ರೂಪ್ಯಾನ ಹೊಟ್ಟೆಯಲ್ಲಿ ಗರ್ಭ ರಚಿಸಲು ಮಾತ್ರ ಅವನಿಂದ ಆಗಲಿಲ್ಲ. ಅಪರೂಪೆ ಮಕ್ಕಳಿಗಾಗಿ ಚಡಪಡಿಸುತ್ತಾಳೆ. ಕೊರಗುತ್ತಾಳೆ. ಮಕ್ಕಳಾಗುತ್ತವೆ ಎಂದು ಯಾರು ಏನು ಹೇಳಿದರೂ 'ತಕ್ಷಣ ಮಾಡುತ್ತಾಳೆ. ದೇವ ದೇವತೆಯ ಕಾಲಿಗೆ ಬಿದ್ದು ಅಂಗಲಾಚುತ್ತಾಳೆ. ಪ್ರತಿವರ್ಷ ಮಾವಿನ ಗಿಡದಲ್ಲಿ ರಾಶಿ ರಾಶಿ ಮಾವಿನಕಾಯಿಯ ಗೊಂಚಲು ತೂಗು ಬಿದ್ದಾಗ ಕತ್ತಲೆಯಾದ ಮೇಲೆ ಅಪರೂಪೆ ನಿಧಾನವಾಗಿ ಗಿಡದಡಿಗೆ ಬಂದು ಸೆರಗು ಕಳಗಿಳಿಸಿ ರವಿಕೆಯ ಗುಂಡಿಗಳನ್ನು ಬಿಚ್ಚಿ ತನ್ನ ಎದೆ ಮತ್ತು ಬೆನ್ನು ಮಾವಿನ ಮರಕ್ಕೆ ತಿಕ್ಕುತ್ತಾಳೆ. ಆ ಒರಟು ಮರಕ್ಕೆ ತಿಕ್ಕುವುದರಿಂದ ಅವಳ ಎದೆ ಮತ್ತು ಬೆನ್ನುಗಳಲ್ಲಿ ರಕ್ತ ಒಸರಿ ಎಷ್ಟೊ ದಿನ ಎದೆ ಮತ್ತು ಬೆನ್ನುಗಳಲ್ಲಿ ರಕ್ತ ಒಸರಿ ಎಷ್ಟೊ ದಿನ ಊದಿಕೊಂಡಿರುತ್ತಿತ್ತು.

ಬೆಳಿಗ್ಗೆ ಹೋದ ಮಧ್ಯಾಹ್ನ ಮೀರಿದರೂ ಮರಳಿ ಬಂದಿರಲಿಲ್ಲ. ರಾಘೋಬಾ ವಾಡೆಯ ಕಡೆಗೆ ಬಂದು ನಿಂತುಕೊಂಡಿದ್ದ. ಅವನು ದೊಡ್ಡಕೆ ಹೇಳಿದ 'ಸೀತವ್ವ ಆಕಿ ಇನ್ನೂ ಮಟಾ ಬಂದಿಲಲ್ರಿ, ಉಡಿ ತುಂಬಿ ದೇಪಿಯ ಹತ್ತಿರ ಜಗಳಕ್ಕೆ ಕುಂತಾಳೇನು ಮತ್ತ?'

ಸೀತವ್ವ ಮನೆಯ ಮಾಡಿನಿಂದ ತಲ ಹೊರಗೆ ಹಾಕುತ್ತ ಹೇಳಿದಳು. "ದೇವಿ ಕೂಡ ಜಗಳ ಮಾಡಿ ಮಕ್ಕಳನ್ನ ತಗಂಡ ಬಂದೇ ಬರ್‍ತಾಳ ಆಕಿ. ನಿನಗ ಮತ್ತ ತ್ರಾಸ್ ಬ್ಯಾಡಾ."

"ಸೀತವ್ವ... ಆಕಿಗ ಹುಚ್ಚ ಹಿಡದೈತಿ. ಮಕ್ಕಳು ಬಿಕ್ಕಳು. ಇಲ್ನೋಡ್ರಿ ಕುಂಬಾರರ ಮಕ್ಕಳು ಮಣ್ಣಾಗ ಉರಳಾಡತಾರ. ಅವರ ಹೊಟ್ಟಿ ಹ್ಯಾಂಗಾಗೈತಿ ನೋಡ್ರಿ, ಹೇಲಾಕ್ ಕುಂತ್ರ ಬುಟ್ಟಿತುಂಬ ಜಂತ ಬೀಳತಾವ."

ಸೀತವ್ವನ ಅಂಗಳದ ಕೊನೆಯಲ್ಲಿ ಕೆಲವು ಮಕ್ಕಳು ಆಟ ಆಡುತ್ತಿದ್ದರು. ಅವರ ತಾಯಂದಿರು ಗಡಿಗೆಯ ಹೆಡಿಗೆ, ಬುಟ್ಟಿ ತಲೆಯ ಮೇಲಿಟ್ಟುಕೊಂಡು ವ್ಯಾಪಾರಕ್ಕೆ ಹೊರಟರೆ ಈ ಹುಡುಗರು ತಾಯಿಯ ಹಿಂದೆ ಬರುತ್ತ ಕೂಗಿ ಕೂಗಿ ಅಳುತ್ತಾರೆ. ಅವರು ಬಿಟ್ಟು ಹೋದಾಗ ಅಲ್ಲೇ ಧೂಳಿನಲ್ಲಿ ಹೊರಳಾಡುತ್ತಿರುತ್ತಾರೆ. ಎಷ್ಟೋ ಹೊತ್ತಿನ ಮೇಲೆ

ಅವರ ತಂದೆ ಬಂದು ಬಡಿಗೆಯಿಂದ ನಾಲ್ಕು ಬಾರಿಸಿ ಗಂಜಿ ಕುಡಿಯಲು ಮನೆಗೆ ಕರೆದುಕೊಂಡು ಹೋಗುತ್ತಾರೆ.

ಹೊತ್ತು ಇಳಿಯುವಾಗ ಅಪರೂಪೆ ಬಂದಳು. ದಾಹ, ಹಸಿವೆಯಿಂದ ಅವಳ ಕುತ್ತಿಗೆಯಿಂದ ಹುಂ... ಹುಂ... ಶಬ್ದ ಹೊರಡದಂತಾಗಿತ್ತು. ರೈತರು ಅಗೆದು ಹಾಕಿದ ಹೊಲದಲ್ಲಿ ನಡೆದು ಬರುವಾಗ ಅವಳ ಸೀರೆಯಲ್ಲಿ ಧೂಳು ತುಂಬಿಕೊಂಡಿತ್ತು. ಕೂದಲು ಕೆದರಿತ್ತು. ಹಣೆಯ ಮೇಲೆ, ತಲೆಯಿಂದ ಬೆವರು ಧಾರೆಯಾಗಿ ಹರಿಯುತ್ತಿತ್ತು. ಯಾರೊ ಕೆನ್ನೆಗೊಂದು ಏಟುಕೊಟ್ಟಂತೆ ಅವಳ ಮುಖ ಬಾಡಿತ್ತು. ಬೆಳಗ್ಗೆ ಹೋಗುವಾಗಿನ ಉತ್ಸಾಹ ಈಗ ಅವಳಲ್ಲಿ ಇರಲಿಲ್ಲ. "ಇಷ್ಟು ಹೊತ್ತು ಎಲ್ಲಿ ಹೋಗಿದ್ದೆ. ಹಿಂಗ ಮಾಡಿದ್ರ ಒಂದಿನ ಸಾಯ್ತಿ ನೋಡು."

"ದೇವಿ ಕಾಲ ಹಿಡಿದು ಕುಂತಕೊಂಡಿದ್ದೆ. ಈ ಸಲ ಫಲ ಕೊಡದಿದ್ರ ಮೈಗೆ ಬೆಂಕಿ ಹಚ್ಕೊಂಡು ಸಾಯ್‌ತೀನಿ."

"ಹುಚ್ಚಿ ನೀನು. ಬೀಜ ಗಟ್ಟಿಯಾಗಿದ್ರೆ ಮೊದಲ ಮಳೆಯಲ್ಲೆ ಚಿಗುರತ್ಯೆತಿ. ದೇವರೂ ಬ್ಯಾಡಾ, ದಿಂಡರೂ ಬ್ಯಾಡಾ. ಬುಡದಾಗ ಸರಿ ಇಲ್ಲದಿದ್ರ ಯಾರೇನು ಮಾಡಾಕ ಬರ್ತದ. ದೇವರಿಗೆ ಬ್ಯಾಡಾದ ಮಂದಿ ನಾವು. ದೇವರ ಕಡಿ ಯಾಕ ಹೋಗ್‌ಬೇಕು. ಸೀತವ್ವ... ಈಕಿ ನನ್ನ ಮಾತು ಕೇಳೂದಿಲ್ಲರಿ... ನೀವೇ ಏನಾರೂ ಒಂದೀಟು ಹೇಳ್ರಿ."

ಸೀತವ್ವ ಮೆಲ್ಲಗೆ ತನ್ನ ನಾಲಿಗೆಯ ತುದಿಯಲ್ಲಿಯೇ ಪುಟಪುಟಿಸಿದಳು. 'ಮಂತ್ರದಿಂದ ಮಕ್ಕಳಾಗೂದಾದ್ರ ಭಟ್ಟರಿಗ್ಯಾಕ ಹೆಂಡತಿ ಬೇಕು?'

ಮಧ್ಯಾಹ್ನದ ನಂತರದ ಇಳಿಹೊತ್ತು ಆರಂಭವಾಗಿತ್ತು. ಆಕಾಶದ ನೀಲಿತನ ಹೋಗಿ ಸುಟ್ಟಕಲೆಯಂತೆ ಕಾಣುತಿತ್ತು. ಬಿಸಿಲಿನ ಬಿಸಿಗಾಳಿಯೂ ಬೀಸುತ್ತಿತ್ತು. ಅಪರೂಪೆ ಹೋಗಿ ಗಿಡದಡಿಯ ನೆರಳಿನಲ್ಲಿ ಕುಳಿತುಕೊಂಡಳು. ನಿರ್ಜೀವಳಂತೆ.

ಸೀತವ್ವ ಅತ್ತ ಕಡೆ ಕಣ್ಣು ಹಾಯಿಸಿದಳು. ಇಷ್ಟು ದೊಡ್ಡ ಮರ ಊರಲ್ಲಿ ಪಸರಿಸಿದೆ. ದಟ್ಟವಾದ ತಂಪು ನೆರಳು ಕೊಡುತ್ತದೆ. ಪ್ರತಿವರ್ಷ ಮಾವುಗಳಿಂದ ತುಂಬಿ ನಿಲ್ಲುತ್ತದೆ. ಇಂಥ ವಾತಾವರಣದಲ್ಲಿ ರಾಘೋಬಾ ಮತ್ತು ಅವನ ಹೆಂಡತಿ ಮಾನಸಿಕವಾಗಿ ಏಕೆ ಒದ್ದಾಡುತ್ತಿರಬೇಕು ಎಂದು ಅನಿಸಿತು. ಅವಳು ಮನಸ್ಸಿನಲ್ಲಿಯೇ ಹೇಳಿದಳು. ದೇವರೇ ಒಂದು ಮಿಡಿ ಅವಳ ಹೊಕ್ಕುಳ ದಂಟಿನಲ್ಲೂ ಮೊಳೆತು ಬರಲಿ. ಆಗ ರೈತ ಶಾಂಬಾ ಹೊಲದಿಂದ ಕೈಯಲ್ಲಿ ಕುಳ್ಳು ತೆಗೆದುಕೊಂಡು ವಾಡೆಯತ್ತ ಬರುತ್ತಲಿದ್ದುದನ್ನು ಸೀತವ್ವ ನೋಡಿದಳು. ಅವನಿಗೆ ಬೆಂಕಿ ಬೇಕಾಗಿರಬಹುದು. ಹೊಲದಲ್ಲಿ ಬೀಡಿ ಸೇದುವುದೇ ಒಂದು ಕೆಲಸ ಎಂದು ಮನಸ್ಸಿನಲ್ಲಿಯೇ ಅಂದುಕೊಂಡಳು.

ಅವನು ಕುಳ್ಳು ತೆಗೆದುಕೊಂಡು ಬಂದು ಬೆಳಗ್ಗೆ ಆವಿಗೆಯಿಂದ ಘನಶ್ಯಾಮನು ತೆಗೆದೊಗೆದ ಬೆಂಕಿಯ ಕೆಂಡಗಳಿಗೆ ಕುಳ್ಳು ಹತ್ತಿಸಿಕೊಂಡು ಫು... ಫು ಎಂದು ಒಂದೆರಡು ಬಾರಿ ಊದಿದ. ಸೀತವ್ವಗೆ ಏನೊ ಹೇಳಲು ಬಾಯಿ ತೆರೆದು ಆ ಹೇಳಿಕೆ ಅವಳಿಗೊಬ್ಬಳಿಗೇ ಅಲ್ಲ ಕೇರಿಯ ಜನಕ್ಕೆಲ್ಲ ಕೇಳಿಸುವಂತೆ ಇತ್ತು. ಅವನ ಧ್ವನಿಯಲ್ಲಿ ಉತ್ಸಾಹವಿತ್ತು. "ನಿನ್ನಿ ಸಭೆಯೊಳಗ ಶಾಸಕರು ಹೇಳ್ಯಾರ ಕೆರಿಗೆ ಒಡ್ಡು ಕಟ್ತಾರಂತ. ಇನ್ನ ನೀರಿಗೆ ಬರಗಾಲ

ಬರೂದಿಲ್ಲ. ಭೂಮಿಯ ಒಳಗಿನಿಂದಲೂ ನೀರ ಹರಿತಾವ. ಬಾವಿಗಳು ವರ್ಷವಿಡೀ ತುಂಬಿರತಾವ. ಹೊಲಗಳು ಯಾವಾಗಲೂ ಹಸಿರು ಹಸಿರಾಗಿರ್ತಾವ."

"ಆದರ ನಮ್ಮ ಮಣ್ಣು ಮಣುಗಿ ಹೋಗ್ತದಲ್ಲಪ್ಪೊ" ಪಕ್ಕದಲ್ಲಿ ನಿಂತ ಗೋಪಾಳ ಹೇಳಿದ.

"ಅಂಜಬ್ಯಾಡ್ರಿ... ಹೊಲಗೋಳು ಇರತಾವ. ಅಷ ಸಾಕ್ತಾವ ನಮಗೆಲ್ಲ."

"ಹೊಲಗೋಳು... ನಿಮ್ಮದು. ನಮ್ಮದೆಲ್ಲೈತೆ?"

"ನಮ್ಮದೂ ಅಲ್ಲ. ಯಾರು ದುಡಿತಾರೊ ಅವರ ಹೊಲ. ಮೂರು ಮೂರು ಬೆಳಿ. ವರ್ಷವಿಡೀ ಕೆಲಸ" ಶಾಂಬಾ ಹೋದ.

ಈಗ ಮೂವರು-ನಾಲ್ವರು ಕುಂಬಾರರು ಒಂದು ಕಡೆ ಜಮಾಯಿಸಿದರು. "ಹೊಲಾ ದುಡ್ಯಾವರದಂತೆ. ಮಹಾ ಕಂಜೂಸ ಮಂದಿ. ಇಂಚ ಇಂಚ ಜಗಾಕ್ಕ ಹೊಡದಾಡಕೋತಾ. ಮತ್ತ ನಮಗ ಹೊಲಾ ಬಿಟ್ಟು ಕೊಡ್ತಾರೇನು?"

"ಕೆರಿ ಮುಣುಗಿ ಹ್ವಾದರ ಕುಂಬಾರ ಮಂದಿ ಹೊಲದ ಕೆಲಸಕ್ಕ ಸಿಗ್ತಾರಂತ ಈ ಮಂದಿ ಕುಣದಾಡ್ತಾರ. ಹೊಲದಾಗ ಬೀಜ ಬಿತ್ತತ್ತಾರ, ನಟ್ಟಿ ಮಾಡಾಕ, ಕಳಿ ತೆಗೆಯಾಗ ನಮ್ಮ ಹೆಣ್ಣು ಮಕ್ಕಳನ್ನ ಕಳಿಸಿದ್ರೆ ನಡು ಮುರಿಯೋ ಹಂಗ ಕೆಲಸ ಮಾಡಿಸಿಕೋತಾರ. ಮ್ಯಾಲಿಂದ ಆವಾಜ ಮಾಡತಾರ."

"ಹೌಂದರಿ. ಬ್ಯಾಡಾಂತ ಜೆಂಕಿ ಹಾಕಿ ಸುಟ್ಟು ಹಾಕೂ ಹುಲ್ಲು ಕೊಡ್ರಿ ಅಂತ ಕೇಳಾಕ ಹ್ವಾದ್ರ ಗಡಗಿ ಕೊಡ್ರಿ, ತಟ್ಟ ಕೊಡ್ರಿ ಅಂತ ಗಂಟ ಬೀಳ್ತಾರ. ಈಗ ನಾವಿರೊ ಜಗಾ ನಮ್ಮ ಹಿರ್‍ಯಾರು ನಿಮಗ ಉಳಕೊಳ್ಳಾಕ ಕೊಟ್ಟದ್ರು ಅಂತ ಸುಮ್ಮ ತಿರುಗಿ ಮುರುಗಿ ಹೇಳತಿರ್ತಾರ"

"ನಾವೇನ್ ಮಾಡ್‌ಬೇಕಂದ್ರ ಕೆರಿಗ ಒಡ್ಡು ಸರಕಾರ ಕಟ್ಟತೈತಲ್ಲ. ನಾವ್ ಹೋಗಿ ನಮ್ಮ ಶಾಸಕರಿಗೆ ಹೇಳಿಬರ್‌ಬೇಕು."

"ಅಂವಾ ಬಿಡ್ರಿ... ಅಂವಾ ಮತಗಳ ಸಾವಕಾರ. ಮತಾ ಕೇಳಾಕ ಬಂದಾಗ ಚಂದ ಕನ್ನಡ ಮಾತಾಡತಾನ. ಕಾರವಾರದಾಗ ಮಾತ್ರ ಬ್ಯಾರಿ ಭಾಷಾ... ಕನ್ನಡ ಬರೂದಿಲ್ಲ ಅನ್ನೊ ಹಂಗ. ಅವನ ಭಾಷಿ ಅಲ್ಲಿ ಮಂದಿಗೆಲ್ಲಿ ತಿಳಿತೈತಿ. ಎರಡು ಬಾಯಿ ಐತೆ ಅಪ್ಪಿಗೆ. ಅವನ ಯಾವ ಮಾರೀನೂ ಖರೆ ಅಲ್ಲ"

"ನಾವ್ ಯಾರನ್ನಾದರೂ ಒಳ್ಳೆ ಮನಶ್ಯಾನ ಹಿಡಕೊಂಡು ಹೋಗ್‌ಬೇಕು."

"ಯಾರು ಒಳ್ಳೆಯಂವಾ. ಯಾವ್ದಾದ್ರೂ ರೈತನ ಹಿಡಕೊಂಡ ಹೋಗಬೇಕಲ್ಲ. ಅಂವಾ ಇಲ್ಲೊಂದು ಮಾತಾಡ್ತಾನ ಅಲ್ಲೊಂದು ಮಾತಾಡತಾನ. ಅವರಿಗೆ ಒಡ್ಡು ಹಾಕೂದು ಬ್ಯಾಡಾಗ್ಯತೇನು. ನಮ್ಮ ಕುಂಬಾರಮಂದಿಗೆ ತಂದಿ ಇಲ್ಲ ತಾಯಿ ಇಲ್ಲ"

ಸಾಯಂಕಾಲದ ನಿರುತ್ಸಾಹ ಕತ್ತಲೆಯ ಜೊತೆಗೆ ಇಳಿದು ಬಂದಂತೆ ಕೇರಿಯನ್ನೆಲ್ಲ ಆಕ್ರಮಿಸಿತು. ಗಂಡಸರು ನಿರುತ್ಸಾಹದಿಂದ ತಮ್ಮ ಮನೆಗೆ ಹೋದರು.

ಕುಂಬಾರ ಜಾತಿಯ ಗಂಡಸರು ಹೆಣ್ಣು ಮಕ್ಕಳಿಗಿಂತ ಮೃದು ಸ್ವಭಾವದವರೆಂದು ಸೀತವ್ವನಿಗೆ ಗೊತ್ತಿತ್ತು. ಎಲ್ಲಾದರೂ ಏನಾದರೂ ಘಟಿಸಿದರೆ ಸಾಕು ಮನೆಯಲ್ಲಿ ಅಡಗಿ ಕುಳಿತು ಬಿಡುತ್ತಾರೆ. ಅವರ ಬಾಯಿ ಬಂದಾಗುತ್ತವೆ. ಕಣ್ಣು ತೇವಗೊಳ್ಳುತ್ತವೆ. ಅವಳು ಅಂಗಳದಲ್ಲಿ ನಿಂತು ಹೇಳಿದಳು. "ಹುಲಿ ಇನ್ನೂ ಅಡವ್ಯಾಗ ಐತಿ. ನಿಮ್ಮ ಕಣ್ಣ ಮುಂದ

ಅದ ಕುಣಿಯಾಕ ಹತ್ಯೆತಿ. ಬಿಡ್ರಿ, ಅದ ಬಂದಾಗ ಗೋಣು ಕೊಡೂಣು ಇಲ್ಲ ಗೋಣು ಮುರಿಯೋಣು. ಜಂಗಲಿನ ಹುಲಿಗಿಂತ ಮನಸ್ಸಿನ್ಯಾಗಿನ ಹುಲೀನೆ ಭ್ಹಾಳ ಕಾಡತ್ಯೆತಿ."

* * *

ರಾಮಚಂದ್ರನು ಗಡಿಗೆಯ ಹೆಡಿಗೆ ಹೆಂಡತಿಯ ತಲೆಯ ಮೇಲೆ ಹೊರಿಸಿದ. ಆನಂದಿ ತಲೆಯ ಮೇಲಿನ ಸಿಂಬಿ ಅತ್ತಿತ್ತ ಸರಿದದ್ದರಿಂದ ಕೊಂಚ ಸಮತೋಲ ತಪ್ಪಿ ಹಿಂದೆ ಮುಂದೆ ಒಲಿದಳು. ಕಡೆಗೆ ಆ ದೊಡ್ಡ ಹೆಡಿಗೆ ತಲೆಯ ಮೇಲೆ ಸರಿಯಾಗಿ ಕುಳಿತು ಕೊಂಡಿತು. ಕುಳ್ಳಗೆ ಬೆಳ್ಳಗಿರುವ ಆನಂದಿಯ ತಲೆಯ ಮೇಲೆ ಪುಟ್ಟ ಗುಡ್ಡದಂತಹ ಗಡಿಗೆಯ ಹೆಡಿಗೆ. ಆದರೆ ಅವಳು ಒಳ್ಳೆ ಹುರುಪಿನಿಂದ ಹೆಜ್ಜೆ ಹಾಕುತ್ತಿದ್ದಳು. ಅದೇ ಹೊತ್ತಿಗೆ ಆ ಕಡೆಯಿಂದ ಶಂಕರನ ಹೆಂಡತಿ ದೇವಕಿಯೂ ಬಂದಳು. ಇಬ್ಬರೂ ಸೇರಿಯೆ ಗಡಿಗೆಯ ಮಾರಾಟಕ್ಕೆ ಹೊರಟಿದ್ದರು. ಅವರು ಕೇರಿಯ ಹತ್ತಿರ ಮುಟ್ಟುತ್ತಿದ್ದಂತೆ ರೈತ ಪುಂಡಲೀಕನ ಮಗ ಕಿಶೋರ ಪಕ್ಕದಲ್ಲಿ ಹೋಗುತ್ತಿರುವಾಗಲೆ ಕುಂಬಾರನನ್ನು ಕೂಗಿ "ನಿನ್ನೆ ರಾತ್ರಿ ರಾಜೀವಗಾಂಧಿನ್ನ ಗುಂಡು ಹಾಕಿ ಕೊಂದರಂತೆ. ಮಹಾದೇವನ ಟೀವಿಯಾಗ ಮುಂಜಾನಿ ತೋರಿಸಿದ್ರು."

ಸೀತವ್ವ ಅಂಗಳ ಕೊನೆಗೆ ಬಂದು ನಿಂತು ಕೇಳಿದಳು. "ಅಂವಾ ಇಂದಿರಾ ಗಾಂಧಿ ಮಗಾ ಅಲ್ಲೇನೊ?" 'ಹೌಂದ, ಹೌಂದ" ಎಂದು ಅವನು ಮುಂದೆ ಸಾಗಿದ. "ಯಾರಂವಾ ಪಾಪಿಷ್ಟ... ಏನ್ ಎಂಥಾ ಹ್ವಾರೆ ಮಾಡ್ದ" ಎಂದು ತಳಮಳಿಸುತ್ತ ಸೀತವ್ವ ಒಳಗೆ ಬಂದಳು. ಆದರೆ ಆ ಕುಂಬಾರನಿಗೇನು ಅದರ ಪರಿವೆಯಿರಲಿಲ್ಲ. ಕುಂಬಾರರೆಲ್ಲ ಮಣ್ಣು ತಟ್ಟುತ್ತ, ತಿಗರಿಯ ಮೇಲೆ ಮಣ್ಣಿನ ವಿವಿಧ ಆಕೃತಿಗಳನ್ನು ರಚಿಸುತ್ತ ಅವರು ತಮ್ಮ ಕೆಲಸದಲ್ಲಿ ಮಗ್ನರಾಗಿದ್ದರು.

ಆನಂದಿ ಮತ್ತು ದೇವಕಿ ಇಬ್ಬರೂ ಗಡಿಗೆ ಮಾರಾಟಕ್ಕೆ ಹೊರಟಿದ್ದರು. ಹೊಲದೊಳಗಿನಿಂದ ನಡೆದುಹೋಗುತ್ತಿರುವಾಗ ಅವರ ತಲೆಯ ಮೇಲಿನ ಹೆಡಿಗೆ ಮಾತ್ರ ಕಾಣಿಸುತ್ತಿತ್ತು. ಬಿಸಿಲು ಬಿಸಿಯಾಗತೊಡಗಿತ್ತು. ಹೊತ್ತು ಏರುವ ಮೊದಲು ಯಾವುದಾದರೂ ಊರು ತಲುಪಿ ನೆರಳಲ್ಲಿ ಕುಳಿತುಕೊಳ್ಳಬೇಕಾಗಿತ್ತು. ಮಧ್ಯಾಹ್ನದ ಗಂಜಿ ಇಲ್ಲವೆ ಅನ್ನ ಎಲ್ಲಾದರೂ ದೊರಕಿಸಬೇಕಾಗಿತ್ತು. ಕುಂಬಾರ ಹೆಂಗಸರನ್ನು ಹಳ್ಳಿ ಹಳ್ಳಿಯ ಜನ ಸುಲಭವಾಗಿ ಗುರುತಿಸುತ್ತಿದ್ದರು. ಒಂದು ಬಾರಿ ಹಳಗೆ ಎಂಬ ಹಳ್ಳಿಗೆ ಹೋದಾಗ ಒಬ್ಬಳು ಆನಂದಿಯನ್ನು "ಏನವ್ವ ಆನಂದಿ. ಎಷ್ಟು ದಿನ ಆತವ್ವ ಈ ಕಡಿ ಮಾರೀನ ಹಾಕಿಲ್ಲ. ತಿಂಗಳ ತುಂಬ್ಯಾವೇನು ಮತ್ತ?" ಎಂದು ಕೇಳಿದ್ದಳು.

ಆನಂದಿಗೆ ಕೊಂಚ ನಾಚಿಕೆಯೆನಿಸಿತು. "ಎಲ್ಲೀದ ಬಿಡವ್ವ... ಇದ್ದಾವರಿಗೆ ಮತ್ತ ಆಗತಿರತಿತಾವ... ಊರಾಗ ಬಂದ್ರೇನು... ಮದಲಿನ ಹಂಗ ವ್ಯಾಪಾರ ಈಗ ಇಲ್ಲವ್ವ ಮಂದೀಗ ಈಗ ಚಕಚಕ ಹೊಳಿಯುವ ಪಾತ್ರೆ ಪಡಗ ಬೇಕಾಗ್ಯಾವ.

ಈಗಲೂ ಕುಂಬಾರರ ಹೆಣ್ಣು ಮಕ್ಕಳು ತಮ್ಮ ತಲೆಯ ಮೇಲಿನ ಹೆಡಿಗೆ ಯಾವುದಾದರೂ ಒಳ್ಳೆಯ ಮನೆಯ ಮುಂದೆ ಇಳಿಸಿ ಆ ಮನೆಯ ಮಂದಿಯೊಂದಿಗೆ ಸ್ವಲ್ಪ ಮಾತುಕತೆ ನಡೆಸಿ ಊಟ ಮುಗಿಸಿ ಮುಂದಿನ ಪಯಣಕ್ಕೆ ಹೋಗುವ ರೂಢಿ.

ಈ ಊರಿನ ಒಬ್ಬ ರೈತನ ಹುಡುಗಿ ಗೋಪಶಿಟ್ಟೆ ಎಂಬ ಹಳ್ಳಿಗೆ ಕೊಟ್ಟಿದ್ದರು. ಯಾರೇ ವಾಡೆಯ ಕಡೆಯಿಂದ ಹೆಡಿಗೆ ತೆಗೆದುಕೊಂಡು ಹೊರಟರೂ ಆ ಕುಂಬಾರನ ಹೆಣ್ಣು ಮಗಳು ಮನೆಯಿಂದ ಹೊರಗೆ ಓಡಿ ಓಡಿ ಬಂದು 'ನೀ ಈವತ್ತ ಗೋಪಶಿಟ್ಟೆಗೆ ಹ್ವಾದರ ನಮ್ಮಜಾಯು ಹೆಂಗದಾಳ ನೋಡಿಕೊಂಡು ಬಾ. ಇಲ್ಲಿ ನಾವೆಲ್ಲ ಆರಾಮದೇವಿ ಅಂತ ಹೇಳು" ಎಂದು ಹೇಳುತ್ತಿದ್ದಳು.

ಈ ಹೊತ್ತೂ ಅವಳು ಹೆಡಿಗೆ ತೆಗೆದುಕೊಂಡು ಹೊರಟಾಗ ಓಡುತ್ತ ಮನೆಯಿಂದ ಬಂದು 'ಗೋಪಶಿಟ್ಟೆಗ ಹೋಗ್ತಿರೇನು?"

ಆನಂದಿಯು "ಹೌದು ಹೌದು ಹೋಗತೀವಿ" ಎಂದು ಹೊರಟಾಗ ಅವಳು ಕೊಂಚ ಕಳಕಳಿಯಿಂದ ಅಲ್ಲಿ ಹೋದರೆ ತನ್ನ ಮಗಳ ಸಮಾಚಾರ ತರಲು ಹೇಳಿದಳು. "ಸಾಲೀಗ ರಜಾ ಬಿದ್ದ ಮ್ಯಾಗ ತಮ್ಮನ್ನ ಕಳಸ್ತೀವಿ ಅಂತ ಹೇಳು."

"ಹೂಂನವ್ವ"

"ಹುಡುಗನ್ನ ಚೆಂದಾಗಿ ನೋಡಿಕೊ ಅಂತ ಹೇಳು"

"ಹೂಂನವ್ವ"

ಈ ಊರಿನ ಯಾವುದೇ ಹೆಣ್ಣು ಮಗಳು ಗೋಪಶಿಟ್ಟೆ ಹಳ್ಳಿಗೆ ಹೋದರೆ ಜಾಯುನ ಮನೆಗೆ ಹೋಗದೆ ಬರುತ್ತಿರಲಿಲ್ಲ. ಅವಳ ಮನೆಯ ಸುತ್ತ ಗಿಡಮರಗಳಿಂದ ತುಂಬಿ ತಂಪುತಂಪಾಗಿರುತಿತ್ತು. ಕೇದಿಗೆ ಹೂವು ರಾಶಿ ರಾಶಿ ಸಿಗುತಿತ್ತು. ಬಾವಿಯ ನೀರಂತೂ ಬೊಗ್ಸೆಯಿಂದ ಎತ್ತಿ ತರುವಷ್ಟು ಮೇಲಿತ್ತು. ಜಾಯು ಅಂತೂ ತವರು ಮನೆಯ ಊರಿಂದ ಯಾರು ಬಂದರೂ ದೇವರಂತೆ ನೋಡಿಕೊಳ್ಳುತ್ತಿದ್ದಳು. ಅವಳ ಮನೆಯ ಜಗಲಿಯ ಮೇಲೆ ಐದು ನಿಮಿಷ ಕುಳಿತರೂ ಹಾಯಾಗ ನಿದ್ದೆ ಬರುತಿತ್ತು.

ಆನಂದಿ ಮತ್ತು ದೇವಕಿ ತಲೆಯ ಮೇಲೆ ಹೆಡಿಗೆ ಇಟ್ಟುಕೊಂಡು ಸರಸರ ನಡೆಯುತ್ತಿದ್ದರು. ನಡೆಯುವಾಗ ಸೊಂಟದ ಮೇಲೆ ಭಾರ ಬೀಳುತಿತ್ತು. ಬೆನ್ನಿನ ಮಣಿಯೂ ನೋಯುತಿತ್ತು. ಕೂದಲಿನಿಂದ, ತಲೆಯಿಂದ ಬೆವರು ಧಾರೆಯಾಗಿ ಇಳಿಯುತಿತ್ತು. ಈ ನೋವು, ಈ ದುಃಖ ಮರೆಯಲು ಅವರಿಬ್ಬರೂ ಏನೇನೂ ಹರಟುತ್ತ ದಾರಿ ಸವೆಸುತ್ತಿದ್ದರು.

ದೇವಕಿ ಹೇಳುತ್ತಿದ್ದಳು 'ಮದಪಿ ಆದಾಗ ನಾನು ಮತ್ತು ನನ್ನತ್ತಿ ಕೂಡೇ ಗಡಗಿ ಮಾಡಾಕ ಹೋಗತಿದ್ವಿ, ಮಂದಿ ನಮ್ಮ ತಲಿ ಮ್ಯಾಗಿನ ಮಡಕಿ ನೋಡಿ ಕರದು ಕೊಂಡುಕೊತಿದ್ರು, ಎಡ್ಡೆಡು ಹೆಡಿಗೆ ಗಡಗಿ ಮಾರಿ ಸಂಜಿ ಮೊದಲು ಮನಿ ಮುಟ್ಕೋತಿದ್ವಿ, ಮಂದಿ ರೊಕ್ಕ ಕೊಡದ ಭತ್ತ, ಅಕ್ಕಿ ಕೊಡತಿದ್ರು, ನಾವ್ ತಗೋತಿದ್ವಿ, ಮನೀಗ ಪರತ ಹೋಗುಮುಂದ ತಲೀಮ್ಯಾಗ ಅಕ್ಕಿ, ಭತ್ತದ ಪೊಟ್ಲೆ ಇರತಿದ್ವು"

"ಈಗೆಲ್ಲವ್ವ, ಎರಡಲ್ಲ ಒಂದರ್ಧ ಹೆಡಗಿ ಮಾರೂದ ಕಷ್ಟಕ ಬಂದೈತಿ. ಯಾರಿಗೆ ಬೇಕಾಗ್ಯದ ಮಣ್ಣಿನ ಮಡಕೆ? ಹೊಟ್ಟೆ ಐತಿ ಅಂತ ಕುಂಬಾರ ಮಂದಿ ಗಡಗಿ ಮಾಡೂದು. ಕುಂಬಾರರಂಥ ಕೆಟ್ಟ ನಸೀಬಿನ ಜಾತಿ ಬ್ಯಾರಿಯಿಲ್ಲ. ನಮ್ಮ ಗಂಡಸುರು ಊರ ಬಿಟ್ಟು ಹೊರಗ ಹೋಗಿ ಬ್ಯಾರಿ ಧಂದಿ ನೋಡ್ಕೋಬೇಕು."

"ಇನ್ನ ಅವರೇನ ಮಾಡತಾರ. ಅವರೀಗ ಮಣ್ಣಿನ ಮುದ್ದಿ ಆಗ್ಯಾರ. ಪೆಟಣೆ ಬಿಟ್ಟು ಮತ್ತೇನಾರ ಕೈಯಾಗ ಹಿಡಿಯಾಕ ಬಂದ್ರಲ್ಲ. ರೈತರ ಹೊಲದಾಗ ಕೆಲಸಾ ಮಾಡಾಕ ತಮ್ಮ ಹೆಂಡ್ರನ್ನ ಕಳಸ್ತಾರ. ಮತ್ತ ತಾವ ಮಣ್ಣ ಕಲಸಗೋತಾ ಕುಂತಿರ್ತಾರ."

"ಏನ್ ಮಾಡೂದವ್ವ... ನಡಿಯೂ ಮುಂದ ಬೆನ್ನಾಗ ತಲಿತನಕ ಗಾಳಿ ಚಂಡ ಏರಿದಂಗ ಏರತೈತಿ. ತಲೀಮ್ಯಾಲಿನ ಹೆಡಿಗೆ ಒಗ್ದ ಬಿಡೂಣು ಅಂತ ಅನಿಸತೈತಿ."

"ನಡೀ ನೀ ಸರಸ್ಸರ ಹೆಜ್ಜಿ ಹಾಕು. ಬಿಸಲೇರತಾ ಐತಿ. ಸಂಜಿ ಕತ್ತಲಾಗೂ ಮೊದಲ ಮನಿ ಮುಟ್ಕೋಬೇಕು. ಅತ್ತಿ ಇದ್ದಾಗ ಒಂದ್ ಸಲ ಏನಾತು ಅಂತಿ, ನದಿ ಆಚೆ ಹಳ್ಳಿಗ ಮಾರಾಕ ಹೊಂಟಿದ್ವಿ, ಸಂಜಿ ಪರತ ಬರೂಮುಂದ ಅಸನೋಟಿ ಮುಟ್ಟುದರಾಗ ಕತ್ತಲಾಗಿ ಬಿಡ್ತು. ಆವತ್ತು ಒಂದ ರಾತ್ರಿ ಯಾರದೊ ಮನ್ಯಾಗ ಮಕ್ಕೊಂಡ್ವಿ... ನನ್ನ ಮದವಿ ಅದೇ ವರ್ಸ ಆಗಿತ್ತು. ಒಬ್ಬ ಮೀಸಿ ಥಾಂಡಿಗ ಅಲ್ಲೆ ಓಡಾಡ್ತಿದ್ದ. ಅತ್ತಿ ಗಾಬರಿಯಾದಳು. ಅಕಿ ನನ್ನನ್ನ ಕಂಕಳಾಗ ಇಟಗೊಂಡ ಮಲಗಿ ಬೆಳಕ ಮಾಡಿದ್ಲು."

ಎರಡು ಎರಡೂವರೆ ಗಂಟೆ ನಡೆದು ಅವರು ಹಣಕೋಣ ಎಂಬ ಹಳ್ಳಿ ತಲುಪಿದನು. ಅಲ್ಲಿ ಒಬ್ಬನನ್ನು ಸ್ವಲ್ಪ ಹಿಡಿಯಪ್ಪ ಅಂತ ವಿನಂತಿ ಮಾಡಿಕೊಂಡು "ಸ್ವಲ್ಪ ಹೆಡಗಿ ಹಿಡಯಪ್ಪ" ಅಂದರು. ಅವರು ಹೆಡಿಗೆ ಕೆಳಗಿಳಿಸಿಕೊಂಡು ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದರು. ಬಿಸಿಲು ಮಳೆಯಲ್ಲಿ ತೊಳೆದು ತೆಗೆದಂತಹ ಮೂವತ್ತೈದರ ಒಳಗಿನ ಬಡಕಲು ಹೆಣ್ಣು ಮಕ್ಕಳು. ಆನಂದಿ ಕೊಂಚ ಬೆಳ್ಳಗೆ, ಯುವತಿ. ಆದರೆ ದೇವಕಿ ಗೋದಿ ಬಣ್ಣದವಳು. ಅವರ ಮೈಯಲ್ಲಿ ಮಾಂಸವಿರಲಿಲ್ಲ. ಕಾಲಿನಿಂದ ತಲೆಯವರೆಗೆ ಮೂಳೆಯ ಹಂದರ. ಈ ಬಡಕಲು ಹೆಂಗಸರು ಇಷ್ಟು ದೊಡ್ಡ ಹೆಡಿಗೆ ನಾಲ್ಕೂರಿನಾಚೆಯಿಂದ ತಂದಿದ್ದಾರೆ ಅಂದರೆ ಯಾರೂ ನಂಬುತ್ತಿರಲಿಲ್ಲ.

ದೇವಕಿ ಹೇಳಿದಳು "ಇಬ್ಬಳಾರೂ ಒಂದೇ ಹಳ್ಳಿಗ ಹೋಗಿ ಏನು ಮಾಡೂದು? ಎರಡು ಹೆಡಿಗೆ ಒಂದೇ ಊರಾಗ ಖರ್ಚಾಗುವುದಿಲ್ಲ. ಮೊದ್ಲು ಒಂದೇ ಹಳ್ಳ್ಯಾಗ ಒಬ್ಬಳು ಆ ಕಡಿ, ಇನ್ನೊಬ್ಳು ಈ ಕಡಿ ಹೋಗತಿದ್ರು, ಬರೂ ಮುಂದ ಖಾಲಿ ಬುಟ್ಟಿ ತಗಂಡು ಬರ್‌ತಿದ್ರು. ಈಗ ಒಂದ ಊರಾಗ ಒಂದಲ್ಲ ಅರ್ಧ ಹೆಡಿಗೆ ಖರ್ಚಾಗೂದು ಕಠಿಣ ಐತಿ."

"ನಾನು ಮುಂದ ಗೋಪಶಿಟ್ಟೆಗೆ ಹೋಗ್‌ತೀನಿ. ಜಾಯೂ ಮನೀಗೂ ಹೋಗ್‌ತೀನಿ. ನೀ ಸಂಜಿ ಮುಂದ ಬಂದು ಮ್ಹಾದೇವನ ಚಾ ದುಕಾನಸನೆಕ ಕೂಡು. ನನಗ ಸ್ವಲ್ಪ ವ್ಯಾಳ್ಯಾ ಆದ್ರೂ... ಕುಂತಿರು"

ಮತ್ತೊಬ್ಬನನ್ನು ವಿನಂತಿಸಿ ಅವರಿಬ್ಬರೂ ತಮ್ಮ ತಲೆಯ ಮೇಲೆ ಹೆಡಿಗೆಯನ್ನಿಟ್ಟು ಕೊಂಡರು. ಅವರು ನಾಲ್ಕು ಹೆಜ್ಜೆ ಮುಂದೆ ಹೋಗುವುದರಲ್ಲಿ ಹೊಲದಂಚಿನಲ್ಲಿದ್ದ ಮನೆಯಿಂದ ದೊಡ್ಡ ದೊಡ್ಡಕೆ ಜನರು ಅಳುವ ಕೂಗು ಕೇಳಿಸಿತು. ದೇವಕಿ ಯಾರನ್ನೊ ಏನಾಗಿದೆಯೆಂದು ಕೇಳಿದಳು. "ಅವನು ಕೇಶವನ ತಂದಿ ಈಗಷ್ಟೆ ಸತ್ತ. ಎರಡು ವರ್ಷದಿಂದ ಹಾಸಿಗ್ಯಾಗ ಇದ್ದ" ಎಂದ.

"ದೇವಕಿ, ನೀ ಹ್ಯಾಂಗಾರೂ ಆ ಕಡಿ ಹೊಕ್ಕಿಯಲ್ಲ. ಆ ಮನಿ ಕಡಿಂದ್ಲ ಹಾಯ್ದು ಹೋಗು. ಅವರಿಗೆ ಗಡಗಿ ಬೇಕಾಗಬಹುದು" ಎಂದು ಆನಂದಿ ದೇವಕಿಗೆ ಸೂಚಿಸಿದಳು.

"ಇಲ್ಲವ್ವ ಇಲ್ಲ. ನಾ ಆ ಕಡಿ ಹೋಗಾಂಗಿಲ್ಲ ನನಗ್ಯಾಕೋ ಹಿಡಿಸೂದಿಲ್ಲ"

ದೇವಕಿ ಮುನ್ನಡೆದು ಹಳ್ಳಿಯತ್ತ ಸಾಗಿದಳು. ಆನಂದಿ ಮುಂದಿನ ಹಳ್ಳಿಗೆ ಹೊರಟಳು. ಆ ಊರು ಕಾಡು, ಹೊಲ, ಕೇರಿಗಳಿಂದ ತುಂಬಿತ್ತು. ಯಾವಾಗ ಹೊಲಗಳು ದಾಟ ಕಾಡು ನಡೆದು ಊರು ಬಂದುಬಿಡುತ್ತದೆ ತಿಳಿಯುತ್ತಿರಲಿಲ್ಲ. ಗುಡ್ಡ ಬೆಟ್ಟಗಳಲ್ಲಿ ನಡೆದು ಹೋಗುವಾಗ ಒಂದು ಬಗೆಯ ಸದ್ದು ಕಿವಿಯನ್ನಪ್ಪಳಿಸುವಾಗ ಊರು ಹತ್ತಿರ ಕಾಣದಿರುವಾಗ ಮನಸ್ಸಿಗೆ ಒಂದು ರೀತಿಯ ಚಿಂತೆ ಆವರಿಸಿಕೊಳ್ಳುತ್ತಿತ್ತು. ಮುಂದೆ ಗೋಪಿಶೆಟ್ಟಿ ಮುಟ್ಟಲು ಒಂದು ಗಂಟೆಯಾದರೂ ಬೇಕು. ಆನಂದಿ ದಮ್ಮು ತೆಗೆಯುತ್ತ ಲಗುಬಗೆಯಿಂದ ಹೆಜ್ಜೆ ಹಾಕುತ್ತಿದ್ದಳು.

ಇತ್ತ ದೇವಕಿ ಊರಲ್ಲಿ ಪ್ರವೇಶಿಸಿ ವಾಡೆಯ ಕಡೆಗೆ ಹೋಗುತ್ತಿದ್ದಳು. ಆಗ ಒಬ್ಬ ವ್ಯಕ್ತಿ ಓಡುತ್ತ ಬಂದು "ಎಡ್ಡ ಗಡಗಿ ಕೊಡು. ಮತ್ತ ಎಲ್ಲಿ ಹೋಗ್ಲಿ ಗಡಗಿ ತರಾಕ. ದೂರ ಭಗವತ ವಾಡೆಗೆ ಹೋಗಬೇಕಾಗ್ತದ.

"ಯಾಕೆ... ಸ್ಮಶಾನಕ್ಕೆ ಒಯ್ಯಾಕ ಬೇಕೇನು?"

"ಹೌಂದೌಂದ... ಯಾರೋ ಹೇಳಿದ್ರು. ಕುಂಬಾರರ ಹೆಣ ಮಗಳು. ಊರಾಗ ಬಂದಾಳಂತ."

"ಇನ್ನೂ ಮಟಾ ಹೆಡಿಗೆ ಬಿಚ್ಚಲೇ ಇಲ್ಲ. ಮೊದಲ್ನೆ ಬೋಣಿಗಿ ಮರಣಕ್ಕ ಕೊಡಲೇನು? ಊರ ಮಂದಿ ಏನಂದಾರು? ಊರಾಗ ಮಾರಾಕ ಬೇಕಲ್ಲಪ್ಪ."

"ಏನಾಗೂದಿಲ್ಲ ಬಿಡವ್ವ" ಎಂದು ಅವನು ನೇರವಾಗಿ ಹೆಡಿಗೆಗೇ ಕೈ ಹಾಕಿದ.

ದೇವಕಿ ಹೆಡಿಗೆಯನ್ನು ತಲೆಯ ಮೇಲಿಂದ ಇಳಿಸಿದಳು. ಹೆಡಿಗೆಯಿಂದ ಎರಡು ಗಡಿಗೆ ತೆಗೆದು ಅವನಿಗೆ ಕೊಟ್ಟಳು. ಅವನು ತಕ್ಷಣ ಜೇಬಿನಿಂದ ಇಪ್ಪತ್ತರ ಎರಡು ನೋಟುಗಳನ್ನು ಅವಳ ಕೈಯಲ್ಲಿಟ್ಟು ಮತ್ತೆ ಅವಳ ತಲೆಯ ಮೇಲೆ ಹೆಡಿಗೆಯನ್ನಿಟ್ಟು ಹೋಗುವಾಗ ಆ ವ್ಯಕ್ತಿ ಹೇಳಿದ "ಏನಾಗೂದಿಲ್ಲ ಬಿಡವ್ವ, ನೀನು ನನಗ ಗಡಗಿ ಕೊಟ್ಟಿದ್ದು ಯಾರಿಗೂ ಹೇಳಬ್ಯಾಡಾ. ಸಾವು ಎಲ್ಲಿಲ್ಲ? ಯಾರಿಗೆ ಬರೂದಿಲ್ಲ ಮರಣ?"

ದೇವಕಿಯ ಮನಸ್ಸಿನಲ್ಲಿ ಒಂದು ಬಗೆಯ ಕಳವಳ ಇದ್ದೇ ಇತ್ತು. ಆದರೆ ಆ ಕೆಂಪು ಹೊಸ ನೋಟು ನೋಡಿ ಆಕೆಗೆ ಖುಷಿಯೂ ಆಗಿತ್ತು.

ಅತ್ತ ಆನಂದಿ ಹಣಕೋಣ ಹಳ್ಳಿ ದಾಟದನಂತರ ಒಂದು ದೊಡ್ಡ ಕಾಡು ಕಂಡಿತು. ಆಗಾಗ್ಗೆ ಓಡಾಡುವ ಪರಿಚಿತ ಕಾಡೇ ಆಗಿತ್ತು. ಆದರೂ ಒಂದು ಬಗೆಯ ಎದೆಗುದಿ ಅವಳನ್ನು ಆವರಿಸಿತ್ತು. ಈ ಕಾಡು ದಾಟಿದ ಮೇಲೆ ಕಾಡಿನಲ್ಲೆ ಒಂದು ದೊಡ್ಡ ಹಳ್ಳಿ ಬರುತ್ತದೆಯೆಂಬ ಖುಷಿಯೂ ಅವಳ ನಡಿಗೆಯನ್ನು ತೀವ್ರಗೊಳಿಸಿತ್ತು. ಕಾಡಿನ ದಾರಿಯಲ್ಲಿ ಹೋಗುವಾಗ ಅವಳೊಬ್ಬಳೇ ಇದ್ದಳು. ಆದರೆ ಅನತಿ ದೂರದಲ್ಲಿ ಸ್ವಲ್ಪ ವಯಸ್ಸಾದವನೊಬ್ಬ ಮೆಲ್ಲಗೆ ನಡೆಯುತ್ತಿದ್ದ. ಅವನು ದೂರದಿಂದ ಹಿಂತಿರುಗಿ ನೋಡಿ ನಿಂತ. ಆನಂದಿ ಹತ್ತಿರ ಬರುವವರೆಗೆ ಅವನು ನಿಂತೇ ಇದ್ದ. ಅವನು ಮೈಗೆ ಕೈಯಿಂದ ಹೆಣೆಗೆ ಹಾಕಿದ್ದ ಬನೀನು ಧರಿಸಿ ಸೊಂಟಕ್ಕೊಂದು ಕಚ್ಚೆ ಬಿಗಿದಿದ್ದ. ಆ ಕಚ್ಚೆಯ ಚುಂಗು ಮೊಣಕಾಲಿನವರೆಗೆ ಇಳಿಬಿಟ್ಟಿದ್ದ. ಹೆಗಲ ಮೇಲೆ ಕಂಬಳಿಯಿತ್ತು.

'ಮಾಜಾಳಿಯ ಕುಂಬಾರ ಹೆಣ ಮಗಳಲ್ಲವ್ವ ನೀನು? ಈ ಗಡಿಗೆ ಹೆಂಡಿಗೆ ತಗೊಂಡು ಎಲ್ಲಿಂದ ಎಲ್ಲಿವರೆಗೂ ಹೋಗ್ತೀರಿ. ನಿಮ್ಮ ಗಂಡಸುರ ಕುಂತ ಜಗಾದಾಗ ಕುಂತಗಡಗಿ ಬಡೀತಾರ. ವಜ್ಜೆ ಹೆಣ್ಣ ಮಕ್ಕಳ ತಲಿ ಮ್ಯಾಗಿಟ್ಟು ಬಿಡ್ತಾರ. ನಿಮ್ಮ ಗಡಗಿ ಮಾತ್ರ ಪಸಂದಾಗಿರ್ತಾವ. ನಮ್ಮೂರಾಗ ನಿಮ್ಮ ಊರಿನದೇ ಮಡಕಿಗಳು" ದನದ ಕೊರಳಲ್ಲಿದ್ದ ಗಂಟೆಯ ಧ್ವನಿಯಂತೆ ಅವನು ದೊಡ್ಡ ಸ್ವರದಲ್ಲಿ ಮಾತಾಡುತ್ತಿದ್ದ.

"ಮಾಮಾ ನೀವ್ ಯಾವುರವ್ರು, ಎಲ್ಲಿಂದ ಬಂದ್ರಿ? ನಾನು ಸಂಗ್ತ್ಯಾಗ ಒಬ್ಬಾವರು ಬೇಕಂತ ಮನಸ್ಸಿನಾಗ ಅಂದ್ಕೋತಿದ್ದೆ"

"ನಾನು ಗೋಪಶಿಟ್ಟೆ ಹಳ್ಳಿ ಹತ್ತಿರ ಮಾಂಯಗಿಣಿ ಊರಿನಂವಾ. ಹಣಕೋಣ ಬಾಳಾಜಿ ನಾಯಕ ದನದ ಹಟ್ಟಮಾಡು ಇಳಿಸ್ಯಾನ. ಅದನ್ನ ಮತ್ತ ಕಟ್ಟಾಕ ಗಟ್ಟಿ ಬಳ್ಳಿ ಬೇಕಾಗಿತ್ತು. ಒಂದು ಹೊರೆ ಬಳ್ಳಿ ಮುಟ್ಟಿಸಿ ಬಂದೆ. ನಿನಗ ಗಟ್ಟಿ ಬಳ್ಳಿ ಯಾವದಂತ ತಿಳೀತೇನು. ನಿಮಗೆ ಕುಂಬಾರ ಮಂದಿಗ ಗೊತ್ತಿದ್ದಂಗಿಲ್ಲ. ಒಂದು ಸಪೂರ ಬಳ್ಳಿ ಗಿಡದ ಮ್ಯಾಗ ಏರತೈತಿ. ಎಷ್ಟು ಗಟ್ಟಿ ಅಂದ್ರ ಆನಿ ತಂದ ಜಗ್ಗಿದರೂ ತುಂಡಾಗೂದಿಲ್ಲ. ದನದ ಕೊಟ್ಟಿಗೆಯ ಇಳಿ ಮಾಡು. ಈ ಬಳ್ಳಿಯಿಂದ ಕಟ್ಟಿದರ ನೂರು ವರ್ಷ ಆದರೂ ಜಪ್ಪನ್ನೂದಿಲ್ಲ. ಮಾಂಯಾಗಿಣಿಯ ಅಡವ್ಯಾಗ ಮಾತ್ರ ಬ್ಹಾಳ ಸಿಗತಾವ ಈ ಬಳ್ಳಿ."

ಅವನೊಬ್ಬನೆ ದೊಡ್ಡ ದೊಡ್ಡಕೆ ಮಾತಾಡುತ್ತಿದ್ದ. ಆನಂದಿ ಮಾತ್ರ ಅವನ ಮಾತಿಗೆ 'ಹೌಂದ ಮಾಮಾ' 'ಹೂಂ ಮಾಮಾ' ಎಂದು ದನಿಗೂಡಿಸುತ್ತ ಸಾಗಿದ್ದಳು. ಅವನ ಆ ಕಂಚಿನ ಕಂಠದ ಮಾತಿಗೆ ಆನಂದಿಗೆ ತಲೆಯ ಮೇಲಿನ ಭಾರ ಮರೆತು ಹೋಗಿತ್ತು. ಗೋಪಶಿಟ್ಟೆ ಹಳ್ಳಿಗೆ ತಲುಪುವ ಮುನ್ನ ಅವನು ಒಂದು ಕವಲು ದಾರಿಯಲ್ಲಿ ಇಳಿದು ಹೋಗುತ್ತಿರುವಾಗ "ನೀ ಹೋಗು ಈಗ. ಅಂಜಬ್ಯಾಡಾ. ಇದು ಗವಳೇರ ಊರು. ಕಾಯೂ ಮಂದಿ ಅವರು.

...ಹಿಂದೆ ಒಮ್ಮೆ ಕುಂಬಾರ ವಾಡೆಯಲ್ಲಿ ಗುಣಾಯ ಎಂಬ ಸುಂದರ ಹೆಣ್ಣು ಮಗಳಿರುತ್ತಿದ್ದರು. ಅವಳ ತವರು ಮನೆ ನೆತುರ್ಲೆ. ಅವಳು ಒಂಬತ್ತು ವರ್ಷದವಳಿದ್ದಾಗ ಅವಳ ತಂದೆ ಮದುವೆ ಮಾಡಿ ಹೆಗಲ ಮೇಲೆ ಕೂಡಿಸಿಕೊಂಡು ತಂದು ಗಂಡನ ಮನೆಯಲ್ಲಿ ಬಿಟ್ಟು ಹೋಗಿದ್ದ. ಮೊದಲೇ ಅವಳು ಬೆಳ್ಳಗಿದ್ದಳು. ಪ್ರಾಯಕ್ಕೆ ಬಂದಾಗಂತೂ ಅವಳೂ ರೂಪಸುಂದರಿಯಂತೆ ಕಾಣುತ್ತಿದ್ದಳು. ಕುಂಬಾರವಾಡೆಯಲ್ಲಿ ದೇವತೆಯಂತೆ ಓಡಾಡಿಕೊಂಡಿದ್ದಳು. ಸಮೀಪ ಸುಖದಳ್ಳಿ ಹಳ್ಳಿಯಲ್ಲಿ ದೇವರ ಜಾತ್ರೆಯಿತ್ತು. ಅದು ದೀಪಗಳ ಜಾತ್ರೆ. ಒಂದು ದಿನ ಅವಳ ಗಂಡ ಬುಟ್ಟಿ ತುಂಬ ದೀಪದ ಪಣತಿಗಳನ್ನಿಟ್ಟು "ಸುಖದಳ್ಳಿಯ ಮನೆಮನೆಗೆ ಹೋಗಿ ದೀಪದ ಹಣತೆಗಳನ್ನು ಕೊಟ್ಟು ಬಾ. ಅವರು ಬುಟ್ಟಿಯಲ್ಲಿ ಅಕ್ಕಿ, ತೆಂಗಿನ ಕಾಯಿ, ರೊಕ್ಕ ಹಾಕ್ತಾರ. ತಗೊಂಡು ಬಾ.'

ಗುಣಾಯ ಸುಖದಳ್ಳಿ ಒಳಗೆ ಕಾಲಿಡುತ್ತಿದ್ದಂತೆ ಇಬ್ಬರು ಧಾಂಡಿಗರು ಕೈಯಲ್ಲಿ ಕತ್ತಿ ಹಿಡಿದು ದಾರಿಯಲ್ಲಿ ಅಡ್ಡ ನಿಂತರು. ಅವರು ಅವಳನ್ನು ಗಿಡಗಂಟೆಗಳಲ್ಲಿ ಎಳೆದುಕೊಂಡು ಹೋದರು ತಲೆಯ ಮೇಲಿದ್ದ ಹಣತೆ ದೀಪಗಳ ಬುಟ್ಟಿ ಕೆಳಗಿಳಿಸಿ ಅವಳ ಮೇಲೆ ಬಲಾತ್ಕಾರ ಮಾಡಿದರು. ಗುಣಾಯಿ ಅತ್ತಳು, ಚೀರಿದಳು. ಅಸಹಾಯಕಳಾಗಿ

ಹೊರಳಾಡಿದಳು. ಕೊನೆಗೆ ಸಿಟ್ಟಿನಿಂದ ಬೆಂಕಿಯಾದಳು. ಅವಳು ಹಣತೆ ದೀಪಗಳ ಬುಟ್ಟಿ ತಂದು ಊರಿನ ಮಹಾಸತಿ ಬೆಟ್ಟದ ಮೇಲಿರುವ ಸತಿಯ ಶಿಲೆಯ ಮೇಲೆ ಒಂದೊಂದಾಗಿ ಒಡೆದಳು. ಸತಿಯ ಕಾಲಡಿಯಲ್ಲಿ ಚೂರುಗಳ ರಾಶಿ ಬಿದ್ದಿತ್ತು.

ಅನಂತರ ಅವಳು ದೇವಾಲಯದ ಮುಂದೆ ಹೋಗಿ ನಿಂತು ಊರಿನತ್ತ ಕೈಚೀಸಿ, "ಈ ಊರಿಗೆ ಎಂದೂ ಒಳ್ಳೆದಾಗಲಿಕ್ಕಿಲ್ಲ. ಈ ಊರಿನ ಸರ್ವನಾಶವಾಗುತ್ತದೆ" ಎಂದು ಶಾಪ ಕೊಟ್ಟಳು.

ಕೊನೆಗೆ ಅವಳು ಹರಿದ ಬಟ್ಟೆಯಲ್ಲೇ ಮನೆಗೆ ಬಂದಳು. ಅವಳು ತನ್ನ ಅತ್ತೆಗೆ ಕೇಳಿದಳು. "ಅವ್ವಾ... ಮಾಂಸದ ಅಡಿಗೆ ಮಾಡಿ ಅಶುಚಿಯಾದ ಗಡಿಗೆ ಹ್ಯಾಂಗವ್ವ ಶುದ್ಧ ಮಾಡೂದು?"

"ಅದನ್ನು ಬೆಂಕ್ಯಾಗ ಸುಟ್ಟ ಮ್ಯಾಲ ಸುದ್ಧ ಆಗೂದು" ಅಂದಳು ಅವಳ ಅತ್ತೆ.

ಅದೇ ರಾತ್ರಿ ಗುಣಾಯಿ ತನ್ನ ಮೈಮೇಲೆ ಎಣ್ಣೆ ಸುರಿದುಕೊಂಡು ಮೈಗೆ ಬೆಂಕಿ ಹಚ್ಚಿಕೊಂಡು ಸತ್ತಳು.

ಆಮೇಲೆ ಆ ಊರಿನ ಅಧೋಗತಿ ಶುರುವಾಯಿತು. ದೇವಾಲಯ– ಮನೆಗಳೆಲ್ಲ ಒಂದೊಂದಾಗಿ ಕುಸಿಯುತ್ತ ಹೋದವು. ಮಣ್ಣಿನಲ್ಲಿ ಸೇರಿ ಹೋದವು. ಈಗ ಆ ಊರಿನ ಅವಶೇಷಗಳೂ ಉಳಿದಿಲ್ಲ ಎಂದು ಜನ ಹೇಳುತ್ತಾರೆ.

ಅದೇ ಕೊನೆ. ಅನಂತರ ಕುಂಬಾರ ಹೆಣ್ಣುಮಕ್ಕಳ ಬಗ್ಗೆ ಒಂದಿಷ್ಟು ಜನ ತಪ್ಪಿಯೂ ಮಾತಾಡದಂತಾಯಿತು. ಆ ಹೆಣ್ಣು ಮಕ್ಕಳನ್ನು ಯಾರೂ ಕೆಟ್ಟ ಕಣ್ಣಿನಿಂದ ನೋಡಲಿಲ್ಲ. ಈಗ ಕುಂಬಾರ ಹೆಣ್ಣು ಮಕ್ಕಳು ಭಯವಿಲ್ಲದೆ ನಿಸ್ಸಂಕೋಚದಿಂದ ಊರಲ್ಲಿ ಓಡಾಡುತ್ತಾರೆ... ಗುಣಾಯಳ ನೆನಪು ಮಾಡುತ್ತ.

ಆನಂದಿ ಯೋಚಿಸುತ್ತ ಯೋಚಿಸುತ್ತ ಚಿಂಚವಾಡೆಗೆ ಬಂದು ಮುಟ್ಟಿದ್ದಳು. ತನ್ನನ್ನು ಯಾರಾದರೂ ಕೂಗುತ್ತಾರೆಯೋ ಎಂದು ಗಮನಿಸುತ್ತ ದಣಪೆಯ ಬಳಿ ನಿಂತಿದ್ದಳು. ಇಷ್ಟು ದೊಡ್ಡ ಮಡಕೆಯ ಹೆಡಿಗೆ ನೋಡಿಯೂ ಒಬ್ಬರೂ ಕರೆಯುತ್ತಿರಲಿಲ್ಲ. ವಾಡೆಯ ಮೇಲೆ ಪರಿಚಿತರ ಮನೆಗಳಿದ್ದವು. ಆದರೆ ಬೇರೆಯವರ ಮನೆಗೆ ಹೋಗಿ ಗಡಿಗೆ ಇಳಿಸಿ ಮಾತಿಗೆ ಕೊಡುವ ಮನಸ್ಸು ಅವಳಿಗಿರಲಿಲ್ಲ. ಆದರೂ ಒಮ್ಮೆ 'ಗಡಿಗೆ... ಗಡಿಗೆ' ಎಂದು ಕೂಗು ಹಾಕಿದಳು.

ಒಬ್ಬಳು ಪರಿಚಿತ ಹೆಣ್ಣು ಮಗಳು ಹೊರಗೆ ಬಂದು ಅವಳನ್ನು ಅಂಗಳಕ್ಕೆ ಕರೆದು ಹೆಡಿಗೆಯನ್ನು ಕೆಳಗಿಳಿಸಿಕೊಂಡಳು. "ಬಿಸಿಲು ಎಷ್ಟು ಏರಿದೆ ನೋಡು. ಬೆವರಿನಿಂದ ಒದ್ದೆಯಾಗಿದ್ದಿಯಲ್ಲ?" ಎಂದು ಹೇಳುತ್ತ ಆ ಹೆಣ್ಣು ಮಗಳು ಒಳಗೆ ಹೋಗಿ ಒಂದು ತಂಬಿಗೆ ನೀರು ತಂದುಕೊಟ್ಟಳು. ಆನಂದಿ ನೀರು ಕುಡಿದಳು. ಮಿಕ್ಕ ನೀರು ಕಣ್ಣಿಗೆ, ಹಣೆಗೆ ಹಚ್ಚಿಕೊಂಡಳು. ಆ ಹೆಣ್ಣುಮಗಳು "ಶಿವಾನಂದ, ನನ್ನ ಮಗ ಈ ಗಡಗ್ಯಾಗ ಅಡಗಿ ಮಾಡಿದ್ರ ಬಯ್ತಾನ... ಮನ್ಯಾಗಿರೂ ಎಲ್ಲಾ ಗಡಗಿ ತೆಗೆದು ಮಾಳಗಿ ಮ್ಯಾಲ ಒಗದಾನ. ವಾಸ್ಕೋ ಹೋದಾಗೆಲ್ಲ ಒಂದಲ್ಲ ಒಂದ ಸ್ಟೀಲ ಪಾತ್ರೆ ಹಿಡ್ಕೊಂಡ್ ಬರ್ತಾನ."

"ಆದರ ಗಡಗ್ಯಾಗಿನ ಅಡಗಿ ಮೈಗೆ ಛಲೋದಂತಾರ, ರುಚಿನೂ ಇರ್ತದ."

"ನಾವೀಗ ಮೀನ ಸಾರು ಮಾತ್ರ ಮಣ್ಣಿನ ಗಡಗ್ಯಾಗ ಮಾಡತೀವಿ. ಛಲೋ ಆಗ್ತದ."

ಆ ಹೆಣ್ಣು ಮಗಳು ಮೀನು ಅಡಿಗೆ ಮಾಡಲು ಒಂದು ಗಡಿಗೆ ಮಾತ್ರ ಎತ್ತಿಕೊಂಡಳು.

ಹಿಂದಿನ ದಿನಗಳಲ್ಲಿ ಹೀಗೆ ಮಡಕೆಯ ಹೆಡಿಗೆ ತಗೊಂಡು ಹೋದರೆ ಜನ ಮುಕುರುತ್ತಿದ್ದರು. ತಾನೇ ಗಡಿಗೆ ಎತ್ತಿಕೊಂಡು ಬೆಲೆ ಹೇಳುತ್ತಿದ್ದಳು. ಜನರೂ ಅಷ್ಟೇ ಕಣ್ಣು ಮುಚ್ಚಿ ತೆಗೆದುಕೊಂಡು ಬೆಲೆ ಕೊಡುತ್ತಿದ್ದರು. ಈಗ ಜನ ಗಡಿಗೆಯನ್ನು ವ್ಯಂಗ್ಯವಾಗಿ ನೋಡುತ್ತಾರೆ. ಬೆಲೆ ಹೇಳಿದರೆ ಗರ ಬಡಿದವರಂತೆ ನಿಂತು ಬಿಡುತ್ತಾರೆ.

ಇನ್ನೊಬ್ಬ ಹೆಂಗಸು ಗಂಜಿ ಬೇಯಿಸಲು ಚಿಕ್ಕದೊಂದು ಗಡಿಗೆ ತೆಗೆದುಕೊಂಡಳು. ಮತ್ತೊಬ್ಬ ಹೆಂಗಸು ಅನ್ನಕ್ಕಾಗಿ ಅಗಲಬಾಯಿಯ ಗಡಿಗೆಯೊಂದನ್ನು ಕೊಂಡಳು. ಆಗ ಆ ಹೆಂಗಸರು "ನಾವ್ ಈಗ ಅಡಿಗೆ ಮಡಕೆಯಲ್ಲಿ ಮಾಡೂದಿಲ್ಲ. ಯಾರಾದರೂ ಬಂದರೆ ಒಲಿ ಮ್ಯಾಲಿಡಾಕ ಗಡಗಿ ನಡಿತೈತಿ"

ಅಲ್ಲಿ ಮೂರು ಗಡಿಗೆಗಳ ಮಾರಾಟವಾಯಿತು. ಚೌಕಾಸಿ ಮಾಡಿ ಮಾಡಿ ಮೂವತ್ತೆರಡು ರೂಪಾಯಿ ಸಿಕ್ಕಿತು. ಹೆಡಿಗೆಯನ್ನು ಮೇಲಿನಿಂದ ಕಟ್ಟಿ ಮುಂದೆ ಹೋಗಲು ತಲೆಯ ಮೇಲಿರಿಸಿಕೊಂಡಳು. ಹೆಡಿಗೆ ತಲೆಯ ಮೇಲಿಡುತ್ತಿದ್ದಂತೆ ಅವಳು ಹೇಳಿದಳು. "ಇಂದಿರಾಗಾಂಧಿ ಮಗನ್ನ ಗುಂಡ್ಹಾಕಿ ಕೊಂದರಂತ ದುಸ್ಮಾನರು"

"ಹೌದವ್ವ... ಎಂಥಾ ಚೌಂಡಾಲ ಮಂದಿ ನೋಡ್ರಿ."

ಮತ್ತೊಬ್ಬ ಹೆಂಗಸು ಹೇಳಿದಳು.

"ಹೌದವ್ವ... ಮುಂಜಾನಿ ದಾರ್‍ಯಾಗ ಯಾರೋ ಮಾತಾಡಿದ್ದು ಕೇಳಿದ್ದೆ. ಅವರು ರಾವಣನ ಲಂಕೆಯ ಮಂದಿಯಂತೆ."

ಆನಂದಿ ಮುಂದೆ ಹೊರಟಳು. ನೇರವಾಗಿ ಜಾಯೂನ ದಣಪೆಯ ಹತ್ತಿರ ಬಂದಳು. ದಣಪೆಯ ಹತ್ತಿರ ಒಂದು ಸುಂದರವಾದ ದಾಸವಾಳದ ಹೂವು ಅರಳಿತ್ತು. ಕೈಯಗಲದ ಕೆಂಪು ದಾಸವಾಳದ ಹೂವುಗಳು. ಅಲ್ಲಿಯೇ ಸಮೀಪ ಒಂದು ಬಾಳೆಯ ಹಿಂಡು ಬೆಳೆದಿತ್ತು. ಅಗಲವಾದ ಹಸುರೆಲೆಗಳು. ಅವುಗಳ ಶೀತಲ ನೆರಳು ಬಿದ್ದಿತ್ತು. ಆನಂದಿ ಒಂದು ಹೂವು ಕಿತ್ತುಕೊಂಡು ಕೈಯಲ್ಲಿ ಹಿಡಿದು ಅಂಗಳಕ್ಕೆ ಬಂದಳು. ಜಾಯುಳ ಅತ್ತೆ ಕಾಲುದೀಪದಲ್ಲಿ ಎಣ್ಣೆ ಹಾಕಿ ಬತ್ತಿ ಹೊಂದಿಸುತ್ತಿದ್ದಳು. ಅವಳನ್ನು ನೋಡಿ ಅತ್ತೆ "ಜಾಯೂ... ನಿನ್ನ ತವರ್ಮನೆ ಊರಿನ ಹೆಣ್ಣು ಮಗಳು ಬಂದಾಳ ನೋಡವ್ವ."

ಜಾಯೂ ಒಳಗಿನಿಂದ ಓಡಿ ಬಂದಳು. ಅವಳ ತಲೆಗೂದಲು ತಲೆಯ ಮೇಲೆ ಸ್ನಾನ ಮಾಡಿ ಬಂದಂತೆ ಹಸಿಹಸಿಯಾಗಿತ್ತು. ಹೆಗಲ ಮೇಲಿಂದ ಜೋತು ಬಿದ್ದಿದ್ದವು. ಅವಳು ಲಗುಬಗೆಯಿಂದ ಆನಂದಿಯ ತಲಯ ಮೇಲಿದ್ದ ಹೆಡಿಗೆಯನ್ನು ಇಳಿಸಿದಳು. ಕೈಯಲ್ಲಿದ್ದ ದಾಸವಾಳದ ಹೂವು ಆನಂದಿ ತನ್ನ ಮುಡಿಗೇರಿಸಿಕೊಂಡಳು. ಜಾಯು ತನ್ನ ತವರು ಮನೆಯ, ತವರೂರಿನವರ ಕ್ಷೇಮ ಸಮಾಚಾರ ಕೇಳಿದಳು. ನೆನಪು ಕೆದಕುತ್ತ ಅವಳ ಕಣ್ಣು ಒದ್ದೆಯಾದವು.

"ಮೊದಲ ಕುಂಬಾರ ವಾಡೇಗ ಗಣಪತಿ ಮಾಡಾಕ್ ಶುರು ಮಾಡಿದ ಮ್ಯಾಗ ಬಣ್ಣ ಹಾಕುತನಕ ನಾನೆಷ್ಟು ಸಲ ಹೋಗ್ತಿದ್ದೆ. ಅವ್ವನ ಕೂಡ ಹೊಲಕ್ಕೆ ಹ್ವಾದರ ಅವ್ವ ಸೀತವ್ವನ ಮಾವಶಿ ಹತ್ರ ಹೋಗಿ ಹರಟೆ ಹೊಡೆಯಾಕ ಕೂಡತಿದ್ಲು. ನಾನಾಗ ವಾಸಂತಿ ಕೂಡ ಆಟ ಆಡ್ತಿದ್ದೆ. ಗೋಪಾಳ ಮಾಮ ನಮಗ ದೀಪಾವಳಿ ಹಬ್ಬಕ್ಕ ಗೊಂಬಿ ಮಾಡಿಕೊಡ್ತಿದ್ದ."

ಅತ್ತೆ ಕೆಮ್ಮಿದಳು. ನಿದ್ದೆಯಿಂದ ಎಚ್ಚರವಾದವಳಂತೆ ಅವಳು ಥಟ್ಟನೆ ಎದ್ದು ಒಳಗೆ ಹೋಗಿ ಚಹ ಮಾಡಿಕೊಂಡು ಬಂದು ಆನಂದಿಯ ಮುಂದೆ ತಂದಿಟ್ಟಳು. "ಒಲಿಮ್ಯಾಗ ಬಿಸಿ ನೀರಿತ್ತು. ಒಂದೀಟ ಚಾ ಸೊಪ್ಪು ಸಕ್ಕರಿ ಹಾಕಿಕೊಂಡು ಬಂದೇನಿ. ನಿನಗೆ ಗೊತ್ತೈತೇನು ಆನಂದಿ ಮಾವಶಿ. ಈವತ್ತ ನಮ್ಮ ಮಾವನವರ ಶ್ರಾದ್ಧ. ಭಟ್ಟರು ಬರಬೇಕಿನ್ನು. ನಮ್ಮ ಮನಿಯವರು ಧೂಪ, ಊದಬತ್ತಿ ತರಾಕ ಅಂಗಡಿಗೆ ಹೋಗ್ಯಾರ. ನೀನೀಗ ಒಂದ್ ಕೆಲ್ಸ ಮಾಡು... ನೀ ಊರು ಅಡ್ಡಾಡಿ ಬಾ. ಊಟ ಇಲ್ಲೇ ಮಾಡೀಯಂತೆ. ಹೇಳಿ ಕಳಿಸಿದ್ಹಾಂಗ ತವರೂರಿಂದ ಬಂದಿ... ಊಟ ಮಾಡೇ ಹೋಗು."

ಆನಂದಿ ಆಗಲಿ ಎಂದು ಹೇಳಿ ತಲೆಯ ಮೇಲೆ ಹೆಡಿಗೆ ಇಟ್ಟುಕೊಂಡಳು. ಅವಳು ಹೋಗುವಾಗ ತೆಂಗಿನ ಮರದ ಕಟ್ಟೆಯ ಮೇಲಿಟ್ಟ ಪ್ಲ್ಯಾಸ್ಟಿಕ್ಕಿನ ಕೊಡ ಮತ್ತು ತಂಬಿಗೆಯನ್ನು ನೋಡಿ ಮನಸ್ಸಿನಲ್ಲಿಯೇ 'ಈ ಅಡವಿಯ ಊರಿಗೂ ಈ ಅರಿಷ್ಟ ಬಂದು ಮುಟ್ಟಿದ' ಎಂದು ಗೊಣಗಿದಳು.

ಜಾಯೂನ ಗಂಡನ ಇಬ್ಬರು ಸಹೋದರರಲ್ಲಿ ಒಬ್ಬನು ಗೋವೆಯಲ್ಲಿ ಮಾಸ್ತರ ಮತ್ತೊಬ್ಬ ಭಟ್ಕಳದಲ್ಲಿ ಪೊಲೀಸನಾಗಿದ್ದ. ಜಾಯೂನ ಗಂಡ ಮಾತ್ರ ಊರಲ್ಲಿ ಹೊಲಗದ್ದೆ ಮಾಡಿಕೊಂಡಿದ್ದ. ಜಾಯೂನ ಮನೆ ಹೊಕ್ಕರೆ ಒಂದು ಬಗೆಯ ಸಂತೃಪ್ತಿ ಎದ್ದು ಕಾಣುತ್ತದೆ. ಅದು ಅಲ್ಲಿಯ ಜನರಲ್ಲಷ್ಟೇ ಅಲ್ಲ ಅಲ್ಲಿನ ಗಿಡಮರ ಬಳ್ಳಿಗಳಲ್ಲಿ ಕಾಣಬಹುದು.

ಆನಂದಿ ಸುಮಾರು ಎರಡು ಗಂಟೆ ಗಡಿಗೆಯ ಮಾರಾಟಕ್ಕೆ ಜೀದಿ ಜೀದಿಯಲ್ಲಿ ಅಲೆದಳು. ಹಾಗೆ ನೋಡಿದರೆ ಆನಂದಿ ಗಡಿಗೆಯ ಮಾರಾಟದಲ್ಲಿ ನುರಿತವಳಾಗಿದ್ದಳು. ಹೆಡಿಗೆಯಿಂದ ಗಡಿಗೆ ಎತ್ತಿ ಮೇಲೆ ಹಿಡಿದು ತೋರಿಸುತ್ತ ಬೆರಳಿನಿಂದ ಗಡಿಗೆಯನ್ನು ಬಡಿದು ಖಣ್ ಖಣ್ ಸದ್ದಾಗುವಂತೆ ಮಾಡಿ "ಇದು ಮಣ್ಣಿನ ಗಡಗಿ ಅಲ್ಲವ್ವ... ತಾಮ್ರದ ಪಾತ್ರೆ... ನಮ್ಮೂರಿನ ಮಣ್ಣ ಅಂಥಾದ್ದು. ಬಡಿದ್ಹಾಂಗ ಮಣ್ಣು ತಾಮ್ರ ಆಗತದ. ಅದರಾಗೂ ನಮ್ಮ ಮಂದಿ ಮಣ್ಣ ಕಲಸೂದು, ಬಡಿಯೂದು ಭ್ಯಾಳ ಜಬರದಸ್ತ ಇರತೈತಿ. ಗಡಿಗ್ಯಾಗ ಮಾಡಿದ ಅಡಿಗೆಯ ರುಚೀನ ಬ್ಯಾರೆ. ಮೈಗೂ ಒಳ್ಳೇದು."

ಆದರೆ ಜನರಲ್ಲಿ ಈಗ ಗಡಿಗೆಯ ಬಗ್ಗೆ ಆತ್ಮೀಯತೆ ಇರಲಿಲ್ಲ. ಪ್ಲ್ಯಾಸ್ಟಿಕಿನ, ಸ್ಟೀಲಿನ ಪಾತ್ರೆಗಳು ಚಕಚಕ ಹೊಳೆಯುತ್ತಿದ್ದರು. ಇಂದಿನ ದಿನಗಳಲ್ಲಿ ಗಡಿಗೆಯಲ್ಲಿ ಅಡಿಗೆ ಮಾಡುವುದೂ ಒಂದು ಬಗೆಯ ಕೆಳಗಿನ ದರ್ಜೆಯದು ಎಂದು ಭಾವಿಸುತ್ತಿದ್ದರು. ಗಡಿಗೆಗಳು ಅಟ್ಟಕ್ಕೇರಿದ್ದವು. ಯುವಕರು ಸುಮ್ಮನೆ ಹೆಣ್ಣು ಮಕ್ಕಳ ಗೇಲಿ ಮಾಡುತ್ತ 'ಗಲ್ಲಕ್ಕ ಮಸಿ ಹತ್ತ್ಯಾದಲ್ಲ... ಗಡಗಿ ತಿಕ್ಕಾಕ ಹೋಗಿದ್ದೇನು?" ಎನ್ನುತ್ತಿದ್ದರು.

ಆದರೂ ಅವಳು ಅರ್ಧಕ್ಕಿಂತ ಹೆಚ್ಚು ಹೆಡಿಗೆಯಲ್ಲಿದ್ದ ಗಡಿಗೆಯ ವ್ಯಾಪಾರ ಮಾಡಿದ್ದಳು. ಬಿತ್ತುವ ಮೊದಲು 'ಸ್ಥಳ' ಹರಕೆಗೆಂದು ಕಳಸಾವಾಡೆಯಲ್ಲಿ ನಾಲ್ಕು ಮನೆಯವರು ಒಂದೊಂದು ಅಗಲ ಬಾಯಿಯ ಗಡಿಗೆ ತೆಗೆದುಕೊಂಡರು. ಹನ್ನೆರಡು ರೂಪಾಯಿಗೊಂದರಂತೆ.

ಅವಳು ಜಯೂನ ಮನೆಗೆ ಬರುವುದರಲ್ಲಿ ಅರ್ಧ ಹೆಡಿಗೆ ಖಾಲಿಯಾಗಿತ್ತು ನಿಜ. ಇನ್ನೂ ಎಷ್ಟೋ ಗಡಿಗೆಗಳು ಇದ್ದವು. ಅದರಲ್ಲಿ ಕೊಡಗಳು, ಅಡಿಗೆ ಮಾಡುವ ಬೇರೆ ಬೇರೆ

ಬಗೆಯ ಗಡಿಗೆಗಳಿದ್ದವು. ಭಟ್ಟರು ಬಂದು ಶಾಸ್ತ್ರ ಮುಗಿಸಿ ಹೋಗಿದ್ದರು. ಶ್ರಾದ್ಧದ 'ಅತಿಥಿ'ಯೂ ಊಟ ಮುಗಿಸಿ ಹೋಗಿದ್ದ. ಜಾಯು ಅವನನ್ನು ಒಳಕೋಣೆಯಲ್ಲಿ ಕೂಡಿಸಿ ಶ್ರಾದ್ಧದ ಊಟ ಹಾಕಿದ್ದಳು. ಅವಳು ಒಳಗೆ ಹೊರಗೆ ಓಡಾಡುತ್ತಲೆ ಬಂದು ಅವನಿಗೆ ಬಂದು ಬಡಿಸಿ ಹೋಗುತ್ತಿದ್ದಳು. ಅಲ್ಲದೆ ಅವರ ಕೇರಿಯ ಜನರೂ ಊಟಕ್ಕೆ ಬಂದಿದ್ದರು.

ಆನಂದಿ ಊಟ ಮಾಡಿ ತಕ್ಷಣ ಹೊರಟು ಬಿಟ್ಟಳು. ಹಣಕೋಣದಲ್ಲಿ ದೇವಕಿ ತನಗಾಗಿ ಕಾಯುತ್ತಿರಬಹುದೆಂದು. ಜಾಯು ಆನಂದಿಯ ತಲೆಯ ಮೇಲೆ ಹೆಡಿಗೆ ಎತ್ತಿಡುತ್ತಿರುವಾಗ ಆನಂದಿಗೆ ಏನನಿಸಿತೊ ಏನೊ ಅವಳು ಕೈ ಮುಂದೆ ಮಾಡಿ ಅವಳ ಕೆನ್ನೆಯನ್ನು ಸವರಿ "ನಿನ್ನವ್ವನ ಹಂಗ ಒಳ್ಳೆ ಗುಣದಾಕಿ ನೀನು... ಅವ್ವಗ ಏನ್ ಹೇಳ್‌ಬೇಕು ಹೇಳು."

"ಎಲ್ಲಾರೂ ಆರಾಮದಾರಂತ ಹೇಳರಿ. ರಜಾ ಸುರುವಾದ ಮ್ಯಾಗ ಎಂಟು ದಿನಕ್ಕೆ ಬಾಳೂಗ ಕಳಿಸಿಕೊಡು ಅಂತ ಹೇಳಿರಿ. ಮಾವಿನ ಹಣ್ಣು- ಹಲಸಿನ ಹಣ್ಣಿನ ದಿವಸ ಬರ್ತಾವಲ್ಲ ಇನ್ನು ಮುಂದ."

ಆಗ ಆನಂದಿ ಹೆಡಿಗೆಯಿಂದ ಬದಿಗೆ ತೆಗೆದಿಟ್ಟ ಒಂದು ಗಡಿಗೆಯ ಕಡೆಗೆ ಅವಳ ಗಮನ ಹೋಯಿತು.

"ಇದ್ಯಾಕ ತೆಗೆದಿಟ್ಟೇರಿ?"

"ನಿನಗಂತ ತೆಗೆದಿಟ್ಟೇನಿ"

"ಬ್ಯಾಡಾ. ಬ್ಯಾಡಾ... ಒಯ್ದ ಬಿಡ್ರಿ ನೀವು"

ಅವಳ ಗಂಡನೂ ಅಂದ "ಗಡಿಗೆ ಮಸಿ ಯಾರು ತಿಕ್ಕೋತಾ ಕೂಡತಾರ. ಮನ್ಯಾಗ ಅಡಚಣೀನ ಅದು. ಯಾರು ಬಂದ್ರೂ... ಏನವ್ವ ವಯನಿ ಇದೇನು ನಿಂದು?" ಅಂತಾರ. ಜಾಯು ಆ ಮಡಕೆಯನ್ನೆತ್ತಿ ಆನಂದಿಯ ಕೈಯಲ್ಲಿ ಕೊಟ್ಟಳು. "ನೀವ ಒಯ್ದುಬಿಡ್ರಿ... ದಾರ್‍ಯಾಗ ಯಾರಾದ್ರೂ ಕೊಂಡ್ಕೋತಾರ."

ಆನಂದಿ ನಡೆಯತೊಡಗಿದಳು. ಅವಳಿಗೆ ಕೆಡುಕೆನಿಸಿತು. ಮೊದಲು ಜಾಯುಗೆ ಗಡಿಗೆ ಕೊಟ್ಟರೆ ತುಂಬ ಖುಷಿಯಿಂದ ತೆಗೆದುಕೊಂಡು ಒಳಗೆ ಹೋಗಿ ಒಂದೆರಡು ತೆಂಗಿನ ಕಾಯಿ ತಂದು ಹೆಡಿಗೆಯಲ್ಲಿಡುತ್ತಿದ್ದಳು. ತೆಂಗಿನಕಾಯಿ ಸುಲಿಯದಿದ್ದರೆ ಗಡಿಬಿಡಿಯಿಂದ ಸುಲಿದುಕೊಡುತ್ತಿದ್ದಳು. ಅವಳು ಕಾಯಿ ಸುಲಿಯುವಾಗ ಕೈ ಮೇಲೆ ಹಾಕಿಕೊಂಡಾಳು ಎಂದು ಅವಳಿಗೆ ಅಂಜಿಕೆಯಾಗುತ್ತಿತ್ತು. ಅವಳನ್ನು ದೇವರನ್ನು ನೋಡುವ ಹಾಗೆ ನೋಡುತ್ತ ನಿಲ್ಲುತ್ತಿದ್ದಳು.

ಅವಳು ಮನೆಯ ದಾರಿ ಹಿಡಿದಾಗ ಇಪ್ಪತ್ತೆರಡರಲ್ಲಿ ಆರು ಗಡಿಗೆಗಳು ಮಾತ್ರ ಉಳಿದಿದ್ದವು. ರಸ್ತೆಯಲ್ಲಿ ದಾರಿಯಲ್ಲಿ ಯಾರೊ ಒಬ್ಬ ಹೇಳುತ್ತಿದ್ದ "ಕದ್ರಾದಿಂದ ನಾಲ್ಕು ಗಂಟೆಯ ಬಸ್ಸು ಬರುವ ಹೊತ್ತಾಯಿತು. ಬಸ್ಸಿನಲ್ಲಿ ಹೋಗು"

ಛೆ... ಕುಂಬಾರರ ಹೆಣ್ಣು ಮಕ್ಕಳು ಗಡಿಗೆಯ ಹೆಡಿಗೆ ತೆಗೆದುಕೊಂಡು ಬಸ್ಸಿನಲ್ಲಿ ಹೋಗಿದ್ದುಂಟೆ? ಅವಳು ಸರಸರ ಹೆಜ್ಜೆ ಎತ್ತಿ ಹಾಕಿದಳು. ಈ ಅಡ್ಡ ಹೊತ್ತಿನಲ್ಲಿ ದಾರಿಯಲ್ಲಿ ಒಂದು ನಾಯಿಯೂ ಇರಲಿಲ್ಲ. ಮಧ್ಯೆ ಮಧ್ಯೆ ಒಂದೊಂದು ಮೋಟಾರು ಅವಳ ಬದಿಯಿಂದಲೇ ಹಾಯ್ದು ಹೋಗುತ್ತಿತ್ತು. ಅನಂತರ ಮತ್ತೆ ನಿಶ್ಶಬ್ದ ವಾತಾವರಣ. ತನ್ನ

ತಲೆಯ ಮೇಲೆ ಗಡಿಗೆಗಳು ಇವೆ. ತನಗೆ ಯಾವ ಅಂಜಿಕೆಯೂ ಇಲ್ಲ ಎಂದು ಆನಂದಿಗೆ ಅನಿಸುತಿತ್ತು. ಕಾರಣ ಇಂಥ ಗಡಿಗೆಗಳಲ್ಲಿಯೇ ದೇವರು ದೆವ್ವಗಳಿಗೆ ಅನ್ನ ಬೇಯಿಸುತ್ತಾರೆ. ಸತ್ತಾಗಲೂ ಅದರಲ್ಲಿ ಕಹಿ ಬೇಯಿಸುತ್ತಾರೆ. ಆದ್ದರಿಂದ ಯಾವ ಅಂಜಿಕೆಯೂ ಇಲ್ಲ.

ಹೊತ್ತು ಇಳಿಯುತಿತ್ತು. ದೀಪ ಆರುವಾಗ ಒಮ್ಮೆ ಚಡಪಡಿಸುವಂತೆ ಹೊತ್ತು ಇಳಿಯುವ ಸಂದರ್ಭ ತನ್ನ ಉಷ್ಣತೆ ಏರಿ ಹೋಗುತ್ತದೆ. ಈ ಉಷ್ಣತೆ ಬಿಸಿಲಿನಿಂದ ಕಾದಿರುವ ಮೈ ಬೆವರು ಬಟ್ಟೆಗಳಿಗಂಟಿಕೊಂಡು ಉಟ್ಟ ಬಟ್ಟೆಯೊಳಗೆ ಸೇರಿ ಮನಸ್ಸಿನ ಕಿರಿಕಿರಿ ಹೆಚ್ಚಿಸುತ್ತಿತ್ತು. ನಾಲ್ಕೂ ಕಡೆ ಗುಡ್ಡದ ಮೇಲೆ ತಿಳಿಬಿಳಿ ಬಣ್ಣದ ಹೊಗೆ ಹರಡಿತ್ತು. ಆ ಬಿಸಿ ಹೊಗೆ ದಾರಿಯ ಇಕ್ಕೆಡೆಯಲ್ಲಿದ್ದ ಗಿಡಗಳಲ್ಲೂ ಸೇರಿಕೊಂಡಿತ್ತು. ಅದರಿಂದ ಅವಳು ಬಿಸಿಲಿನಿಂದ ಸಾರಿಸಿದಂತೆ ಕಾಣುತ್ತಿದ್ದಳು. ಸುಮ್ಮನೆ ಪರಕೀಯಳಾಗಿ ದೂರ–ಆಳಕ್ಕಿಳಿದಂತೆ ಕಾಣುತ್ತಿದ್ದಳು. ಗಿಡಗಳ ರೆಂಬೆಗಳು ಕೈ ಮುಂದೆ ಚಾಚಿದಂತೆ ನಿಂತಿದ್ದವು.

ಒಂದು ಬಗೆಯ ಒಬ್ಬಂಟಿತನ. ಯಾವ ಗಿಡಗಳ ಗುಂಪಿನಲ್ಲಿ ಏನು ಅವಿತು ಕೊಂಡಿದೆಯೊ ದೇವರೇ ಬಲ್ಲ. ಆದರೂ ಆನಂದಿ ಅಂಜಲಿಲ್ಲ. ನಡೆಯುವ ವೇಗವನ್ನು ಹೆಚ್ಚಿಸಿಕೊಂಡು ಹಣಕೋಣ ತಲುಪಿದಾಗ ದೇವಕಿ ಅವಳ ದಾರಿ ಕಾಯುತ್ತ ನಿಂತಿದ್ದಳು. ಅವಳಲ್ಲಿಯೂ ವಿಕ್ರಯವಾಗದ ಏಳು ಗಡಿಗೆಗಳು ಇದ್ದವು.

ಅವರಿಬ್ಬರೂ ತಮ್ಮ ಕುಂಬಾರವಾಡೆ ತಲುಪಿದಾಗ ದೀಪ ಹಚ್ಚುವ ಹೊತ್ತಾಗಿ ಹೋಗಿತ್ತು. ಒಬ್ಬರ ಗುರುತು ಇನ್ನೊಬ್ಬರಿಗೆ ಹತ್ತದಷ್ಟು ಕತ್ತಲೆಯಾವರಿಸಿತ್ತು.

ಹೆಡಿಗೆಯಲ್ಲಿರುವ ಮಡಕೆಗಳನ್ನು ನೋಡಿ ಆನಂದಿಯ ಅತ್ತೆ "ಮಡಕೆ ಮಾರದೆ ಹಂಗ ತಂದಿಯೇನು. ನೀಯೇನ ಗಡಗಿ ಮಾರಾಕ ಹೋಗಿದ್ಯೊ ಊರ ತಿರಗಾಕ ಹೋಗಿದ್ಯೊ? ನಾವು ಹೊರ್‍ರೆ ಹೊರೆ ಗಡಗಿ ಮಾರಲಿಲ್ಲೇನು?" ಎಂದಳು.

ಆನಂದಿಗೆ ಸಿಟ್ಟು ಬಂತು. ಅವಳು ತಕ್ಷಣ ಅತ್ತೆಯ ಮೇಲೆ ಕಿರುಚಾಡಿದಳು. "ನಿಮ್ಮ ಪುರಾಣದ ಬದನಿಕಾಯಿ ನನಗೆ ಹೇಳಬ್ಯಾಡ್ರಿ. ಈಗ ನಿಮ್ಮ ಮಣ್ಣಿನ ಪಾತ್ರ ಯಾರಿಗೆ ಬೇಕಾಗ್ಯದ? ಇನ್ನ ಮ್ಯಾಲ ಗಡಗಿ ಮಾರಾಕ ಸ್ಮಶಾನಕ್ಕ ಹೋಗಿ ಕೂಡ್ರ ಬೇಕಾತದ... ಕಹಿ ಬೇಯಿಸಾಕ. ನಿಮ್ಮ ಆವಿಗೆ ಇನ್ನ ಮುಂದ ಬಂದ್ ಬೀಳ್ತಾವ.'

ಈ ಮಾತು ಕೇಳಿದ ಅತ್ತೆ ಕೆರಳಿ ಕೆಂಡವಾದಳು. "ನಿನ್ನ ಬಾಯಾಗ ಮಣ್ಣ ಬೀಳಲಿ... ಆವಿಗೆ ಬಂದ್ ಬೀಳ್ತಾವ ಅಂತ ಹೇಳತೀಯೇನು... ನಿನ್ನ ನಾಲಿಗೆ ಕಬ್ಬಿಣ ಕಾಸಿ ಸುಡಬೇಕು."

ಅವಳ ಗಂಡ ಕಿಡಿಕಿಡಿಯಾಗಿ ಹೇಳಿದ "ನಿನ್ನ ಮಾರಿಮ್ಯಾಗ ಕೊಟ್ರ... ಮುಸ್ಸಂಜೆ ಹೊತ್ತಿನಾಗ ನಮ್ಮ ಹೊಟ್ಟಿ ಬಂದ್ ಬೀಳಲಿ ಅಂತ ಹೇಳ್ತಿಯೇನು?"

ಅವಳು ಗೋಣಿಯ ಸಿಂಬಿ ಹಿಡಿದುಕೊಂಡು ಕೋಣೆಯ ಬಾಗಿಲಲ್ಲಿ ಕುಳಿತಿದ್ದಳು. ಅವಳ ಮಗು ತಾಯಿಯ ಮೈಮೇಲೆ ಉರುಳಾಡುತಿತ್ತು.

* * *

**ಬೇ**ಸಿಗೆ ಕಾಲ ಬಂದಿತ್ತು. ನಾಲ್ಕು ಕಡೆ ವಾತಾವರಣ ಬಿಸಿಯಾಗಿತ್ತು. ಆದರೆ ಕೇರಿಯಲ್ಲಿನ ಮಾವಿನ ಮರಕ್ಕಿನ್ನೂ ಬಿಸಿಲಿನ ಝಳ ತಾಗಿರಲಿಲ್ಲ. ಕೇರಿ ಬಿಸಿಲು ಬೇಡುವಂತೆ ಆಗಸದತ್ತ ನೋಡುತ್ತಿತ್ತು. ಒಮ್ಮೊಮ್ಮೆ ಮಾವಿನ ಮರದ ಬಗ್ಗೆ ಸಿಟ್ಟೂ

ಬರುತಿತ್ತು. ಆದರೆ ಅದರ ಕೊಂಬೆ ಕೊಂಬೆಗಳಲ್ಲಿ ಟಿಸಿಲು ಟಿಸಿಲುಗಳಲ್ಲಿ ಮಾವಿನ ಮಿಡಿಗಳ ಗೊಂಚಲು ಜೋಲುವುದನ್ನು ನೋಡಿದಾಗ ಮನಸ್ಸು ಸಂತಸದಿಂದ ಮುಗಿಲಗಲವಾಗುತಿತ್ತು. ಇನ್ನು ಕೆಲವು ದಿನಗಳ ನಂತರ ಒಂದು ಸಮ್ಮೇಳನವೇ ನಡೆಯುವುದುಂಟು. ಊರು ಪರವೂರುಗಳು ಹಕ್ಕಿಗಳು, ಅಳಿಲುಗಳು, ಕಾಗೆಗಳು, ಗೂಗೆ ಗುಬ್ಬಿಗಳೆಲ್ಲ ಇಲ್ಲಿ ಬಂದು ವಸತಿ ಮಾಡುವುದುಂಟು. ಒಂದು ಮಾವಿನ ಹಣ್ಣು ಬಿದ್ದರೂ ಸಾಕು ದೊಡ್ಡ ಗದ್ದಲ ನಡೆಯುವುದುಂಟು. ಹೆಣ್ಣು ಮಕ್ಕಳು ಬುಟ್ಟಿ, ಮಕರಿ, ಗೆರಸೆ, ಟವೆಲು ತೆಗೆದುಕೊಂಡು ರಾತ್ರಿ ಅಪರಾತ್ರಿಯಲ್ಲಿ ಹಣ್ಣು ಆಯಲು ಬರುವುದುಂಟು. ಜನರೆಲ್ಲ ಮಾವಿನ ಹಣ್ಣು ತಿಂದು, ರಸ ಹೀರಿ, ನಾರು ಚೀಪಿ, ಖುಷಿಯಿಂದ ಕುಣಿದಾಡುವುದುಂಟು. ಈ ಗಿಡದ್ದೊಂದು ತಮಾಷೆಯೆಂದರೆ ಹಣ್ಣು ಕೆಡವಬೇಕೆಂದು ಯಾರಾದರೂ ಕಲ್ಲು ಬೀಸಿದರೆ ಅದು ಹಣ್ಣಿಗೆ ಮುಟ್ಟುವುದೇ ಇಲ್ಲ. ಗಿಡದ ಕಾಂಡ ಎರಡು ಮೂರು ಮಾರು ಅಗಲ, ಎತ್ತರ ಸುಮಾರು ಆರು ಆಳು. ಆದ್ದರಿಂದ ಹಣ್ಣು ಬೇಕಾದವರು ಹಣ್ಣು ಬೀಳುವ ವರೆಗೆ ಕಾಯಬೇಕಿತ್ತು. ಕಾರಣ ಯಾರೂ ಮರ ಏರುವ ಸಾಹಸ ಮಾಡುತ್ತಿರಲಿಲ್ಲ.

ಆದರೆ ಗಿಡಕ್ಕೆ ಮಿಡಿ ಓಡಿಯುವಾಗ ಮಾವಿನ ಗಿಡದಡಿಯಲ್ಲಿ ಒಂದು ವಿಪರೀತ ಘಟನೆ ಘಟಿಸಿತು. ಯಶವಂತನ ಹದಿನಾರು ವರ್ಷದ ಹುಡುಗ ಸದಾನಂದ ಮನೆಬಿಟ್ಟು ಓಡಿ ಹೋಗಿದ್ದ. ಆವಿಗೆಯಿಂದ ಆಗಷ್ಟೆ ಇಳಿಸಿದ ಗಡಿಗೆಗಳ ರಾಶಿ ಕೋಲಿನ ಒಂದೇ ಹೊಡೆತಕ್ಕೆ ಪುಡಿಪುಡಿ ಮಾಡಿ ಹೋಗಿದ್ದ.

ತಾಯಿ ಗೋಕುಳ ಮಗನ ಚಿಂತೆಯಿಂದ ಹಾಸಿಗೆ ಹಿಡಿದು ಎಂಟು ದಿನ ಮಲಗಿದ್ದಳು. ಖಾನಾಪುರಕರ ಮಾಸ್ತರರು ಬಂದು ನಾಲ್ಕು ಸಾಂತ್ವನದ ನುಡಿ ಹೇಳಿ ಹೋಗಿದ್ದರು. ಅದೇ ಆಧಾರದಿಂದ ಅವಳಿಂದು ಎದ್ದು ಕೂತಿದ್ದಳು. ಕೈಯಲ್ಲಿ ಸುತ್ತಿಗೆ ಹಿಡಿದು ಮಣ್ಣಿನ ಹೆಂಟೆ ಒಡೆಯುತ್ತ ಕೂತಿದ್ದಳು. ಹೆಂಟೆಯ ಮೇಲೆ ಸುತ್ತಿಗೆ ಬಡಿಯುವಾಗ ಅತ್ತು ಅತ್ತು "ಮ್ಯಾಟ್ರಿಕ್ ಪಾಸಾದ ಎಂಥ ಒಳ್ಳೇ ಮಗಾ.... ಮತ್ತ ಮುಂದೆ ಓದಾಕೆ ಕಾಲೇಜಿಗೆ ಹೋಗ್ತಿನಂತ ಅಂತಿದ್ದ... ಸಾಯ್‌ಕಲ ಬೇಕಂತ ಹೇಳ್ತಿದ್ದ... ನಮಗ ಪುಸ್ತಕಾ ಕೊಡಾಕೂ ಆಗ್ಲಿಲ್ಲ... ಒಂದೊಳ್ಳೆ ಅಂಗಿ ಹೊಲಸಾಕೂ ಆಗ್ಲಿಲ್ಲ.... ನಮ್ಮ ಹಾಳು ಹೊಟ್ಟಿ ತುಂಬಾಕು ಆಗ್ತಿರಲಿಲ್ಲ.... ಅಂವಗ ಈ ದಿನದಾಗ ಭ್ಹಾಳ ಸಿಟ್ಟು ಬರ್‍ತ್ತಿತ್ತು."

ಅವಳ ಮಗ ಸದಾನಂದ ಬೆಳ್ಳ ಬೆಳ್ಳಗಿದ್ದ. ಯಾವಾಗಲೂ ಶುದ್ಧವಾಗಿರುತ್ತಿದ್ದ. ಶಾಲೆಯಿಂದ ಬಂದ ಕೂಡಲೆ ಬಿಂದಿಗೆ ತೆಗೆದುಕೊಂಡು ಬಾವಿಗೆ ಹೋಗಿ ಸ್ನಾನ ಮಾಡುತ್ತಿದ್ದ. ಮಣ್ಣಿಗೆ ಕೈ ಹಾಕಿದರೆ ತಕ್ಷಣ ತೊಳೆದುಕೊಂಡು ಬಿಡುತ್ತಿದ್ದ. ಹದಿಮೂರು ವರ್ಷದವನಿರುವಾಗಲೇ ಅವನು ತಿಗರಿಯ ಮೇಲೆ ಗಡಿಗೆ ರಚಿಸಲು ಕಲಿತಿದ್ದ. ಕಳೆದ ಗಣೇಶ ಚತುರ್ಥಿಗೆ ನಾಲ್ಕು ಸುಂದರ ಗಣಪತಿ ಮೂರ್ತಿಗಳನ್ನೂ ತಯಾರಿಸಿದ್ದ. ಅವನಿಗೆ ಮೂರ್ತಿ ಮಾಡು ಅಂತ ಯಾರೂ ಹೇಳಿರಲಿಲ್ಲ. ಅವನಾಗಿಯೇ ತಯಾರಿಸಿದ್ದ. ತಂದೆ ಮತ್ತು ಮಗ ಇಬ್ಬರೂ ಅವನ್ನು ತಲೆಯ ಮೇಲಿಟ್ಟುಕೊಂಡು ಹೋಗಿ ಮಾಜಾಳಿಯ ಸೊಯರು ಮೆಸ್ತನ ಅಂಗಡಿಯಲ್ಲಿ ಮಾರಾಟಕ್ಕಿಟ್ಟಿದ್ದರು. ಅವುಗಳಲ್ಲಿ ಎರಡು ಖರ್ಚಾಗಿ ಮಿಕ್ಕಿದ್ದು ಹಾಗೇ ಉಳಿದಿತ್ತು. ದೃಷ್ಟಿಯಿಟ್ಟ ಗಣಪತಿಯನ್ನಿಟ್ಟು ಕೊಳ್ಳುವುದು ಸರಿಯಲ್ಲ

ಅಂತ ಮೆಸ್ತ ಹೇಳಿದ. ಭ್ರಷ್ಟತೆಯಾಗದಂತೆ ಮಡಿಮೈಲಿಗೆ ಕಾಯ್ದು ಕೊಂಡಿರ ಬೇಕಾಗುತ್ತದೆ. ಆದ್ದರಿಂದ ಇಲ್ಲಿಡಬೇಡ. ಒಯ್ದುಬಿಡು ಎಂದು ಮೆಸ್ತ ಹೇಳಿದ್ದ. ಅದರಿಂದ ಅವನ ಅಪ್ಪ ಆ ಒಂದು ಮೂರ್ತಿಯನ್ನು ಹೊರಗಿಂದ ಹೊರಗೆ ಒಯ್ದು ಕೆರೆಯಲ್ಲಿ ಮುಳುಗಿಸಿ ಬಂದಿದ್ದ. ಇನ್ನೊಂದು ಮೂರ್ತಿಯನ್ನು ಕಾಗದದಲ್ಲಿ ಸುತ್ತಿ ಸಾರ್ವಜನಿಕ ಬೇಣದಲ್ಲಿ ತಂದಿಟ್ಟಿದ್ದ. ಕುಂಬಾರಕೇರಿಯ ಮೇಲ್ಗಡೆ ಒಂದು ಸಾರ್ವಜನಿಕ ಬೇಣ ಇತ್ತು. ಹಗಲು ಹೊತ್ತಿನಲ್ಲಿ ಕೆಲವು ಕುಂಬಾರರು ಆ ಬಯಲಿನಲ್ಲಿ ಕುಳಿತು ಗಡಿಗೆ ಮಾಡುತ್ತಿದ್ದರು. ಅಲ್ಲಿ ಕೆಲವರು ಮಡಿಕೆಯ ಚೂರು, ಮಣ್ಣಿನ ಹೆಂಟೆಗಳನ್ನೂ ತುಂಬಿಟ್ಟಿದ್ದರು. ಅಲ್ಲಿ ಒಂದು ಮೂಲೆಯಲ್ಲಿ ಯಶವಂತನು ಗಣಪತಿಯ ಮೂರ್ತಿಯನ್ನು ಒಯ್ದಿಟ್ಟಿದ್ದ. ಮಾಘ ಮಾಸದ ಚವತಿಗೆ ಕೆಲವರು ಗಣಪತಿಯ ಪೂಜೆ ಮಾಡುತ್ತಾರೆ. ಆಗ ಯಾರಿಗಾದರೂ ಕೊಡಬಹುದು ಎಂದು ಗಣಪತಿಯ ಮೂರ್ತಿಯನ್ನು ಕಾಗದದಲ್ಲಿ ಸುತ್ತಿ ಒಂದು ಮೂಲೆಯಲ್ಲಿ ತಂದಿಟ್ಟಿದ್ದ.

ಆದರೆ ಅಲ್ಲಿ ಆಟ ಆಡುವ ಹುಡುಗರು ಗಣಪತಿಯನ್ನು ಸುತ್ತಿದ್ದ ಕಾಗದವನ್ನು ಹರಿದು ಅದರ ಕೈಕಾಲು, ಸೊಂಡಿಲು ಎಲ್ಲರಿಗೂ ಕಾಣುವಂತೆ ತೆರೆದಿಟ್ಟರು. ಯಾರೂ ಇಲ್ಲದ್ದನ್ನು ನೋಡಿ ನಾಯಿಗಳ ಹಿಂಡು ಬಂದು ಕೂಡತೊಡಗಿತು.

ತನ್ನ ತಂದೆ ತಾನು ಮಾಡಿದ ಗಣಪತಿಯ ಮೂರ್ತಿಯನ್ನು ಕೆರೆಗೆ ಒಯ್ದು ಮುಳುಗಿಸಿದಾಗಲೇ ಸದಾನಂದನಿಗೆ ಬೇಸರವಾಗಿತ್ತು. ಕೊಂಚ ಕುರುಕುರು ಮಾಡಿದ್ದ. ಈಗಂತೂ ಆ ಮೂರ್ತಿಗಾದ ಅವಸ್ಥೆ ನೋಡಿ ಅವನಿಂದ ಸಹಿಸಲಾಧ್ಯವಾಗಿತ್ತು. ಆ ಮೂರ್ತಿಯ ದುರ್ದೆಶೆ ನೋಡಲಾಗದೆ ಆ ಮೂರ್ತಿಯನ್ನು ಒಯ್ದು ರೈತನೊಬ್ಬನ ಬಾವಿಯಲ್ಲಿ ಮುಳುಗಿಸಿ ಬಂದ. ತಂದೆ ಕೇಳಿದಾಗ "ನಾಯಿ ಉಚ್ಚೆ ಹೊಯ್ದ ಮೂರ್ತಿಯನ್ನು ಪೂಜೆ ಮಾಡಾಕ ಕೊಡ್ತಿಯೇನು?" ಅವನ ಈ ಮಾತುಗಳಲ್ಲಿ ಸಿಟ್ಟು ಮತ್ತು ಅಸಹನೆ ಅಡಗಿತ್ತು.

ಕುಂಬಾರವಾಡೆಯಲ್ಲಿ ಮೊಟ್ಟ ಮೊದಲ ಮ್ಯಾಟ್ರಿಕ್ ಪಾಸಾದ ಹುಡುಗ ಅವನು. ಕುಂಬಾರರ ಬಡತನ ಅವರ ಅಜ್ಞಾನ, ಅಶಿಸ್ತನ್ನು ಒದ್ದು ಅವನು ಮ್ಯಾಟ್ರಿಕ್‌ವರೆಗೆ ಬಂದು ಮುಟ್ಟಿದ್ದ. ತುಂಬ ಕಷ್ಟದಿಂದ ಮಳೆಯ ನೀರು ಹೊಯ್ಯುತ್ತಿದ್ದರೂ ಕೊಡೆಯಿಲ್ಲದೆ, ಪುಸ್ತಕಗಳನ್ನು ಹೊಟ್ಟೆಯ ಬಳಿ ಅಂಟಿಸಿಕೊಂಡು ಶಾಲೆಗೆ ಓಡಿ ಹೋಗಿ ಬರುತ್ತಿದ್ದ.

ಏಳನೆಯ ಇಯತ್ತೆಯವರೆಗೆ ಅವನು ಊರಿನ ಒಂದು ಶಾಲೆಯಲ್ಲಿ ಕಲಿತಿದ್ದ. ಎಂಟನೆಯ ಇಯತ್ತೆಗೆ ಸೇರಲು ಹೋದಾಗ ಅಲ್ಲಿ ಆಕಸ್ಮಿಕ ರೈತರ ಮಕ್ಕಳು ಇವನ ಸುತ್ತ ಜಮಾಯಿಸಿದರು. ಆ ಗುಂಪಿನಲ್ಲಿ ಹಿಂದೆ ಅವನೊಂದಿಗೆ ಕಲಿಯುತ್ತಿದ್ದ ಇಬ್ಬರು ಮೂವರೂ ಇದ್ದರು. ಅವರು ಸದಾನಂದನ ಸುತ್ತ ಸುತ್ತುವರಿದು 'ಕುಂಬಾರನ ಮಣ್ಣಿನಲ್ಲಿ ಹರಳುಗಳು, ಗಡಿಗೆಯ ವ್ಯಾಪಾರ ಉರುಳು ಉರುಳು' ಎಂದು ಹಾಡತೊಡಗಿದರು.

ಅವರಿಂದ ತಪ್ಪಿಸಿಕೊಂಡು ಶಾಲೆಯ ಆಫಿಸಿಗೆ ಹೋದರೆ ಅಲ್ಲಿ ಮೊದಲು ಇನ್ನೂರೈವತ್ತು ರೂಪಾಯಿ ತುಂಬಬೇಕೆಂದು ಹೇಳಿದರು. ಬರುವುದಾದರೆ ಮೊದಲ ದಿನದಿಂದಲೇ ಯುನಿಫಾರ್ಮ ಹಾಕಿಕೊಂಡು ಬರಬೇಕೆಂದು ಸೂಚಿಸಿದರು.

ನಿಜ ಹೇಳಬೇಕೆಂದರೆ ಸದಾನಂದನಿಗೆ ಶಾಲೆಯ ಮೇಲಿನ ಪ್ರೀತಿಯೇ ಹೊರಟು ಹೋಗಿತ್ತು. ಕಾರಣ ರೈತರ ಮಕ್ಕಳಿಗೆ ಮೊದಲಿನಿಂದಲೂ ಸೊಕ್ಕು. ಅವರು ಇವನನ್ನು ನೋಡಿದ ಕೂಡಲೆ 'ಖುಂಬಾರ ಖುಂಬಾರ್' ಎಂದು ಗೇಲಿ ಮಾಡುತ್ತಿದ್ದರು. ತಂದೆ ಇನ್ನೊಂದು ರೀತಿ, ಅವನು ಆರಂಭದಿಂದಲೂ ಶಾಲೆ ಬೇಡವೆನ್ನುತ್ತಿದ್ದನು. ಆಗ ಅವನಿಗೆ ಖಾನಾಪುರಕರ ಮಾಸ್ತರರ ನೆನಪಾಯಿತು. ಅವರು ಮೂಲತಃ ಬೆಳಗಾಂವಿಯವರು. ಸದಾಶಿವಗಡದ ಒಂದು ಹೈಸ್ಕೂಲಿನಲ್ಲಿ ಕಲಾ ಶಿಕ್ಷಕನಾಗಿ ಕೆಲಸ ಮಾಡುತ್ತಿದ್ದರು. ಅವರು ಕುಂಬಾರ ಜಾತಿಯವರೇ, ಕಣಸಗಿರಿಯ ಒಬ್ಬ ಕುಂಬಾರ ಹೆಣ್ಣು ಮಗಳೊಂದಿಗೆ ಮದುವೆಯಾಗಿದ್ದರು. ಸದಾಶಿವಗಡದ ಮಾಮ್ಹಾಯ ದೇವಿಯ ಜಾತ್ರೆಯಲ್ಲಿ ಇತ್ತೀಚೆಗೆ ಒಮ್ಮೆ ಭೇಟಿಯಾಗಿದ್ದರು. ತಾನು ಏಳನೆಯ ಇಯತ್ತೆಯ ಪರೀಕ್ಷೆಗೆ ಕುಳಿತುಕೊಂಡಿ ದ್ದೇನೆಂದು ಅವರಿಗೆ ತಿಳಿಸಿದಾಗ 'ಮುಂದಿನ ಓದಿಗೆ ನಮ್ಮ ಶಾಲೆಗೇ ಬಾ. ಏನಾದರೂ ತೊಂದರೆಯಾದರೆ ನಾನಿದ್ದೇನೆ. ಓದುವುದನ್ನು ಬಿಡಬೇಡ' ಎಂದು ಅವರು ಹೇಳಿದ್ದರು.

ಸದಾನಂದ ಸದಾಶಿವಗಡದ ಶಾಲೆಗೇ ಹೋದ. ಖಾನಾಪುರಕರ ಮಾಸ್ತರರು ಯಾರಿಂದಲೊ ಹಳೆಯ ಪುಸ್ತಕಗಳನ್ನು ಕೊಡಿಸಿದರು. ಶಾಲೆಗೆ ತುಂಬುವ ಫೀ ಹಣ ಕಂತಿನಲ್ಲಿ ತುಂಬುವಂತೆ ಮಾಡಿದರು. ಅವರು ಅವನನ್ನು ತುಂಬ ಮುದ್ದಿನಿಂದ ನೋಡಿಕೊಂಡರು.

ಆದರೆ ಈ ಶಾಲೆಯು ಮನೆಯಿಂದ ಐದು ಕಿಲೋಮೀಟರ್ ಮೇಲಿತ್ತು. ಬೆಳಗ್ಗೆ ಮತ್ತು ಸಂಜೆ ಎರಡೂ ಹೊತ್ತು ಶಾಲೆಯಿತ್ತು. ಈ ಮಕ್ಕಳು ಮತ್ತು ಶಿಕ್ಷಕರು ನಿತ್ಯ ಮಧ್ಯಾಹ್ನದ ಊಟಕ್ಕೆ ಮನೆಗೆ ಹೋಗಿ ಬರುತ್ತಿದ್ದರು. ಖಾನಾಪುರಕರ ಮಾಸ್ತರರು ಸೈಕಲಿನಿಂದ ಕಣಸಗಿರಿಗೆ ಹೋಗಿ ಬರುತ್ತಿದ್ದರು. ಆದರೆ ಸದಾನಂದನಿಗೆ ಮನೆಗೆ ಹೋಗಿ ಬರುವುದು ಸಾಧ್ಯವಿರಲಿಲ್ಲ. ಒಂದೆರಡು ದಿನ ಮಾಸ್ತರರು ಅವನನ್ನು ತಮ್ಮ ಸೈಕಲ್ಲಿನ ಮೇಲೆ ಕರೆದೊಯ್ದು ತಂದುಬಿಡುತ್ತಿದ್ದರು. ಒಂದೆರಡು ದಿನಗಳಲ್ಲಿ ಸದಾನಂದನನ್ನು ನೋಡಿ ಅವಿತುಕೊ ತೊಡಗಿದರು. ಮಾಸ್ತರರೂ ಅಷ್ಟೆ ಅವನಿಗಾಗಿ ಕಾಯುತ್ತಾರೆಂದು ಅನ್ನಿಸುತ್ತಿರಲಿಲ್ಲ. ಎಲ್ಲಾದರೂ ಅಷ್ಟೆ, ಪ್ರೀತಿ ಒಂದೆರಡು ದಿನವಷ್ಟೇ ಇರುತ್ತದೆಯೆಂದು ಅವನಿಗೆ ಗೊತ್ತಿತ್ತು.

ಬೆಳಗ್ಗೆ ಆರೂವರೆಗೆ ಅವನು ಮನೆಯಿಂದ ಹೊರಡುತ್ತಿದ್ದ. ತಾಯಿ ರೊಟ್ಟಿ, ಚಪಾ ಏನಾದರೂ ಮಾಡಿ ಕೊಡುತ್ತಿದ್ದಳು. ಅದನ್ನು ಮುರಿದು ಬಟ್ಟೆಯಲ್ಲಿ ಸುತ್ತಿಕೊಂಡು ಪುಸ್ತಕದೊಂದಿಗೆ, ಬ್ಯಾಗಿನಲ್ಲಿ ಇಟ್ಟುಕೊಂಡು ಶಾಲೆಗೆ ಓಡುತ್ತಿದ್ದ. ಓಡಿ ಓಡಿ ಗಾಂವಗೇ ಹಳ್ಳಿಗೆ ಹೋಗುತ್ತಿದ್ದ. ಅಲ್ಲಿದ್ದ ಇಬ್ಬರು ಇವನ ವರ್ಗದಲ್ಲಿಯೇ ಓದುತ್ತಿದ್ದರು. ಅವರೊಡ ನಡೆದು ಅವನು ಶಾಲೆಗೆ ಹೋಗುತ್ತಿದ್ದ. ಅವನು ಶಾಲೆಗೆ ಹೋಗಲು ಹೊರಟ ಕೂಡಲ ಅವನ ತಂದೆ ಒಂದು ಗಡಿಗೆಯ ಬುಟ್ಟಿ ಅವನ ತಲೆಯ ಮೇಲಿಟ್ಟು 'ಮಾಜಾಳಿಯ ಇಂಥವನ ಮನೆಯ ಜಗಲಿಯ ಮೇಲಿಟ್ಟು ಹೋಗು' ಎಂದು ಹೇಳುತ್ತಿದ್ದ. ಅಂ ಸಂದರ್ಭದಲ್ಲಿ ಶಾಲೆಗೆ ವೇಳೆಯಾಗುತ್ತಿತ್ತು. ಭಾರದಿಂದ ದಾರಿ ಸವೆಸುವುದ ಕಷ್ಟವಾಗುತ್ತಿತ್ತು. ಓಡಲು ಪ್ರಯತ್ನಿಸಿದರೆ ಗಡಿಗೆಯ ಖಳ ಖಳ ಸದ್ದಾಗುತ್ತಿತ್ತು.

ಮಧ್ಯಾಹ್ನದ ಸಮಯ ಕೆಟ್ಟದಾಗಿರುತ್ತಿತ್ತು. ಅವನು ಶಾಲೆಯ ವರಾಂಡದಲ್ಲಿ ಕುಳಿ

ಕೊಳ್ಳುತ್ತಿದ್ದ. ಏಳುತ್ತಿದ್ದ. ಅತ್ತಿತ್ತ ಶತಪಥ ಹಾಕುತ್ತಿದ್ದ. ಬೇಸರ ಬಂದರೆ ಪುಸ್ತಕ ತೆರೆದು ನೋಡುತ್ತಿದ್ದ. ಪುಸ್ತಕ ತೆರೆದರೆ ಬೇಜಾರು ಬರುತ್ತಿತ್ತು. ಓದುವ ಮನಸ್ಸಾಗುತ್ತಿರಲಿಲ್ಲ. ಇಷ್ಟು ಹೊತ್ತು ಮಕ್ಕಳಿಂದ ತುಂಬಿದ್ದ ಪಟಾಂಗಣ ಈಗ ಖಾಲಿ ಖಾಲಿಯೆನಿಸುತ್ತಿತ್ತು. ಅಲ್ಲಿನ ಒಬ್ಬಂಟಿತನ ನುಂಗಲು ಬರುತ್ತಿತ್ತು. ಯಾವುದೋ ಕೋಣೆಯಲ್ಲಿ ಶಿಕ್ಷಕರೊಬ್ಬರು ಪಾಠ ಮಾಡುತ್ತಿದ್ದಂತೆ ಭಾಸವಾಗುತಿತ್ತು.

ಶಾಲೆಯ ಮುಂದೆ ಒಂದು ದೊಡ್ಡ ಆಲದ ಮರ ಇತ್ತು. ಅದರ ಅನೇಕ ಬೇರುಗಳು ಇಳಿದು ಭೂಮಿಯನ್ನು ಸ್ಪರ್ಶಿಸುತ್ತಿದ್ದವು. ಆ ಬೇರುಗಳಿಗೆ ಅವನು ಹಿಡಿದುಕೊಂಡು ಜೋಕಾಲಿಯಾಡುತ್ತಿದ್ದ. ಮರದ ಮೇಲೆ ಹತ್ತಿ ಒಂದೆರಡು ಕೊಂಬೆಗಳ ಮೇಲೆ ಸುತ್ತಾಡಿ ಬರುತ್ತಿದ್ದ. ಎರಡು ಬೇರುಗಳನ್ನು ಒಟ್ಟಿಗೆ ಜೋಡಿಸಿ ಅವನು ಜೋಕಾಲಿ ಮಾಡಿಕೊಂಡಿದ್ದ. ಅದರಲ್ಲಿ ಕುಷಿಯಿಂದ ಕುಳಿತು ತೂಗುತ್ತಿದ್ದ. ಒಬ್ಬನೇ ಹಾಡು ಹೇಳುತ್ತಿದ್ದ. ಕೈಯಿಂದ ಚಪ್ಪಾಳೆ ತಟ್ಟುತ್ತಿದ್ದ. ಹಕ್ಕಿಗಳ ಹಿಂದೆ ಓಡುತ್ತಿದ್ದ.

ಆಲದ ಮರದಾಚೆಗೆ ಒಂದು ಚಿಕ್ಕ ಮನೆಯಿತ್ತು. ಹಣ್ಣು ಗೂದಲಿನ, ಜಡ್ಡುಗಟ್ಟಿದ ಕೂದಲಿನ ಮುದುಕಿಯೊಬ್ಬಳು ಇರುತ್ತಿದ್ದಳು. ಬದುಕಿನಲ್ಲಿ ಜಿಗುಪ್ಸೆಗೊಂಡ ಮುದುಕಿ ಜೀವನದ ಕಾಳಜಿ ಬಿಟ್ಟುಕೊಟ್ಟಂತೆ ಕಾಣುತ್ತಿದ್ದಳು. ಒಂದು ದಿನ ಆ ಮುದುಕಿ ಗಂಜಿಯ ತಟ್ಟೆ ಹಿಡಿದು ಸದಾನಂದನ ಬಳಿ ಬಂದು 'ತಗೊ ಈ ಗಂಜಿ ಕುಡಿ' ಅಂದಳು.

ಸದಾನಂದ ಕೊಂಚ ಹೊತ್ತು ಅನುಮಾನಿಸುತ್ತ ನಿಂತುಕೊಂಡ. 'ಮಾಜಾಳಿಯ ಕುಂಬಾರರ ಹುಡುಗ ಅಲ್ವೇನಪ್ಪ ನೀನು. ನನಗೆ ನೀನು ಯಾರೂಂತ ಗೊತ್ತು. ನಾವ್ ಮೊದ್ಲು ಗೋವೆಗೆ ಹೋಗಬೇಕಾದ್ರೆ ನಿಮ್ಮೂರ ಮೇಲಿಂದ್ಲೆ ಹಾದು ಹೋಗ್ತಿದ್ದೀವಿ. ಅಲ್ಲಿಂದ ಪಾವಸೆ ಘಟ್ಟ ಹತ್ತಿದ್ರೆ ಆಚೆಗಿರೋದೆ ಪೈಂಗೀಣ... ತಗೋ ಮಗಾ'

ಸದಾನಂದನಿಗೆ ಏನನ್ನಿಸಿತೋ ದೇವರೇ ಬಲ್ಲ. ಅವನು ತಟ್ಟೆಯನ್ನು ತೆಗೆದುಕೊಂಡು ಪೂರ್ತಿ ಗಂಜಿ ಕುಡಿದು ಮುಗಿಸಿದ. ಮಿಕ್ಕ ಅಗಳೂ ತಿಂದು ಮುಗಿಸಿದ. ತಲೆಯೆತ್ತಿದಾಗ ಅವನ ಕಣ್ಣಾಲಿಗಳಲ್ಲಿ ನೀರಾಡುತ್ತಿತ್ತು. "ಅಲ್ಲಿ ಇಲ್ಲಿ... ಸುಮ್ನೆ ಯಾಕೆ ಸುತ್ತುತ್ತೀಯ. ಬಾ... ಮನೆಗೆ... ನೆರಳಿನಲ್ಲಿ ಕೂತುಕೊ. ನಮ್ಮನೆ ಹಿಂದೆ ಬಾವಿಯಿದೆ."

ಮರುದಿನದಿಂದ ಅವನು ಆ ಮುದುಕಿಯ ಮನೆಗೆ ಹೋಗಿ ಕುಳಿತುಕೊಳ್ಳತೊಡಗಿದ. ತಾಯಿ ಕೊಟ್ಟ ರೊಟ್ಟಿಗಿಟ್ಟಿ ಅಲ್ಲೇ ಕುಳಿತು ತಿನ್ನುತ್ತಿದ್ದ. ಮುದುಕಿ ಗಂಜಿ ಕೊಟ್ಟರೆ ಕುಡಿಯುತ್ತಿದ್ದ. ಆ ಮನೆಯಲ್ಲಿ ಬಡತನ ಮನೆ ಮಾಡಿ ಕುಳಿತಿತ್ತು. ಎಲ್ಲೆಡೆಗೂ ಹರಕು-ಮುರುಕು ಕಾಣುತ್ತಿತ್ತು. ಗೋವಾ ಪ್ರವೇಶ ನಿಷೇಧವಿದ್ದಾಗ ಅವಳ ಇಪ್ಪತ್ತು ವರ್ಷದ ಮಗ ಯಾರದ್ದೋ ಏನೋ ವಸ್ತು ತರಲು ಗೋವೆಗೆ ಹೋಗಿದ್ದ. ಬರುವಾಗ ಪೋರ್ಚುಗೀಸ್ ಸೊಲ್ಜರರು ದಾರಿಯಲ್ಲಿ ತಡೆದು ನಿಲ್ಲಿಸಿದಾಗ ತಲೆಯ ಮೇಲಿದ್ದ ಗಂಟು ಅಲ್ಲಿಯೇ ಬಿಸಾಡಿ ಓಡತೊಡಗಿದ. ಹಿಂದಿನಿಂದ ಸೊಲ್ಜರರು ಗುಂಡು ಹಾರಿಸಿದರು. ಅವನು ಅಲ್ಲಿಯೇ ವಿಧಿವಶನಾದ. ಅವನ ದೇಹ ನೋಡಲೂ ಸಿಗಲಿಲ್ಲ. ತಾಯಿ ತನ್ನ ಮಗ ಬಂದೇ ಬರುತ್ತಾನೆ ಎಂದು ಎಷ್ಟೋ ವರ್ಷ ಚಿಂತೆಯಲ್ಲಿ ನೂಕಿದಳು. ಗೋವಾ ಸ್ವತಂತ್ರವಾದ ಬಳಿಕ ಅವಳು ಗೋವೆಯ ಊರೂರು ಅಲೆದು ಹುಡುಕಿ ಬಂದಳು. ಕೊನೆಗೆ ಅವಳಿಗೆ

ಪೊಲೀಸರೇ ಸತ್ಯಕಥೆಯನ್ನು ಹೇಳಿದರು. ಅವಳ ಮಗನಿಗೆ ಪೈಂಗೀಣ–ಕಾಳಶಿ ಹಳ್ಳಿಗಳ ಹತ್ತಿರ ಕೊಂದು ಹಾಕಿದ್ದರು. ಅಲ್ಲಿಯ ಕಾಡಿನಲ್ಲಿ ಅವನ ದಫನ ಮಾಡಿದ್ದರು. ಈ ಮಾತಿಗೆ ಏಳೆಂಟು ವರ್ಷಗಳು ಉರುಳಿ ಹೋಗಿದ್ದವು. ಆ ಸೊಲ್ಜರರು ಈಗ ಇರಲಿಲ್ಲ. ಈ ವಿಷಯ ತಿಳಿದ ಮುದುಕಿ ಹುಚ್ಚು ಹಿಡಿದಂತಾದಳು. ಗೋವೆಯತ್ತ ಮುಖ ಮಾಡಿ ಹಗಲಿರುಳು ಕಣ್ಣೀರು ಸುರಿಸುತ್ತ ಕೂಡುತ್ತಿದ್ದಳು.

ಸದಾನಂದ ಪ್ರತಿದಿನ ಮಧ್ಯಾಹ್ನ ಅವಳ ಬಳಿ ಹೋಗಿ ಕುಳಿತು ಕೊಳ್ಳುತ್ತಿದ್ದ. ಅವಳ ಬಳಿ ಮಾತಾಡುತ್ತಿದ್ದ. ದಿನಕಳೆದಂತೆ ಅವಳ ಗಂಟು ಕಟ್ಟಿದ ಕೇಶರಾಶಿಗೆ, ಮೈಮೇಲಿನ ಬಟ್ಟೆಗೆ, ಮನೆಯಲ್ಲಿದ್ದ ಅಶಿಸ್ತಿಗೆ ಶಿಸ್ತು ಬರತೊಡಗಿತು. ಸದಾನಂದನಿಗೂ ನೆರಳು ಸಿಕ್ಕಂತಾಗಿತ್ತು. ಅವಳ ಸ್ವಲ್ಪ ಹೊಲವಿತ್ತು. ಅದನ್ನು ಗೇಣಿಗೆ ಕೊಟ್ಟು ಬಂದ ಭತ್ತದಿಂದ ಉಪಜೀವನ ನಡೆಸುತ್ತಿದ್ದಳು. ಮನೆಯ ಸುತ್ತಮುತ್ತ ಎರಡು ಮೂರು ತೆಂಗಿನ ಮರಗಳಿದ್ದವು. ತಾಯಿ ಕಟ್ಟಿಕೊಟ್ಟ ರೊಟ್ಟಿ ಬಿಚ್ಚಿ ತಿನ್ನಲು ಕುಳಿತಾಗ ಮುದುಕಿ ಗಂಜಿ ತಂದುಕೊಡುತ್ತಿದ್ದಳು.

ಈ ದಿನಗಳಲ್ಲಿ ಸದಾನಂದನಿಗೆ ಏನಾಗಿತ್ತೊ ಗೊತ್ತಿಲ್ಲ. ಯಾರಾದರೂ ಅವನಿಗೆ ಪ್ರೀತಿಯಿಂದ ಮಾತಾಡಿದರೆ, ಮುದ್ದಿನಿಂದ ಬೆನ್ನು ಸವರಿದರೆ ಅವನ ಕಣ್ಣಾಲಿಗಳು ಒದ್ದೆಯಾಗುತ್ತಿದ್ದವು. ಮನೆಯ ಬಡತನ, ಶಾಲೆಯ ಸಹಪಾಠಿಗಳ ಮಿರುಗುವ ಬಟ್ಟೆಬರೆಗಳು, ಮುದುಕಿಯ ಉಪಚಾರ ನೋಡಿದಾಗ ಸದಾನಂದ ಗದ್ಗದಿತನಾಗುತ್ತಿದ್ದ. ಅವನ ತಲೆಯಲ್ಲಿ ಒಂದು ಬಗೆಯ ಗೊಂದಲ ಉಂಟಾಗುತಿತ್ತು.

ವರ್ಗದ ಕೋಣೆಯಲ್ಲಿ ಅವನು ಅಸಹಾಯಕನಂತೆ ದೀನನಾಗಿ ಬಗ್ಗಿ ಮುದುಡಿ ಕುಳಿತುಕೊಳ್ಳುತ್ತಿದ್ದ. ಅವನಿಗೆ ತನ್ನ ಮೈಮೇಲಿದ್ದ ಹರಕು ಬಟ್ಟೆಗಳನ್ನು ನೋಡಿ ಬೇಸರವಾಗುತಿತ್ತು. ಆ ಶಾಲೆಯಲ್ಲಿ ಸೋಮವಾರ ಮತ್ತು ಬುಧವಾರ ಯೂನಿಫಾರ್ಮ್ ಹಾಕಲೇಬೇಕಾಗಿತ್ತು. ಬಿಳಿಯ ಶರ್ಟು, ನೀಲಿಬಣ್ಣದ ಚಡ್ಡಿ. ಅವನ ಬಳಿ ಸ್ವಲ್ಪ ಕೊಳೆಯಾದ ಒಂದು ಬಿಳಿಯ ಶರ್ಟು ಮಾತ್ರ ಇತ್ತು. ಚಡ್ಡಿ ಯಾವ ಬಣ್ಣದಿದ್ದರೂ ಅಂಗಿ ಮಾತ್ರ ಬಿಳಿಯ ಬಣ್ಣದ್ದಿರುತಿತ್ತು. ಮುಖ್ಯೋಪಾಧ್ಯಾಯರು ಗದರಿದರೆ ಖಾನಾಪುರಕರ ಮಾಸ್ತರರು ಹೇಗೆ ಹೇಗೋ ಕಾಪಾಡುತ್ತಿದ್ದರು. ಹೆಡ್‌ಮಾಸ್ತರ ದಪ್ಪಗಿದ್ದ. ತನ್ನ ಅಗಲ ಮೊರದಂತಹ ಅಂಗೈಯನ್ನು ಮುಂದೆ ಮಾಡಿ ಅಲ್ಲಾಡಿಸುತ್ತ "...ಛೆ...ಛೆ... ಆಗೋದಿಲ್ಲ..." ಎನ್ನುತ್ತಿದ್ದರು. ಸ್ವಲ್ಪ ಹೊತ್ತಿನಲ್ಲಿ ಎಲ್ಲವನ್ನೂ ಮರೆತು ಬಿಡುತ್ತಿದ್ದ. ಮರೆವಿನ ರೋಗವಿದ್ದವರ ಹಾಗೆ.

ಈ ಬ್ರಾಹ್ಮಣರ, ಕೊಂಕಣೇರ ಮಕ್ಕಳು ಹೀಗೇಕೆ ಠಾಕು ಠೀಕಾಗಿ, ನಗುನಗುತ್ತ ಇರುತ್ತಾರೆ ಎಂದು ಸದಾನಂದ ಆಲೋಚಿಸುತ್ತಿದ್ದ. ಕಾರಣ ಅವರ ಮನೆಯಲ್ಲಿ ತಿಂಡಿ ತಿನಿಸು ತುಂಬಿರಬಹುದು. ಕಪಾಟಿನಲ್ಲಿ ನೋಟಿನ ಕಂತೆ ತುಂಬಿರಬಹುದು. ಅವರಿಗೆ ಮಣ್ಣು ಬಡಿಯುವ, ಕಲಸುವ, ತಟ್ಟುವ ಕೆಲಸ ಬೀಳುವುದಿಲ್ಲ. ಗಡಿಗೆಯ ಹೆಡಿಗೆ ತಲೆಯ ಮೇಲಿರಿಸಿಕೊಂಡು ಊರೂರಿಗೆ ಮಾರಾಟಕ್ಕೆ ಹೋಗುವ ಕೆಲಸವಿಲ್ಲ. ಇದನ್ನೆಲ್ಲ ಯೋಚಿಸುತ್ತ ಕುಳಿತಾಗ ಅವನ ಕಣ್ಣು ಹನಿಗೂಡುತ್ತಿದ್ದವು.

ಅವನಿಗೆ ಅಭ್ಯಾಸಕ್ಕೆ ಕುಳಿತುಕೊಳ್ಳಲು ಬಿಡುತ್ತಿರಲಿಲ್ಲ. ತಂದೆ ಮಡಕೆ ಮಾಡಲು ಕುಳಿತರೆ ಮಣ್ಣಿನ ಮುದ್ದೆ ತರಲು ಕಳಿಸುತ್ತಿದ್ದ. ಕೆರೊಸಿನ್ ಇಲ್ಲವೆಂದು ಮನೆಯಲ್ಲಿ ಒಂದೇ

ಒಂದು ಸೀಮೆಎಣ್ಣೆ ದೀಪ ಉರಿಯುತಿತ್ತು. ಆ ದೀಪವನ್ನು ತಂದೆ ಗಡಿಗೆ ತಟ್ಟುವಾಗ ತನ್ನ ಬಳಿ ಇಟ್ಟುಕೊಂಡು ಕುಳಿತುಕೊಳ್ಳುತ್ತಿದ್ದ. ಅದೇ ದೀಪದ ಮಿಣಮಿಣಿಸುವ ಬೆಳಕಿನಲ್ಲಿ ಸದಾನಂದನೂ ಓದಲು ಕೂಡಬೇಕಾಗುತಿತ್ತು. ಇನ್ನೊಂದು ಕಡೆಯಲ್ಲಿ ತಂದೆಯ ಪುಷ್ಪಾರ್ಚನೆ ನಡದೇ ಇರುತಿತ್ತು. ಆದರೂ ಅವನು ಒಳ್ಳೆಯ ಅಂಕಗಳನ್ನು ಸಂಪಾದಿಸಿ ಉತ್ತೀರ್ಣನಾಗಿ ನಾಲ್ಕು–ಐದು ನಂಬರ್‌ನಲ್ಲಿ ಬರುತ್ತಿದ್ದ.

ತಾಯಿಗೆ ಶಿಕ್ಷಣವೆಂದರೇನು ಎಂದು ಗೊತ್ತಿರಲಿಲ್ಲ. ಅದರಿಂದ ಅವಳಿಗೆ ತನ್ನ ಮಗ ಮಾಡುವುದೆಲ್ಲ ಯೋಗ್ಯವೆಂದು ಅನ್ನಿಸುತ್ತಿತ್ತು. ಅವನು ತಪ್ಪು ಮಾಡಲಿಕ್ಕಿಲ್ಲ. ಬಂಗಾರದಂತಹ ಸ್ವಭಾವದ ತನ್ನ ಮಗ! ಅವಳು ಮಗನ ಬೆಂಗಾವಲಿಗೆ ಇದ್ದಳು. ಎಷ್ಟೆಂದರೂ ಅವಳು ಅಬಲೆ. ಗಂಡನ ಮುಂದೆ ಆಕೆಯ ಆಟ ನಡೆಯುತ್ತಿರಲಿಲ್ಲ.

ಒಂದು ದಿನ ಅವನಿಗೆ ಒಂದು ಬ್ರಾಹ್ಮಣರ ಹೆಣ್ಣು ಹುಡುಗಿ ಕೇಳಿದಳು. 'ಸದಾನಂದ, ನಿನಗೆ ಗಡಿಗೆ ಮಾಡಲು ಬರುತ್ತದೆಯೆ?'

'ಹೌದು ಗಡಿಗೀನೂ ಮಾಡ್ತೀನಿ. ಗಣಪತಿ ಮೂರ್ತಿನೂ ಮಾಡ್ತೀನಿ. ಮಂದಿ ನಾ ಮಾಡಿದ ಗಣಪತಿ ಮೂರ್ತಿಯ ಪೂಜಿ ಮಾಡ್ತಾರ'

ಅವಳ ಬೆಕ್ಕಿನ ಕಣ್ಣು ನಕ್ಷತ್ರದಂತೆ ಹೊಳೆಯುತಿತ್ತು. ಅವಳು ಮತ್ತೆ ಕೇಳಿದಳು. "ಮತ್ತೆ ನೀನೇಕೆ ಕೊಳೆಯಾದ, ಹರಕು ಬಟ್ಟೆ ಹಾಕ್ಕೊಂಡು ಬರ್ತಿ? ಬಡವರಾ ನೀವು?"

ಸದಾನಂದನ ತುಟಿಯಿಂದ ಮಾತು ಹೊರಬೀಳಲಿಲ್ಲ.

"ನಿನಗೆ ಹೇಗೆ ಇಷ್ಟೆಲ್ಲ ಮಾರ್ಕ್ಸ ಸಿಗ್ತವೆ?"

"ದೇವರು ಕೊಡ್ತಾನ"

"ನೀ ಮಾಡಿದ ಮೂರ್ತಿ ಗಣಪತಿನಾ?" ಆ ಹುಡುಗಿ ಗಹಗಹಿಸಿ ನಕ್ಕಳು.

ಮುಂದಿನ ಎಂಟು ದಿನಗಳು ಅವನ ಕಣ್ಣ ಮುಂದೆ ಅವಳ ನಗುಮುಖ, ಹೊಳೆಯುವ ಕಣ್ಣುಗಳು ಕಾಣುತ್ತಿದ್ದವು. ಅವಳ ನಗು ಕಿವಿಗಳಲ್ಲಿ ಮರುಧ್ವನಿಸುತಿತ್ತು. ಕುಂಬಾರರು ಇದುವರೆಗೆ ಸಾಪಿರಾರು ಗಣಪತಿ ದೇವರ ಮೂರ್ತಿ ಮಾಡಿದ್ದರು. ಆದರೆ ಒಬ್ಬ ದೇವನೂ ಅವರನ್ನು ಕಾಪಾಡಲಿಲ್ಲ.

ಮೊದಲ ದರ್ಜೆಯಲ್ಲಿ ಅವನು ಮ್ಯಾಟ್ರಿಕ್ ಪಾಸಾಗಿದ್ದ. ಆದರೆ ಮ್ಯಾಟ್ರಿಕ್ ಪಾಸಾದ ಮೇಲೆ ಸುಮಾರು ಒಂದು ವರ್ಷ ಮನೆಯಲ್ಲೇ ಇದ್ದ. ಕಾರವಾರ ಕಾಲೇಜಿಗೆ ಹೋಗುತ್ತೇನೆಂದು ಹೇಳಿದರೆ ತಂದೆ ಕಿಪಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಹಣಕಾಸಿನ ತೊಂದರೆ ಹೇಳುತ್ತಿದ್ದ. ಮುಖ್ಯವಾದುದೆಂದರೆ ಕುಂಬಾರರ ಮಕ್ಕಳು ಕಲಿತು ಏನೂ ಸಾಧಿಸಲಾರರು. ಯಾರೂ ಹತ್ತಿರ ಸೇರಿಸಿಕೊಳ್ಳುವುದಿಲ್ಲ ಎಂಬ ಭಾವನೆ ಅವನಲ್ಲಿತ್ತು. ಕುಂಬಾರರು ಕೇವಲ ಮಣ್ಣು ಕಲಿಸುವುದು ಮೊದಲು ಶಾಲೆಗೆ ಹೋಗುವಾಗ ರೈತರ, ಗುರವ, ದೇವಳಿ ಜನರ ಮಕ್ಕಳು ಶಾಲೆಗೆ ಬರುತ್ತಿದ್ದರು. ಎಲ್ಲರೂ ಸೇರಿ ಗುಡ್ಡ ಬೆಟ್ಟಗಳಲ್ಲಿ ಅಲೆಯುತ್ತಿದ್ದರು. ಹುಣಸೆಹಣ್ಣು, ನೇರಲ ಹಣ್ಣು ಕೆಡವಿ ತಿನ್ನುತ್ತಿದ್ದರು. ಈಗ ಎಲ್ಲಾ ನಿಂತು ಹೋಗಿತ್ತು. ಅವನೀಗ ಒಬ್ಬಂಟಿಯಾಗಿದ್ದ. ತಂದೆ ಏನು ಹೇಳಿದರೂ ಕೇಳದವನಂತೆ ಮಾಡಿ ಹೋಗುತ್ತಿದ್ದ. ಆತನ ತಂದೆ ರೇಗುತ್ತಿದ್ದ. ಬಯ್ಯುತ್ತಿದ್ದ. 'ನಾಕು ಪುಸ್ತಕ ಓದೀಯಂತ

ಆಕಾಶಕ್ಕ ಕೈ ಹಚ್ಚಬ್ಯಾಡ. ಕುಂಬಾರನ ಕುಂಡಿ ಮಣ್ಣಾಗಿರೂದ. ಕುಂಬಾರರ ಕೆಲಸ ನೋಡಿ ನಿನಗ ನಾಚಗಿ ಕಾಣತದೇನು? ನೀ ಸಣ್ಣಾಂವ ಇದ್ದಾಗ ನಿನ್ನ ತಲೀ ಮ್ಯಾಗ ಕೆಸರಿನ ಬುಟ್ಟಿ ಇಡಬೇಕಾಗಿತ್ತು. ನನ್ನದ ತಪ್ಪಾತು... ನಿನಗ ಸಾಲಿಗ ಕಳಿಸಿದ್ದು."

ಆದರೆ ಅವನು ತಾನು ಮುಂದೆ ಓದಲು ಕಾರವಾರಕ್ಕೆ ಹೋಗುತ್ತೇನೆ ಎಂದು ರಚ್ಚೆ ಹಿಡಿದಿದ್ದ.

ಒಂದೊಂದು ಬಾರಿ ಅವನ ತಂದೆ ರೇಗಿ ಕೇಳುತ್ತಿದ್ದ 'ವರ್ಸಕ್ಕೆ ಎಷ್ಟು ಖರ್ಚ ಬರತೈತೊ?'

"ಹೊಸ ಬಟ್ಟಿ-ಎರಡು ಜೋಡಿಯಾದ್ರೂ ಬೇಕಾಗತೈತಿ. ಪುಸ್ತಕ, ಫೀ... ಹೋಗಿ ಬರಾಕ ಸೈಕಲ್ಲು, ಹನ್ನೆರಡು ಮೈಲಿನ ದಾರಿ."

ಇದನ್ನು ಕೇಳಿದ ತಂದೆಯ ಕಣ್ಣು ನೆತ್ತಿಗೇರಿತು.

"ಸೈಕಲ್ ಇಲ್ಲದಿದ್ರ ಆಗೊದಿಲ್ಲೇನು?"

"ದಿನಾಲು ಬಸ್ಸಿನಾಗ ಹೋಗಾಕ ಖರ್ಚ್ ಭ್ಹಾಳ ಆಗ್ತದ. ಸೈಕಲ್ಲು, ಪುಸ್ತಕ ತಗೊಳ್ಳದಿದ್ರೂ ಮೊದಲು ಒಂದೂವರೆ ಸಾವಿರ ಬೇಕಾಗತೈತಿ."

"ಅಲ್ಲಿ ಇರಾಕ ಹಾಸ್ಟಲ್ಲ್ ಅದಾವಂತಲ್ಲ?"

"ಅವು ಹೊಲೇರಿಗೆ, ಚಮಗಾರರಿಗೆ ಮತ್ತು ಮೇಲಿನಜಾತಿಯವರಿಗಿರ್ತಾವ"

ತಂದೆ ಥೂ, ಥೂ ಅಂತ ಉಗುಳು ಉಗುಳಿದಂತೆ ನಕ್ಕ. "ಕುಂಬಾರರಂದ್ರ ಮೇಲ್ ಜಾತಿಯವರಾ? ಏನು ಉಣ್ಣೋಕ್ಕೆ. ಏನ್ ತಿನ್ನಾಕೆ ಮೇಲ್ ಜಾತಿ ನಮಗ ಯಾಕೆ ಬೇಕು? ನಿನಗ ಗೊತ್ತೈತೇನು ಮಹಾರವಾಡೆಯಲ್ಲಿ ಸರಕಾರ ಕಂಬ ಹೊಸದಾಗಿ ಹಾಕಿ ದೀಪದ ವ್ಯವಸ್ಥೆ ಮಾಡಿಕೊಟ್ಟಾರ. ನಮಗ ಮಾತ್ರ ಮೂರು ಕಂಬದ ರೊಕ್ಕ ತುಂಬ್ರಿ ಅಂತಾರ. ಯಾರ ಎಲ್ಲಿಂದ ತುಂಬಬೇಕು. ಯಾರ ಅವರ ಕೂಡ ಜಗಳಾಡ್ತಾರ?"

ಸದಾನಂದನ ಮುಂದಿನ ಶಿಕ್ಷಣದ ಬಗ್ಗೆ ಸದಾಕಾಲ ಮನೆಯಲ್ಲಿ ಚರ್ಚೆ ನಡೆಯುತ್ತಿತ್ತು. ಅವನು ಹಣದ ವಿಷಯ ಹೇಳಿದರೆ ಇಡೀ ಮನೆಯೇ ಕುಸಿದು ಬಿದ್ದಂತಾಗುತಿತ್ತು.

ಕುಂಬಾರರಿಗೆ ಕಷ್ಟದ ದಿನಗಳು ಬಂದಿದ್ದೇನೊ ನಿಜ. ಎಂಟು ದಿನ ಗುದ್ದಾಡಿ ಒಂದು ಹೆಡಿಗೆ ಗಡಿಗೆ ತಯಾರಿಸಿದರೆ ಇನ್ನೂರೈವತ್ತು ರೂಪಾಯಿ ಸಂಪಾದನೆ ಕಠಿಣವಾಗುತಿತ್ತು. ಜನರು ಮಣ್ಣಿನ ಗಡಿಗೆಗಳನ್ನು ಖರೀದಿಸಲು ಸಂಕೋಚಪಡುತ್ತಿದ್ದರು. ಹಿಂದೆ ಮುಂದೆ ಆಲೋಚಿಸುತ್ತಿದ್ದರು. ಸೋವಿ ದರದಲ್ಲಿ ಕೇಳುತ್ತಿದ್ದರು. ತಲೆಯ ಮೇಲಿಟ್ಟುಕೊಂಡು ಹೋದ ಗಡಿಗೆಗಳು ಮಾರಾಟವಾಗದೆ ಹಾಗೆಯೇ ಮರಳಿ ಬರುತ್ತಿದ್ದವು. ಸಂಪಾದನೆಯಾದ ಕೆಲವು ಕಾಸುಗಳಲ್ಲಿ ಕಾಳುಕಡಿ, ಉಪ್ಪು, ಮೆಣಸಿನ ಕಾಯಿ, ಮೀನುಗೀನು ತಂದರೆ ಕೈಯಲ್ಲಿ ಒಂದು ಕಾಸೂ ಉಳಿಯುತ್ತಿರಲಿಲ್ಲ. ಮಳೆಗಾಲದ ಮೂರು ತಿಂಗಳಂತೂ ವಿಧಿ ಬೆನ್ನು ಹತ್ತಿದಂತೆ ದಿನ ದೂಡಬೇಕಾಗುತ್ತಿತ್ತು. ಮೈಮೇಲಿನ ಬಟ್ಟೆ ಹಳತಾಗಿ ಚಿಂದಿ ಚಿಂದಿಯಾದರೂ ಹೊಸ ಬಟ್ಟೆ ತರುವುದಾಗುತ್ತಿರಲಿಲ್ಲ. ಅದರಲ್ಲೂ ಶಿಕ್ಷಣದಂತಹ ನಿಷ್ಪ್ರಯೋಜಕ ಕೆಲಸಕ್ಕೆ ಯಾರು ತಾನೆ ಖರ್ಚು ಮಾಡಲು ಮುಂದಾಗುತ್ತಿದ್ದರು.

ಕುಂಬಾರರು ಮೊದಲು ತುಂಬ ಉತ್ಸಾಹದಿಂದ ಮಕ್ಕಳನ್ನು ಶಾಲೆಗೆ ಕಳಿಸುತ್ತಿದ್ದರು. ಮೂರು-ನಾಲ್ಕು ವರ್ಗ ದಾಟಿದರೆ ಸಾಕು ಮಕ್ಕಳು ತೆವಳಲು ಪ್ರಾರಂಭಿಸುತ್ತಿದ್ದರು. ಅವರ

ಾಲೆ ಯಾವಾಗ ಬಿಟ್ಟಿದೆಯೆಂದು ಅವರಿಗೇ ಗೊತ್ತಾಗುತ್ತಿರಲಿಲ್ಲ. ಶಾಲೆಗೆ ಹೋಗುವ ುಡುಗರಿಗಿಂತ ಮಣ್ಣು ಅಗೆಯಲು ಹೋಗುವ ಮಕ್ಕಳು ಪ್ರಶಂಸೆಗೆ ಪಾತ್ರರಾಗುತ್ತಿದ್ದರು.

ಈ ಎಲ್ಲ ಅಡೆತಡೆಗಳನ್ನು ದಾಟಿ ಸದಾನಂದ ಮುಂದೆ ಹೋಗಲು ಯತ್ನಿಸುತ್ತಿದ್ದ. ಅವನಿಗೆ ಯಾರು ಈ ಬುದ್ಧಿವಾದ ಹೇಳಿದ್ದರೋ ಗೊತ್ತಿಲ್ಲ. ಪ್ರಾಯಃ ಅದು ಅವನ ಹುಟ್ಟುಗುಣ ಆಗಿರಬೇಕು. ಅಥವಾ ಓದು ಓದುತ್ತಿದ್ದಂತೆ ಅವನಿಗೆ ಶಿಕ್ಷಣದ ಸಾಕ್ಷಾತ್ಕಾರವಾಗಿರಬಹುದು.

ಯಾರಾದರೂ ಮುಂಬಯಿ, ಪುಣೆಯಿಂದ ಬಂದರೆ ಇವನು ಅವರ ಬಳಿ ಹೋಗಿ, ನಾನು ಕುಂಬಾರವಾಡೆಯ ಯಶವಂತನ ಮಗ. ಮ್ಯಾಟ್ರಿಕ್ ಪಾಸಾಗೇನಿ. ನಿಮ್ಮ ಕೂಡ ಎರ್ತೀನಿ. ಎಲ್ಲಾರೂ ಒಂದ್ ನೌಕರಿ ಹಿಡಿದು ಕಲೀಬೇಕಂತ ಆಸಿ ಐತಿ' ಎಂದು ದೀನನಾಗಿ ಹೇಳಿಕೊಳ್ಳುತ್ತಿದ್ದ. ಆದರೆ ಅನೇಕರು ವಸತಿಯ ಸಮಸ್ಯೆ ಮುಂದೊಡ್ಡಿ ಅವನನ್ನು ನಿರಾಶೆ ಗೊಳಿಸುತ್ತಿದ್ದರು. ಒಂದು ಕಡೆ ಮುಂಬಯಿಕಾರ್ ಅಂತ ದಿಮಾಖು ತೋರಿಸುವುದು ಮತ್ತೊಂದು ಕಡೆ ಅದನ್ನೇ ಬಂಡವಾಳವನ್ನಾಗಿ ಮಾಡಿಕೊಂಡು ಭಯ ಹುಟ್ಟಿಸುವುದು.

ಒಂದು ದಿನ ಮುಂಬಯಿಯಿಂದ ಬಂದ ದೇವರಾಯ ನಾಯಕನನ್ನು ಕಾಣಲು ಹೋದರೆ ಅವನು ಸದಾನಂದನ ಕೈಮೇಲೆ ಒಂದು ಬಿಸ್ಕತ್ತು ಇಟ್ಟು "ಏನಿದೆ ಆ ದೊಡ್ಡ ನಗರದಲ್ಲಿ? ಖೂನಿ ಮತ್ತು ಹೊಡೆದಾಟ. ಒಂದು ದಿನ ನಲ್ಲಿಗೆ ನೀರು ಬರದಿದ್ರೆ ಮುಂಬಯಿ ಬಿಟ್ಟು ಓಡಿಹೋಗೋಣ ಅನ್ನಿಸುತ್ತೆ. ನೀನು ಕುಂಬಾರನ ಮಗ ಅಲ್ವೆ? ಗಡಗಿ ಮಾಡು. ಹೂವಿನ ಕುಂಡಗಳನ್ನು ಮಾಡು. ಗಣಪತಿ ಹಬ್ಬದಲ್ಲಿ ಅರವತ್ತು ಎಪ್ಪತ್ತು ಗಣಪತಿ ಮೂರ್ತಿ ಮಾಡು. ಮುಂಬಯಿಗೆ ಹೋಗಿ ಸಿಕ್ಕಿಬಿದ್ದರೆ ನಿನ್ನನ್ನು ಯಾರು ನೋಡಿಕೊಳ್ಳೋರು? ನೀನು ದಾರಿ ತಪ್ಪಿದ್ರೆ ನಿನ್ನನ್ನು ಯಾರು ಹುಡುಕ್ತಾರೆ?"

ಕುಂಬಾರರ ಮನಸ್ಸು-ಹೃದಯದಲ್ಲಿ ಮಣ್ಣು ಮೆತ್ತಿದಂತಿತ್ತು. ಒಂದು ತಿಗರಿ, ಪ್ರತಿದಿನ ತಿರುಗುವಂಥದ್ದು. ಗುಡ್ಡದ ಗಟ್ಟಿ ಮಣ್ಣು, ಕೆರೆಯ ಚಿಗುಟು ಮಣ್ಣು, ಹೆಂಟೆ ಒಡೆಯುವುದು, ನೆನೆಸುವುದು, ಕೊಳೆಸುವುದು, ಬಡಿಯುವುದು, ಆಕಾರ ಕೊಟ್ಟು ಭಟ್ಟಿಯಲ್ಲಿಟ್ಟು ಸುಡುವುದು...ಸುತ್ತುವ ತಿಗರಿಯಲ್ಲಿ ತಂದೆ ಗಡಿಗೆ ತಯಾರಿಸುವಂತೆ ಆ ಮನುಷ್ಯರ ಬದುಕೂ ನಿರ್ಜೀವ, ನಿಸ್ಸಾರವಾಗಿತ್ತು. ಅವರೂ ಮಣ್ಣಿನ ಮನುಷ್ಯರಾಗಿದ್ದರು.

ನಿಜಕ್ಕೂ ಅವನ್ನಲ್ಲಿದ್ದ ಉತ್ಸಾಹ ಉಡುಗಿ ಹೋಗಿತ್ತು. ಅವನಂತೂ ಉಸಿರುಕಟ್ಟಿದಂತೆ ಜೀವಿಸುತ್ತಿದ್ದ. ಕೆಲವು ಬಾರಿ ಕೋಪ ಮಾಡುತ್ತಿದ್ದ. ಊಟ ಮಾಡದೆ ಇರುತ್ತಿದ್ದ. ಮನೆಯಲ್ಲಿ ಯಾವ ಕೆಲಸಕ್ಕೂ ಕೈ ಹಚ್ಚುತ್ತಿರಲಿಲ್ಲ. ಎಲ್ಲಾದರೂ ಗಿಡಮರಗಳಿದ್ದಲ್ಲಿ ಹೋಗಿ ಸುಮ್ಮನೆ ಕೂತಿರುತ್ತಿದ್ದ. ತಂದೆ ಅವನನ್ನು ಕೆಟ್ಟು ಹೋದ ಕೇಸು ಎನ್ನುವಂತೆ ನೋಡುತ್ತಿದ್ದ. "ಇಲ್ಲಿ ತಂದಿ ಕೂಡ ಕೆಲಸ ಮಾಡಬೇಕಾಗತೈತಿ ಅಂತ ಕಾರವಾರಕ್ಕ ಹೋಗಿ ಸಾಲಿ ಕಲಿಯೂ ನೆವ ಹೇಳತಾನ. ಕಲಿಯೂದಾದರ ಬ್ರಾಹ್ಮರ ಮನ್ಯಾಗ ಹುಟ್ಟಬೇಕಿತ್ತು. ಕುಂಬಾರರ ಮನ್ಯಾಗ ಯಾಕ ಹುಟ್ಟಿದ? ಹುಟ್ಟಿದ್ದಂಗ ಕೆಲಸ. ತನ್ನ ಧರ್ಮ ಬಿಟ್ಟಾಂವ ಉದ್ಧಾರ ಆಗೂದಿಲ್ಲ" ಎಂದು ತಂದೆ ಗೊಣಗುತ್ತಿರುತ್ತಿದ್ದ.

ಒಂದು ದಿನ ಸದಾನಂದ ತನ್ನ ಅಕ್ಕನ ಮನೆಗೆ ಅಸ್ನೋಟಿಗೆ ಹೋದ. ಅವನಿಗಿಂತ ನಾಲ್ಕು ವರ್ಷ ದೊಡ್ಡವಳು ಅವನ ಅಕ್ಕ ವಿಶ್ರಾಂತಿ. ಅಸ್ನೋಟಿಗೆ ಮದುವೆ ಮಾಡಿ ಕೊಟ್ಟಿದ್ದರು. ಅವಳು ತನ್ನ ಹಣೆಗೆ ದೊಡ್ಡ ಕುಂಕುಮ ಇಟ್ಟುಕೊಳ್ಳುತ್ತಿದ್ದಳು. ಕೆಲವು ವೇಳೆ ಅವಳಿಗಿಂತ ಮೊದಲೇ ಅವಳ ಕುಂಕುಮ ಕಾಣುತಿತ್ತು. ಮದುವೆಯ ಮೊದಲು ಮನೆಯ ಕೆಲಸ ಮಾಡುವುದಿಲ್ಲವೆಂದು ಅವಳ ತಾಯಿ ಅವಳಿಗೆ ಬಯ್ಯುತ್ತಿದ್ದಳು. ಬೆಳಗ್ಗಿನಿಂದ ಸಂಜೆಯವರೆಗೆ ವಾಡೆಯಲ್ಲಿನ ಮನೆಮನೆಗೂ ಭೇಟಿ ಕೊಡುತ್ತಿದ್ದಳು. ಇಡೀ ದಿನ ತಾಯಿ ಅವಳನ್ನು ಕೂಗಿ ಕರೆಯುತ್ತಿರುವುದು ಕೇಳಿಸುತ್ತಿತ್ತು. 'ಬಂದೆ' ಬಂದೆ' ಎಂದು ಯಾವುದೋ ಮನೆಯಿಂದ ಹೊರಬಿದ್ದು ಬರುತ್ತಿದ್ದಳು. ಬಾವಿಗೆ ನೀರು ತರಲು ಹೋದರೂ ಅಷ್ಟೇ. ಮೊದಲು ಯಾರದೊ ಕೊಡಪಾನ ನೀರಿಗೆ ಬಿಡುವುದು, ಹರಟುವುದು ಕೊನೆಗೆ ತನ್ನ ಕೊಡ ನೀರಿಗಿಳಿಸುವುದು. ಮದುವೆಯಾದ ಮೇಲೆ ಅವಳು ಗಂಡನ ಮನೆಯಲ್ಲಿ ರಾಜ್ಯ ನಡೆಸಿದಳು. ಮೊದಲೇ ನಗುಮುಖದವಳು. ಎಲ್ಲರ ಜೊತೆಗೂ ಕೂಡಿಕೊಂಡು ಇರುವವಳು. ಎಲ್ಲ ಕೆಲಸ ನಗುನಗುತ್ತ ಮಾಡುತ್ತಿದ್ದಳು. ಅವಳ ಅತ್ತೆ ನೆರೆಮನೆಯವರಿಗೆ ಹೇಳುತ್ತಿದ್ದಳು. ನಮ್ಮ ಅಂಗಳದಲ್ಲಿ ವರ್ಷವಿಡೀ ಜಾಜಿಯ ಮೊಗ್ಗುಗಳು ಅರಳುತ್ತವೆಯಂತ.

ಕುಂಬಾರಿಕೆಯೊಡನೆ ಅವರಿಗೆ ಸ್ವಲ್ಪ ಜಮೀನೂ ಇತ್ತು. ಬೆಳೆ ಬಂದರೆ ಆರು ತಿಂಗಳು ಊಟಕ್ಕೆ ಸಾಕಾಗುತ್ತಿತ್ತು. ಅದನ್ನು ಉತ್ತು ಬಿತ್ತುವ ಕೆಲಸ ಹೇಗೆ ಹೇಗೊ ನಿರ್ವಹಿಸುತ್ತಿದ್ದರು. ಒಂದೆರಡು ವರ್ಷಗಳಲ್ಲಿ ಮಾವನ ಕಡೆಯಿಂದ ವಿಶ್ರಾಂತಿ ಹೊಲದ ಕೆಲಸ ಕಲಿತುಕೊಂಡಳು. ಈಗ ಮಾವ ಮತ್ತು ಸೊಸೆ ಹೆಚ್ಚಾಗಿ ಹೊಲದಲ್ಲಿ ಕೆಲಸ ಮಾಡುತ್ತಿದ್ದರು. ಮಾವ ಗುದ್ದಲಿ ಹೆಗಲ ಮೇಲೆ ಹಾಕಿಕೊಂಡು ಮುಂದೆ ಹೋಗುವಾಗ ಸೊಸೆಗೆ "ಬರುವಾಗ ದಿಪಳೊ ಅಂದರೆ ಉದ್ದನೆಯ ಕೋಲಿಗೆ ಕಟ್ಟಿದ ಕಟ್ಟಿಗೆಯ ಸುತ್ತಿಗೆ ತಗೊಂಡು ಬಾ ಹೊಲಕ್ಕೆ" ಅನ್ನುತ್ತಿದ್ದ.

ಸದಾನಂದನು ಬಂದು ಅಕ್ಕನಿಗೆ ಅನಂತರ ಭಾವನಿಗೆ 'ನಾನು ಬರೂ ವರ್ಷದಿಂದ ಕಾರವಾರ ಕಾಲೇಜಿಗೆ ಹೋಗಬೇಕಂತ ಮಾಡೇನಿ. ಖರ್ಚಿನ ಮಾರಿ ನೋಡಿ ಅಪ್ಪ ಬ್ಯಾಡಂತಾನ' ಎಂದು ಹೇಳಿದ.

"ಎಷ್ಟು ಖರ್ಚಾಗ್ತದಪ್ಪ?"

"ಯಾರ ಕೂಡ ಹಳಿ ಸೈಕಲ್ ಸಿಕ್ಕರ ಪುಸ್ತಕ, ಫೀ ಎಲ್ಲಾ ಕೂಡಿ ಸುಮಾರ ಎರಡು ಸಾವಿರ ಆಗಬಹುದು"

ಅಕ್ಕ ಕೊಂಚ ಕಸಿವಿಸಿಕೊಂಡು ಗಂಡನತ್ತ ನೋಡಿದಳು. ಬಾವೋಜಿ 'ಕುಂಬಾರರು ಎಷ್ಟು ಗುದ್ದಾಡಿದ್ರೂ ಇನ್ನೂರು ರೂಪಾಯಿ ಕೂಡಿಸಾಕ ಸಾಕುಬೇಕಾಗ್ತದ. ನಿನ್ನ ಅಪ್ಪನಿಗೆ ಹೇಳಿ ನೋಡ್ತೇನಿ" ಅಂದ.

ಅಸನೋಟಿಯ ಕುಂಬಾರರ ಮಡಕೆಗಳಿಗೆ ಬೇಡಿಕೆ ಇರಲಿಲ್ಲ. ಬೇರೆ ಹಳ್ಳಿಯ ಕುಂಬಾರರು ಇವರನ್ನು ನೋಡಿ ಗೇಲಿ ಮಾಡುತ್ತಿದ್ದರು. "ನಿಮ್ಮ ಕೆರ್‍ಯಾಗ ಎಮ್ಮಿ ಬಿದ್ದು ಕೊಂಡಿರ್ತಾವಂತ ನಿಮ್ಮ ಮಣ್ಣು ಸೆಗಣಿಯಾಗ್ಯದ. ಎಲ್ಲಾರ ಮನಿದೋಸಿಗ ತೂತಾದ್ರ ನಿಮ್ಮ ಮನಿ ಕಾವಲಿಗೇ ತೂತ ಬಿದ್ದೈತೆ" ಎನ್ನುತ್ತಿದ್ದರು.

ಎರಡನೆಯ ದಿನ ಅಕ್ಕನ ಮಾವ ಅವನಿಗೆ ಹೇಳಿದ. "ನೋಡತೀನಪ್ಪ, ನನ್ನ ಲಂಗೋಟಿ ದೋಸ್ತ ಒಬ್ಬ ರಾಮೇಶ್ವರ ಸಾಳುಂಕೆ ಸುಭೇದಾರ ಅಂತ ಅದಾನ. ಅಂವಾ ರಿಟೈರಾಗಿ ಮೊನ್ನಿ ಮೊನ್ನಿ ಊರಿಗೆ ಬಂದಾನ. ಕೇಳಿದರ ಕೊಡ್ತಾನ ಒಂದ್ ಸಾವಿರ. ಒಂದೀಟ ರೊಕ್ಕ ನಾ ಹೊಂದಿಸಿ ಕೊಡತೀನಿ. ನೀ ಕಲಿತಿ ಅಂತ ಹೇಳಿದ್ದು ಕೇಳಿ ಭೇಷ್ ಅನ್ನಿಸ್ತು. ನೀ ನಿನ್ನಪ್ಪನಿಗೆ ಬಂದ್ ಹೋಗ್ ಅಂತ ಹೇಳು. ತಲಿ ತಿರಕ ಮನುಷ್ಯಾ ಅಂವಾ. ಮೊದಲು ಅಂವಗ ಹೇಳಾಕಬೇಕು. ನೋಡಪ್ಪ ಕುಂಬಾರರ ಈ ಮಣ್ಣಾಗಿಂದ ಮೇಲೆದ್ದು ಬರೂದು ಭ್ಹಾಳ ಕಠಿಣ ಐತಪ್ಪ. ಕಾಲು ಮೊಣಕಾಲ ಮಟಾ ಮುಳಗ್ಯಾವ."

ಸದಾನಂದ ಮನೆಗೆ ಬಂದೂ ಈ ವಿಷಯ ತಾಯಿಗೆ ತಿಳಿಸಿದ. ಗಂಡ ತಿಗರಿಯ ಬಳಿ ಕುಳಿತು ಗಡಿಗೆ ಮಾಡುತ್ತಿರುವುದನ್ನು ನೋಡಿದ ಹೆಂಡತಿ ಅವನ ಬಳಿ ಹೋಗಿ ಹೇಳಿದಳು. "ಅಂವಾ ಕಲಿಯಾಕ ಹೋಗತೇನಿ ಅಂತ ಗಂಟ ಬಿದ್ದಾನ. ವಿಶ್ರಾಂತಿಯ ಮಾವ ಸಾಲ ಮಾಡಿ ರೊಕ್ಕ ಕೊಡತೀನಿ ಅಂತ ಅಂದಾನಂತ. ನೀವು 'ಹೂಂ' ಅನ್ನಬೇಕಂತೆ"

ಈ ಮಾತು ಕೇಳಿದ ಯಶವಂತ ತಿಗರಿಯ ಚಕ್ರ ಜೋರಾಗಿ ಸುತ್ತಿದ. ಸುತ್ತಿದ ವೇಗಕ್ಕೆ ಕೈಯಲ್ಲಿ ಹಿಡಿದ ಮಣ್ಣು 'ಘರ್' ಅಂತ ಮೇಲೆ ಸಿಡಿಯಿತು. ಅವನು ಸಿಟ್ಟನಿಂದ 'ಈಗ ಸಾಲ ಮಾಡಿ ಮುಂದ ಹ್ಯಾಂಗ ತೀರಿಸ್ತಾನಂತ-ಸಾಲ. ತಂದಿ ಸತ್ತಮ್ಯಾಲ ಎಲಬ ಮಾರಿ ತೀರಿಸ್ತಾನಂತೇನು? ರಂಡಿ, ನಿನಗಾದರೂ ತಿಳೀಬೇಕಾಗಿತ್ತು. ನೆಂಟರ ಮನಿ ಬಾಗಿಲಿಗೆ ಅಂವಾ ಬಿಕ್ಕಿ ಬೇಡಾಕ ಹೋಗಿದ್ದ."

"ನಾಳಿ ಕಲ್ತು ನೌಕರಿಗೆ ಹತ್ತಿದ್ರ ಸಾಲ ತೀರಸ್ತಾನ ಅಂವಾ"

"ಯಾವಾಗ? ಎಷ್ಟು ವರ್ಷದ ಮ್ಯಾಗ. ಕಲ್ತಾನಂತ ಕುಂಬಾರ ಮಂದೀಗ ಯಾರೂ ಕೇಳೂದಿಲ್ಲ. ಕುಂಬಾರರ ಕೈಗೂ ಮಣ್ಣು ಮಾರಿಗೂ ಮಣ್ಣು, ನೀ ನಂಗೇನು ಇನ್ನ ಹೇಳಬ್ಯಾಡ. ಮತ್ತ ಮಾತಾಡಿದರ ತಲಿ ಮ್ಯಾಲ ಪೆಟಣೆ ಬಡಿತೀನಿ"

ಸದಾನಂದ ಇದನ್ನೆಲ್ಲ ಕೇಳುತ್ತ ಮನೆಯ ಪಾವಳಿಯಲ್ಲಿ ನಿಂತಿದ್ದ. ಅವನ ಸಿಟ್ಟು ನೆತ್ತಿಗೇರಿತ್ತು. ಅವನು ಎರಡು ಹೆಜ್ಜೆ ಮುಂದೆ ಬಂದು ದೊಡ್ಡಕೆ ಕೂಗಿ ಹೇಳಿದ 'ಹೊಡ್ಕೊ ಪೆಟ್ನೆ ಮತ್ತು ಗಡಗಿ ನಿನ್ನ ಎದೀಮ್ಯಾಗ. ಆಯುಷ್ಯವಿಡಿ ಗಡಗಿ ಮಾಡೇ ಮಾಡ್ದಿ. ಒಂದು ಅಂಗಿ ಹೊಲಿಸಿಕೊಳ್ಳಾಕ ಆಗಲಿಲ್ಲ. ಒಕ್ಕಲಿಗರ ಹುಡುಗರ ಹತ್ರ ಹೋಗಿ ಪುಸ್ತಕ ಬೇಡಿಕೊಂಡು ಬಂದು ನಾನು ಸಾಲಿ ಕಲ್ತೀನಿ. ಇನ್ಮುಂದೆ ಹ್ಯಾಂಗಾರೂ ಮಾಡಿ ಕಲೀತೀನಿ ಅಂದ್ರೂ ಕಲ್ಲು ಹಾಕ್ತಿದ್ದಿ. ನಾ ಈ ಮನ್ಯಾಗ ಇರೂದಿಲ್ಲ ಇನ್ಮುಂದೆ" ಅಂಗಳದಲ್ಲಿ ನಿನ್ನೆಯಷ್ಟೆ ಭಟ್ಟಿಯಿಂದ ತೆಗೆದ ಗಡಿಗೆಗಳಿದ್ದವು. ಅವನು ಅಲ್ಲಿದ್ದ ಒಂದು ಕೋಲು ಎತ್ತಿಕೊಂಡು ಒಂದೇ ಏಟಿಗೆ ಮೂರು ಮಡಕೆಗಳನ್ನು ಒಡೆದು ಹಾಕಿದ. ಕೋಲು ಅಲ್ಲೇ ಒಗೆದು ಅವನು ಸರಸರ ಹೊರಗೆ ನಡೆದ. ಹೊಳೆ ಮತ್ತು ಮುಖ್ಯ ರಸ್ತೆಯ ನಡುವೆ ಒಂದು ಚಿಕ್ಕ ಗುಡ್ಡವಿತ್ತು. ಅಲ್ಲಿಯ ಆ ಗಿಡಗಂಟಿಗಳಲ್ಲಿ ಅವನು ನುಗ್ಗಿದ, ಕಣ್ಮರೆಯಾದ.

ತಂದೆ ಹಿಂದಿನಿಂದ ಬಯ್ಗಳ ಸುರಿಮಳೆ ಮಾಡುತ್ತಲೇ ಇದ್ದ. ತಾಯಿ ಸದಾನಂದನ ಹಿಂದೆ ಬಂದು ಸ್ವಲ್ಪ ಹೊತ್ತು ನಿಂತು ಮರಳಿ ಹೋದಳು.

ಮುಸ್ಸಂಜೆಯಾಯಿತು. ಕತ್ತಲು ಆವರಿಸಿತು. ಆದರೂ ಅವನು ಬರಲಿಲ್ಲ. ತಾಯಿ ಮನೆಯಲ್ಲಿ ಸೀಮೆಯೆಣ್ಣೆಯ ದೀಪ ಬೆಳಗಿದಳು. ಚಿಕ್ಕ ಮಗನನ್ನು ಮತ್ತು ಧರ್ಮುಣ ಹೆಂಡತಿ ದೇವಕಿಯನ್ನು ಕರೆದುಕೊಂಡು ಆ ಗುಡ್ಡದತ್ತ ಹೋದಳು. ಚಿಮಣಿ ದೀಪ ಆರಬಾರದೆಂದು ಅವಳು ಸೆರಗು ಅಡ್ಡ ಹಿಡಿದು ನಡೆಯುತ್ತಿದ್ದಳು. ನಡೆದು ಬಂದು ಗುಡ್ಡದಂಚಿನಲ್ಲಿ ಕುಳಿತರು. ಅಲ್ಲಿ ಎಷ್ಟು ಹೊತ್ತು ಕುಳಿತರೂ ಒಳಗಿನ ತಳಮಳ ಕಡಮೆಯಾಗದ ಕಾರಣ ಮಗನನ್ನು" ಮಗಾ ಸದಾನಂದ ಬಾರೋ... "ಎಂದು ಚೀರಿ ಕರೆಯುತ್ತಿದ್ದಳು. ಅವಳ ಕೂಗು ಹದ್ದಿನ ಅಳುವಿನಂತೆ ಆ ಗಿಡಗಂಟಿಗಳಲ್ಲಿ ಸೇರಿ ಹೋಯಿತು. ಅಲ್ಲಿ ಆಗ ಬೇರೆ ಬೇರೆ ಕುಂಬಾರರೆಲ್ಲ ಬಂದರು. ಅವರು" ಅಂವಾ ಏನು ರಾತ್ರಿ ಹೊತ್ತಿನ್ಯಾಗ ಗಿಡದ ಬುಡಕ್ಕೆ ಕೂತಿರ್ತಾನೇನು? ಅಂವಾ ಎಲ್ಲಾದರೂ ಹೋಗಿರಬೇಕು. ಶಾಣ್ಯಾ ಅದಾನ ಅವ್ವು ಗುಡ್ಡದಾಗ ಒಯ್ದು ಬಿಟ್ರೂ ಅಂವಾ ಉಪಾಸ ಬೀಳೂದಿಲ್ಲ" ಮನೆಗೆ ಬಂದರೆ ತಂದೆ ಮೌನಿಯಾಗಿ ಕೂತಿದ್ದ. ಅವನೀಗ ಹಣೆ ಬಡಿದುಕೊಂಡು ಅಳುತ್ತಾನೇನೊ ಅನ್ನುವಂತಿತ್ತು.

* * *

ವಿಧವೆಯರು ಮಾಡುವ ಕುತ್ತಿಗೆಯಿಲ್ಲದ ಮಣ್ಣಿನ ಬೇರೆ ಬೇರೆ ಪ್ರಕಾರದ ಪಾತ್ರೆಗಳನ್ನು ಸೀತವ್ವ ಮತ್ತು ಸೀತವ್ವನ ಸೊಸೆ ತಾರಾ ಸೇರಿ ಮಾಡುತ್ತಿದ್ದರು. ಯಾರಾದರೂ ಭಟ್ಟಿ ಹಾಕುವುದನ್ನು ನೋಡಿದರೆ ಆ ಭಟ್ಟಿಯಲ್ಲಿ ತಾವು ಮಾಡಿದ ಕಂಠವಿಲ್ಲದ ಪಾತ್ರೆಗಳನ್ನು ತುಂಬುತ್ತಿದ್ದರು. ರೂಢಿಯಿಂದ ಈ ಕ್ರಮ ನಡೆದು ಬಂದಿತ್ತು. ಯಾರೂ ಇಲ್ಲ ಎಂದು ಸಿಡಿಮಿಡಿ ಮಾಡುತ್ತಿರಲಿಲ್ಲ.

ವಿಧವೆಯರು ಮಾಡುವ ಪಾತ್ರೆಗಳನ್ನು ಮುತ್ತೈದೆಯರು ಮಾಡುತ್ತಿರಲಿಲ್ಲ. ಬೇರೆ ಕುಂಬಾರರೂ ಮಾಡುತ್ತಿರಲಿಲ್ಲ. ವಿಧವೆಯರು ಮಾಡುವ ಪಾತ್ರೆಗಳನ್ನು ಸುಡಲು ತಮ್ಮ ಭಟ್ಟಿಯಲ್ಲಿ ಅವಕಾಶ ಮಾಡಿಕೊಡುವುದು ಪರಂಪರೆಯಿಂದ ನಡೆದು ಬಂದಿತ್ತು. ಯಾರೂ ತಕರಾರು ಮಾಡುತ್ತಿರಲಿಲ್ಲ. ಎಲ್ಲರೂ ಆ ನಿಯಮ ನಿಷ್ಠೆಯಿಂದ ಪಾಲಿಸುತ್ತಿದ್ದರು.

ಸೀತವ್ವನ ಸೊಸೆ ತಾವು ಮಾಡಿದ ಪಾತ್ರೆಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು ಮಾರಾಟಕ್ಕೆ ಹೋಗುತ್ತಿದ್ದಳು. ಒಂದು ದಿನ ಬಿಟ್ಟು ಒಂದು ದಿನ ಹೋದರೂ ದಿನದಿನಕ್ಕೆ ಮಾರಾಟ ಕುಸಿಯುತ್ತ ಹೋಗಿತ್ತು. ಒಂದು ಬುಟ್ಟಿ ತುಂಬಿಕೊಂಡು ಹೋದರೆ ಅರ್ಧ ಬುಟ್ಟಿಯೂ ಖರ್ಚಾಗುತ್ತಿರಲಿಲ್ಲ. ತಾರಾ ಬುಟ್ಟಿ ತಂದು ಸಟಕ್ಕಂತ ಜಗಲಿಯ ಮೇಲೆ ಜಪ್ಪುತ್ತಿದ್ದಳು. ಅತ್ತೆ ಕೇಳಿದರೆ "ನಿನ್ನ ಮಣ್ಣಿನ ಪಾತ್ರೆ ಯಾರಿಗ ಬೇಕಾಗ್ಯದ? ಮನಿ ಮನಿಯಾಗ ಕಬ್ಬಿಣದ, ಅಲ್ಯುಮಿನಿಯಂ ತವೆಗಳು ಬಂದಾವ. ಮಂದಿ ಹೇಳುತ್ತಾರೆ ಪಾತ್ರೆಯ ಕೂಡ ಮುಚ್ಚಳಾನೂ ಸಿಗತೈತಿ" ಎಂದು ಸಿಡಿಮಿಡಿಕೆಯಿಂದ ಹೇಳುತ್ತಿದ್ದಳು.

ಮೊದಲು ಮಡಕೆಗಳ ಜೊತೆಗೆ ಮುಚ್ಚಳ ಮಾರುತ್ತಿರಲಿಲ್ಲ. ಬೇರೆ ಬೇರೆ ಬಗೆಯ ಮಡಕೆಗಳನ್ನು ಕುಂಬಾರರಿಂದ ತೆಗೆದುಕೊಂಡರೂ ಕತ್ತಿಲ್ಲದ ಮಣ್ಣಿನ ಪಾತ್ರೆಗಳನ್ನು ವಿಧವೆಯರಿಂದಲೇ ಕೊಂಡುಕೊಳ್ಳುತ್ತಿದ್ದರು. ಈಗ ಸ್ಟೀಲ ಪಾತ್ರೆಗಳು ಬಂದ ಬಳಿಕ ಎಲ್ಲವನ್ನು ಒಬ್ಬನೇ ವ್ಯಾಪಾರಿ ಮಾರುತ್ತಾನೆ. ಅದರಿಂದ ವಿಧವೆಯರ ಗಡಿಗೆ ವ್ಯಾಪಾರಕ್ಕೆ ಕುತ್ತು ಬಂದಿತ್ತು.

ಅವಳಿಗೆ ತನ್ನ ನಂತರ ಮೊಮ್ಮಕ್ಕಳು ಏನು ಮಾಡಬೇಕು, ಅವರ ಜೀವನೋಪಾಯ ಹೇಗೆ ಸಾಗಬೇಕು ಎಂದು ಚಿಂತೆ ಕಾಡುತಿತ್ತು. ತಾರಾಳಿಂದಂತೂ ಹೊಲಗದ್ದೆಗಳಲ್ಲಿ ಬೆನ್ನು ಬಗ್ಗಿಸಿ ಕೆಲಸ ಮಾಡುವುದು ಸಾಧ್ಯವಿಲ್ಲ.

ಒಂದು ದಿನ ಮೊಮ್ಮಗನಿಗೆ ಕಹಿ ಕಡ್ಡಿಗಳನ್ನು ತರಲು ಗೋಪಾಳನ ಮನೆಯ ಹಿಂದೆ ಹೋಗಿದ್ದಳು. ಅಲ್ಲಿ ಸುಮಾರು ಹತ್ತಿಪ್ಪತ್ತು ಕತ್ತಿಲ್ಲದ ಮಣ್ಣಿನ ಪಾತ್ರೆಗಳನ್ನು ಒಣಗಲು ಇಟ್ಟಿದ್ದರು. ಅವಳಿಗೆ ಕೊಂಚ ಇರುಸುಮುರುಸಾಯಿತು. ಗೋಪಾಳನ ಮನೆಯಲ್ಲಿ ಯಾರು ವಿಧವೆಯಿದ್ದಾರೆ? ಗೋಪಾಳನಂತೂ ಇನ್ನು ಸಾಯಲಿಕ್ಕಿದ್ದಾನೆ. ಅವಳು ಕಿಡಿಕಿಡಿಯಾದಳು ವಿಧವೆಯರು ಮಾಡುವ ಕೆಲಸ ಕುಂಬಾರರೂ ಕೈಗೆತ್ತಿಕೊಂಡರೆ ಗಂಡ ಸತ್ತವರು ಹೊಟ್ಟೆ ಹೊರೆಯುವುದು ಹೇಗೆ? ಅಲ್ಲಿಂದ ಅವಳು ಶಾಪ ಹಾಕುತ್ತಲೇ ಅವನ ಮನೆಯ ಮುಂದೆ ಬಂದು ನಿಂತಳು. "ಗೋಪಾಳ, ನಿನ್ನ ಮನ್ಯಾಗ ಯಾರು ಗಂಡು ಮಗ ಸತ್ತು ಅವನ ಹೆಂಡತಿ ರಂಡಿಯಾಗಿದ್ದಾಳಪ್ಪ? ಗತಿಗೆಟ್ಟ ಗಂಡಮಕ್ಕಳು, ಗಂಡನ್ನ ತಿನ್ನೂ ಹೆಣ್ಣಮಕ್ಕಳು ಗಂಡ ಸತ್ತಾವರು ಮಾಡೂ ಮಣ್ಣಿನ ಪಾತ್ರಿ ಪಡಗ ಮಾಡಾಕ ಹತ್ಯಾರ?" ಗೋಪಾಳ ಬೆಂ, ಬೆಂ... ಮಾಡಿ ಏನೋ ಹೇಳಲು ತೊದಲುತ್ತಿದ್ದ ಅವನ ಬಾಯಿಯಿಂದ ಶಬ್ದಗಳು ಹೊರಬೀಳುತ್ತಿರಲಿಲ್ಲ. ಅವನ ಹೆಂಡತಿ ಬಾಯಿ ಹಾಕಲು ಬಾಗಿಲಲ್ಲಿ ಭದ್ರಕಾಳಿಯಂತೆ ನಿಂತಿದ್ದಳು. ಸೀತವ್ವ ನೇರವಾಗಿ ಹೋಗಿ ಹಿರಿಯ ಸೊಯರೂನನ್ನು ಕರೆದುಕೊಂಡು ಬಂದಳು. ಬರುವಾಗ ಅವಳು ಗೋಪಾಳನ ಮನೆಯ ಹಿಂದೆ ಒಣಹಾಕಿದ ಕತ್ತಿಲ್ಲದ ಪಾತ್ರೆಗಳನ್ನು ತೋರಿಸಿದಳು. "ಇಷ್ಟು ದಿನ ಕುತ್ತಿಗೆಯಿಲ್ಲದ ಮಣ್ಣಿನ ಪಾತ್ರೆಗಳನ್ನು ಗಂಡ ಸತ್ತಾವರ ಮಾಡ್‌ತಿದ್ದರು. ಈಗ ಮುತ್ತೈದ್ಯಾರು, ಗಂಡಶರು ಮಾಡಾಕ ಹತ್ತಿದ್ರ ನಾವೇನು ಬಾಯಾಗ ಮಣ್ಣಾಕಿಕೊಂಡ ಮಲಗಿರಬೇಕೇನು. ನಾವೇನು ತಿನ್ನಬೇಕು, ಉಣ್ಣಬೇಕು?"

ಸೊಯರೂಗೆ ತುಂಬ ವಯಸ್ಸಾಗಿತ್ತು. ಸೀತವ್ವನನ್ನು ಮದುವೆ ಮಾಡಿ ಊರಿಗೆ ತಂದಾಗ ಅವನಿಗೆ ಸಾಕಷ್ಟು ವಯಸ್ಸಾಗಿತ್ತು ಆಗ ಅವನ ಮದುವೆಯಾಗಿ ಮಕ್ಕಳು ದೊಡ್ಡವರಾಗಿದ್ದರು. ಲಂಗೋಟಿ ಉಟ್ಟು, ದಪ್ಪ ಗ್ಲಾಸಿನ ಕನ್ನಡಕ ಹಾಕಿಕೊಂಡು ಅವನು ತನ್ನ ಮನೆಯ ಜಗಲಿಯ ಮೇಲೆ ಇಲ್ಲವೆ ಗಿಡದಡಿಯಲ್ಲಿ ತೆಪ್ಪಗೆ ಕೂತಿರುತ್ತಿದ್ದ. ಕೆಲವೊಮ್ಮೆ ಆವಿಗೆಯ ಬಳಿ ಕುಳಿತು ಮೈ ಬೆಚ್ಚಗೆ ಮಾಡಿಕೊಳ್ಳುತ್ತಿದ್ದ. ಕುಂಬಾರ ಕೇರಿಯಲ್ಲಿ ದಿನವಿಡೀ ಮಡಕೆಯ ಕೆಲಸ ಮಾಡುತ್ತ ಒಂದೇ ಕಡೆ ಕುಳಿತು ಕುಳಿತು ಅವರ ಬೆನ್ನ ಹುರಿ ಸೊಂಟದಲ್ಲಿ ಹೂತು ಹೋಗುತ್ತಿತ್ತು. ಸರಿಯಾಗಿ ಹೊಟ್ಟೆಗಿಲ್ಲದೆ, ಕಾಯಿಲೆ ಬಿದ್ದರೆ ಚಿಕಿತ್ಸೆಗೆ ಹಣವಿಲ್ಲದೆ ವಯಸ್ಸಾದವರು ಹೆಚ್ಚು ದಿನ ತಡೆಯುತ್ತಿರಲಿಲ್ಲ. ಗೋಪಾಳನ ಅಂಗಳದಲ್ಲಿ ನಿಂತು ಸೊಯರೂ ಹೇಳಿದ "ಇದಲ್ಲಪ್ಪ ..ಇದು ಬರಾಬರಿ ಅಲ್ಲ ಕೆಟ್ಟ ಕೆಲಸ. ಕುಂಬಾರರಿಗೆ ಕೆಟ್ಟ ಹೆಸ್ರು ತರ್ತೀಯಪ್ಪ. ನಮ್ಮ ಹಿಂದಿನವರ ದಾರಿ ಬಿಟ್ಟು ಹ್ವಾದರ ಮನುಷ್ಯರನ್ನೊದಿಲ್ಲ."

ಸೀತವ್ವ ಮಧ್ಯೆ ಬಾಯಿ ಹಾಕಿದಳು. 'ಸ್ವಾರ್ಥದ ಮುಂದೆ ಶಾಸ್ತ್ರ ಸುಟ್ಟ ತಿಂದಾರ. ಹಿಂಗ ಮಾಡಿದ್ರ ಮನಿ ಹಾಳಾಗಿ ಹೋಗತ್ಯೆತಿ ಅಂತ ಗೊತ್ತಿಲ್ಲ ಅಂವಗ"

ಗೋಪಾಳನ ಕಿರಿಯ ಸೋದರ ವಿಶ್ರಾಮ ಅಂಗಳದ ಮೂಲೆಯಲ್ಲಿ ಕುಳಿತು ಮಣ್ಣು ಕಲಿಸುತ್ತಿದ್ದ. ಅವನು ಆ ಮಣ್ಣಿನ ರಾಶಿಯನ್ನು ಅಲ್ಲೇ ಬಿಟ್ಟು ಗುಡುಗುತ್ತ ಬಂದ 'ಭ್ಹಾಳ ಹೊತ್ತಾತು ನೋಡಾಕ್ ಹತ್ತೇನಿ ಸೀತವ್ವವ್ವ ನೀ ಶಾಪ ಹಾಕೂದು. ಎಲ್ಲೀ ಶಾಸ್ತ್ರ ಹೇಳತಿ ನೀನು ಪುರಾಣದ ಬದನಿಕಾಯಿ ಮಂದೀಗ ಈಗ ಗಡಗಿಯ ಕೂಡ ಅಗಲ ಬಾಯಿ ಮುಚ್ಚಳ, ಗಂಗಾಳ, ಅಗಲವಾದ ತವೆಯೆಲ್ಲ ಬೇಕಾಗತ್ತೈತಿ. ಅವರು ನಮ್ಮ ಕಡಿ ಗಡಗಿ ತಗೊಂಡು ಮುಚ್ಚಳಕ್ಕಾಗಿ ನಿಮಗ ಕಾಯಕೊಂತಾ ಕೂಡಾಕ ಅವರಿಗೇನ ಬ್ಯಾರಿ ಹ್ವಾರೆ ಇಲ್ಲೇನು? ನೀವ್ ಬರ್ತೀರಂತ ಕೂಡಾಕ ಅವರಿಗೆ ವ್ಯಾಳೆ ಇಲ್ಲ. ನಿಮಗಾಗಿ ಯಾಕ ಕಾಯಬೇಕು ಮಂದಿ? ಇಗ ಕಾಲ ಬದಲಾಗ್ಯದ. ಈಗ ಎಲ್ಲಾ ಕಡೀನೂ ಬೆಂಕಿ ಬಿದ್ದ್ಯದ. ಹೊಟ್ಟೆ ತುಂಬಿದ ಮ್ಯಾಲ ನೀತಿ-ನೇಮ ಶಾಸ್ತ್ರ ಪುರಾಣ, ಇಲ್ಲದಿದ್ರ ಎಲ್ಲಾ ಬೆಂಕ್ಯಾಗ ಹಾಕೂದ".

"ಹೊಟ್ಟೆ ತುಂಬಬೇಕು ಅಂತ ಯಾರೂ ಹೇಲು ತಿನ್ನೂದಿಲ್ಲ"

"ನಿಮ್ಮ ಬಾಯಾಗ ಬಿದ್ದೈತಲ್ಲ ಅದು. ಅದಕ್ಕೆ ನೀವು ಜಗಳಾಡ್ತೀರಲ್ಲ ಅತ್ತಿ ಸೊಸಿ"

ಸೀತವ್ವನ ಮರ್ಮಕ್ಕೆ ಈ ಮಾತು ನಾಟಿತು. ಅವಳು ಬಯ್ಗಳ ಸುರಿಮಳೆ ಮಾಡಿದಳು. ಈಗ ಅವರಿಬ್ಬರಲ್ಲಿ ಜಂಗಿ ಜಗಳ ನಡೆದಿತ್ತು. ಗೋಪಾಳ ಮತ್ತು ಅವನ ಹೆಂಡತಿ ಮುಂದೆ ಕೈಯಾಡಿಸುತ್ತ ಶಾಪ ಹಾಕುತ್ತಿದ್ದರು. ಅವರ ಶಾಪದ ಅಗ್ನಿ ವರ್ಷದಲ್ಲಿ ಕೂಗಾಟದಲ್ಲಿ ಕುಂಬಾರ ಕೇರಿ ಗಡಗಡಿಸುತಿತ್ತು ಎಲ್ಲರಿಗೂ ಸೀತವ್ವ ಒಬ್ಬಳೇ ಉತ್ತರಿಸುತ್ತಿದ್ದಳು.ಅವಳ ಸೊಸೆ ಆಗಾಗ್ಗೆ ಅತ್ತೆಯ ಮಾತಿಗೆ ದನಿಗೂಡಿಸುತ್ತಿದ್ದಳು. ಆಗ ಅವಳಿಗೂ ಬಯ್ಗಳು ಬೀಳುತ್ತಿದ್ದವು.

ಈಗ ಪುರಸೊ, ಶಿವರಾಮ ಮುಂದೆ ಬಂದರು. ಅವರು ಜನರನ್ನು ಚದುರುವಂತೆ ಮಾಡಿದರು. ಗೋಪಾಳ ಮತ್ತು ಅವನ ಹೆಂಡತಿಯನ್ನು ಮನೆಯೊಳಗೆ ತಳ್ಳಿದರು. ಅವರು ಸೀತವ್ವನಿಗೆ ಹೇಳಿದರು "ಸೀತವ್ವ ನೀ ಸುಮ್ಕ ಜಗಳಾಡ್ತಿ, ಮೈಯಾಗಿನ ನೆತ್ತರ ಒಣಗಿಸ್ತಿ, ಈಗ ಕಾಲ ಬದಲಾಗ್ಯದ. ಏನ್ ಮಾಡಾಕೂ ಆಗೂದಿಲ್ಲ, ಸ್ಟೀಲಿನ, ಪ್ಲ್ಯಾಸ್ಟಿಕ್ಕಿನ ಪಾತ್ರೆಗಳು ಬಂದಾವ. ಮಣ್ಣಿನ ಪಾತ್ರೆ ಯಾರವ್ವ ಕೇಳ್ತಾರ? ಮಂದಿ ಮಣ್ಣಿನ ಪಾತ್ರೆ ಬಿಟ್ಟು ಬಿಟ್ರು, ನಾವೇನು ಮಾಡಾಕ ಬರ್ತದ? ಹಿಡಕೊಂಡ್ರೂ ಸಾವು, ಬಿಟ್ರೂ ಸಾವು"

ಈಗ ಅಂಗಳದ ಕೊನೆಯಲ್ಲಿ ನಿಂತ ಮಂದಿಯೂ ಅದನ್ನೇ ಮಾತಾಡುತ್ತಿದ್ದರು. ಈ ಕುಂಬಾರಿಕೆಯಲ್ಲಿ ಯಾವ ಪ್ರಯೋಜನವೂ ಇಲ್ಲ. ಹೇಗಾದರೂ ಮಾಡಿ ಹೊಟ್ಟೆ ಹೊರೆಯುವುದಷ್ಟೇ ಈಗಿರುವ ಕೆಲಸ. ಈಗ ಹಿಂದಿನದನ್ನೆ ಹಿಡಿದುಕೊಂಡು ಕುಳಿತರೆ ಹೇಗಾದೀತು? ಜಗತ್ತು ಈಗ ಎಲ್ಲಿ ಮುಟ್ಟಿದೆ. ಈಗ ಹಿಂದಿನದೆಲ್ಲ ಬಿಟ್ಟು ಬಿಡುವುದು.

ಅವರು ಮಾತಾಡುತಿದ್ದುದು ಸೀತವ್ವನ ಕಿವಿಯಮೇಲೆ ಬಿತ್ತು. "ಏನು ಬಿಡೂದು? ನಾಳಿ ನಾವು ಗಂಡಸತ್ತ ಹೆಣ್ಣ ಮಕ್ಕಳು ತಿಗರಿ ತಿರುಗಿಸಿ ನೀವ್ ಮಾಡೂ ಗಡಗಿ, ಹಂಡಿ ನಾವ್ ಮಾಡಿದ್ರ ಸುಮ್ಕಿರ್ತೀರೇನು? ಕಲ್ಲಾಗ ಹೊಡೀದೆ ಬಿಡ್ತೀರೇನು ಈ ರಂಡೇರು ನಮ್ಮ ಹೊಟ್ಟೆ ಮ್ಯಾಗ ಹೊಡದ್ರು ಅನ್ನೂದಿಲ್ಲೇನು?"

ಪುರುಶ್ಯಾ ಎಲ್ಲ ಕುಂಬಾರರ ಪರವಾಗಿ ದನಿಯೆತ್ತರಿಸಿ ಹೇಳಿದ "ನಿಮಗ ಯಾರು ಬ್ಯಾಡಾಂತಾರ. ನಿಮಗ ಯಾರು ತಡದಾರ? ಇನ್ಮುಂದೆ ಯಾರು ಬೇಕಾದ್ರೂ ಹ್ಯಾಂಗ

ೇಕಾದ್ರೂ ನಡಕೋಬಹುದು. ಇನ್ನ ಯಾರು ಏನ್ ಮಾಡಿದ್ರೂ ಮಾತಾಡುಹಂಗಿಲ್ಲ. ಯಾರಿಗೆ ಬೇಕಾಗ್ಯೆತೆ ಮಾತಾಡೂದು."

ಈ ಮಾತು ಸೀತವ್ವನ ಹೃದಯಕ್ಕೆ ತಾಗಿತು. ಅವಳು ಸಿಡಿಮಿಡಿಗೊಂಡಳು. ವಾಡೆಯ ವಜ್ಜೆ ನನ್ನ ತಲೀಮ್ಯಾಗ ಐತಿ ಅಂತ ನಾ ತಿಳ್ಕೊಂಡಿದ್ದೆ.' ಮತ್ತ ಊರಿನ ಮಂದೀನೂ ಸೀತವ್ವನ ಮಾತಿಗೆ ಬೆಲೆ ಕೊಡತಿತ್ತು. ಮತ್ತ ಈಗ ಹೇಗೆ ಇಂಥ ಮಾತು ಎಂತು. ಕಾಲಕ್ಕೆ ತಕ್ಕಹಾಗೆ ಮುಳ್ಳು ಬಿಡಲು ಶುರುವಾದದ್ದು ನಿಜ. ಅವಳು ಮನೆಗೆ ಹೋಗಿ ಕಂಬಳಿ ಹೊದೆದುಕೊಂಡು ಮೌನವಾಗಿ ಕುಳಿತಳು. ಜನರ ಜಗಳದಲ್ಲಿನ ಪ್ರತಿಯೊಂದು ಮಾತು ನಾಯಿಯ ಹಲ್ಲಿನಂತೆ ಬೊಗಳುತ್ತ ಮೈಗೆ ಚುಚ್ಚುತ್ತಿದ್ದವು.

ಸೊಸೆ ಅಡಿಗೆಯ ಮನೆಯಲ್ಲಿ ಕೆಲಸ ಮಾಡುತ್ತಿದ್ದಳು. ಅವಳ ಪಾತ್ರೆಗಳ ಸದ್ದೂ ಅವಳಿಂದ ಸಹಿಸಲು ಆಗುತ್ತಿರಲಿಲ್ಲ. ನಡುವೆಯೇ ಅವಳು ಸೊಸೆಯ ಮೇಲೆ ಸಿಡುಕಿದಳು ಅಲ್ಲಿ ಹುಡುಗರಾದವಲ್ಲ ನಿಂಗೆ-ಗಂಡನಿಂದ ಈಗ ತಿಗರಿಯ ಮ್ಯಾಲ ಗಡಗಿ ಮಾಡಾಕ ಹೊಂಟಿಯಲ್ಲ ಸುರುಪುರು ಮಾಡ್ತಾ ಮಾಡ್ ಹೋಗು ಗಡಗಿ.. ನಮಗ ಈಗ ಯಾರೂ ಕೇಳೂ ಹಂಗಿಲ್ಲ"

ಅದನ್ನು ಕೇಳಿ ಸೊಸೆ ಕೊಂಚ ಗಲಿಬಿಲಿಗೊಂಡಳು ಅತ್ತೆ ಅದು ಹೇಗೆ ಭ್ರಮಿಷ್ಠರಂತೆ ಮಾತಾಡಿದಳು ಎಂದು ಅವಳು ಸ್ವಲ್ಪ ಅಸ್ವಸ್ಥಳಾದಳು. "...ನಿನಗೆ ಹುಚ್ಚು ಹಿಡಿದೀತವ್ವ

ಈಗ ಊರಿನ ಸುದ್ದಿ ಬಿಟ್ಟು ಬಿಡು. ಶಾಸ್ತ್ರಕ್ಕೆ ಹಾಕು ಬೆಂಕಿ. ಯಾರ ಮನ್ಯಾಗ ಯಾರ ಮೈ ಬೆಚ್ಚಗಾದ್ರೂ, ಹೊಟ್ಟೆನೋವು ಅಂತಂದರೂ ರಾತ್ರಿ ಅಪರಾತ್ರಿ ಅಂತ ನೋಡದೆ ಓಡಿಹೋಗ್ತಿದ್ದಿ ನೀನು. ಇನ್ನ ನಿನಗ ಈ ಮನ್ಯಾಗಿಂದ ಕಾಲು ಹೊರಗಿಡಾಕ ಕೊಡೂದಿಲ್ಲ ನಾನು."

ರಾತ್ರಿಯಿಡೀ ಅವಳು ಒಂದು ತುಂಡುಚಾಪೆಯ ಮೇಲೆ ಹೊರಕೋಣೆಯಲ್ಲಿ ಮಲಗಿದ್ದಳು. ಕೆರೆಗೆ ಒಡ್ಡು ಕಟ್ಟಿದಾಗ ನೀರು ತುಂಬಿ ಬಂದಾಗ ಕುಂಬಾರರಿಗೆ ಸಾಯಲು ನಿಮಿತ್ತವಾದರೂ ಸಿಕ್ಕೀತು ಎಂದು ಅವಳು ತಳಮಳಿಸುತ್ತ ಚಿಂತಿಸುತ್ತಿದ್ದಳು. ಅದಕ್ಕೂ ಮೊದಲು ಈ ಬದುಕು ಕಠಣವಾಗಿದೆ ಜನರ ಬದುಕಿಗೆ ಅದು ಹೇಗೆ ಹಲ್ಲು ಮೂಡಿವೇ! ಆದರೂ ನಾನನ್ನುತ್ತಿದ್ದೆ ಈ ಮಾವಿನ ಮರಕ್ಕೆ ಇಷ್ಟೇಕೆ ಗೂಬೆಗಳು, ಮುತ್ತಿಕೊಳ್ಳುತ್ತಿವೆ ಯೆಂದು. ಕುಂಬಾರರು ಯಾರದ್ದು ಕೆಡಕು ಮಾಡಿದ್ದಾರೆ ಎಂದರೂ ಮಣ್ಣಿನೊಡನೆ ಹುಳಹುಪ್ಪಡಿ ಸುಟ್ಟು ಹೋಗಿರಬೇಕು. ಇಲ್ಲದಿದ್ದರೆ ಕುಂಬಾರರ ಜೀವಿತ ಬಿಸಿಲಿನಲ್ಲಿ ಬಾವಿಯ ನೀರಿನ ತಳ ಕಾಣುವಷ್ಟು ಶುಭ್ರ, ನಿಷ್ಕಳಂಕ ಜೀವನ. ಕಳಿತ ಮಾವಿನ ಹಣ್ಣಿಗಿಂತ ಅಳಿಲು ತಿಂದು ಕೆಡವಿದ ಹಣ್ಣು ಸಿಹಿಯೆಂದು ತಿನ್ನುವವರು. ಹೇಗಾಯಿತು ಈ ನೀರು ಇಷ್ಟು ರಾಡಿ. ಒಳ್ಳೆಯದಕ್ಕೆ ಕಾಲವಿಲ್ಲ ಅಂತಾರಲ್ಲ ಸುಳ್ಳಲ್ಲ.... ಅದು ಅರ್ಧನಿದ್ರೆಯಲ್ಲಿ ಬರುವ ಮಂಪರಿನಂತೆ, ನೆನಪುಗಳು ಹಿಂದೆ- ಹಿಂದೆ, ದೂರ ಸಾಗಿರುತ್ತವೆ. ನಾನು ಮತ್ತು ಶಿವರಾಮನ ತಾಯಿ ಗೌರಿ-ಪಾಪ ಅವಳು ಸತ್ತು ಹೋದಳು-ನಾನು ಮತ್ತು ಅವಳು ತಲೆಯ ಮೇಲೆ ಹೆಡಿಗೆಯನ್ನಿಟ್ಟುಕೊಂಡು ಕಾಡಿನ ದಾರಿಯಲ್ಲಿ ದೇವಗಾಳಿಗೆ ಹೋಗುತ್ತಿದ್ದೆವು. ಹೋಗುವ ದಾರಿಯಲ್ಲಿ ಆಕಸ್ಮಿಕ ಜೇನುನೊಣಗಳ ಗುಂಪು 'ಗುಂಯ್'

ಎಂಬ ಸದ್ದಿನೊಂದುಗೆ ಮುಂದೆ ಬಂದಿತು. ನಾವು ತಲೆಯೆತ್ತಿ ನೋಡಿದೆವು. ಮರದ ಮೇಲೊಂದು ಕರಡಿ ಜೇನುಗೂಡಿನಿಂದ ಜೇನು ಹೀರುತ್ತ ಕುಳಿತಿದೆ. ತಲೆಯ ಮೇಲಿದೆ ಕರಡಿ. ಅದರಲ್ಲೂ ಅಟ್ಟಿಸಿಕೊಂಡು ಬರುವ ಜೇನ್ನೊಣಗಳು. ನಾವು ಓಡಿದ್ದೇ ಓಡಿದ್ದು ತಲೆಯ ಮೇಲೆ ಭಾರವಾದ ಹೆಡಿಗೆ ಜೇನ್ನೊಣಗಳು ಬೆನ್ನು ಬಿಡುವುದಿಲ್ಲ. ಹೆಡಿಗೆಗಳನ್ನು ಮೊಣಕಾಲ ಮೇಲೆ ನಿಧಾನವಾಗಿ ಇಳಿಸಿ ನೆಲದ ಮೇಲಿಟ್ಟೆವು.ಉಟ್ಟ ಸೀರೆಯನ್ನು ಬಿಚ್ಚಿ ಮೈಮೇಲೆ ಪೂರ್ತಿ ಹೊದ್ದುಕೊಂಡು ನೆಲದ ಮೇಲೆ ಬಿದ್ದುಕೊಂಡೆವು. ಆಗಿನಿಂದ ಜೇನ್ನೊಣಗಳ ಕನಸು ಬೀಳುತ್ತಿದೆ... ಅವಳು ಮಡಕಿ ಉದ್ರಿ ಕೇಳಿದಳು. ನಾವು ಕೊಟ್ಟೆವು... ಕೊಟ್ಟು ಸ್ವಲ್ಪ ಮುಂದಡಿಯಿಡುವಷ್ಟರಲ್ಲಿ ಅವಳು ಮತ್ತೆ ಕರೆಯುತ್ತಾಳೆ. ನಾನು ಹೋಗಿ 'ಏನವ್ವ' ಅಂತ ಕೇಳಿದೆ. ಅದಕ್ಕೆ ಅವಳೆಂದಳು 'ನೀವು ಕುಂಬಾರರು ಉದ್ರಿ ಕೊಡುವುದಿಲ್ವಂತೆ. ಹಣ ಕೊಡುವುದರಲ್ಲಿ ಹಿಂದೆ ಮುಂದಾದರೆ, ಮಾತಿಗೆ ತಪ್ಪಿದರೆ ಶಾಪ ಕೊಡುತ್ತೀರಂತೆ." ನಾನು ನಕ್ಕೆ, ಅವಳು ಒಳಗೆ ಹೋಗಿ ಎರಡು ಪಡಿ ಅಕ್ಕಿ ತಂದು ನನ್ನ ಕೈ ಚೀಲದಲ್ಲಿ ಹಾಕಿದಳು. ಅವಳು ಅಂದಳು 'ಸಂಜೆ ಅಡಿಗೆಗೇಂತ ಇಟ್ಟಿದ್ದೆ'

ಈಗ ಬದುಕಿಗೆ ವಿಧಿಯ ಶಾಪ ಅಂಟಿದೆ ಯಾರೇ ಮಡಕೆ ಬೇಕು ಅಂತ ಬಂದರೆ ಎಲ್ಲರೂ 'ನನ್ನದು ತಗೊ' ಎಂದ ಸೀರೆ ಉಡುವ ಹೆಂಗಸರನ್ನು ನೋಡಿ ನಗುತ್ತಾರೆ. ಅಗಲ ಬಾಯಿಯ ಪಾತ್ರೆ ಮಾಡಿ ನಮ್ಮ ಹೊಟ್ಟೆಯ ಮೇಲೆ ಕಾಲಿಡುತ್ತಾರೆ. ಕೊನೆಗೆ ಅವಳೊಂದು ನಿಷ್ಠುರ ನಿರ್ಣಯಕ್ಕೆ ಬಂದಳು.

ಅವಳಿಗೆ ಯಾವಾಗ ನಿದ್ದೆ ಬಂತೊ ಗೊತ್ತಾಗಲಿಲ್ಲ. ನಿದ್ದೆ ಬಿದ್ದರೆ ಸಾಕು ಸ್ವಪ್ನಗಳ ಹಾವಳಿ... ಒಂದು ದೊಡ್ಡ ದೊಡ್ಡದಾದ ತಿಗರಿ-ಅದರ ನಡುವಣ ಸುತ್ತು ಬೀಸುವ ಕಲ್ಲಿನಷ್ಟು ಅದು ಜೋರು ಜೋರಾಗಿ ಸುತ್ತುತ್ತಿರುತ್ತದೆ. ಅದರ ಸುತ್ತುವಿಕೆಯಲ್ಲಿ ಕೇರಿಯ ಪೂರ್ತಿ ಪ್ರದೇಶ ಸೇರಿಕೊಂಡಿದೆ, ತಂದೆ ಅದರ ಮೇಲೆ ಬಗೆಬಗೆಯ ಪಾತ್ರೆ ತಯಾರಿಸು ತ್ತಿದ್ದಾನೆ. ಮಧ್ಯೆ ಮಣ್ಣಿನ ದೊಡ್ಡ ಮುದ್ದೆಯಿದೆ, ಯಾರದೊ ಕತ್ತು ಹಿಚುಕಿದಂತೆ ತಂದೆ ಮಣ್ಣನ್ನು ಒತ್ತಿ ಒತ್ತಿ ಪಾತ್ರೆ ಹೊರ ತೆಗೆಯುತ್ತಿದ್ದಾನೆ ತಿಗರಿಯಿಂದ. ನೂರಾರು – ಸಾವಿರಾರು ಪಾತ್ರೆಗಳು ಅವೆಲ್ಲ ಮಣ್ಣಿನಲ್ಲಿ ಹೂತಿಟ್ಟಂತೆ ಕಾಣುತ್ತವೆ. ನಗುಮುಖದ ಮುಖಗಳು ತಂದೆ ಮನೆಯಷ್ಟು ದೊಡ್ಡದಾದ ಹೆಡಿಗೆಯಲ್ಲಿ ಅವುಗಳನ್ನೆಲ್ಲ ತುಂಬಿ ಕೊಂಡು ಮರ ನಡೆದಂತೆ ಕಾಲು ಹಾಕುತ್ತಾನೆ... ಆಗ ಅವಳು ಥಟ್ಟನೆ ಮುಂದೆ ಬರುತ್ತಾಳೆ... ಸುಸ್ತಾಗಿ ಬಂದ್ ಬಿದ್ದ ತಿಗರಿಯನ್ನು ಅವಳು ತಿರುಗಿಸುತ್ತಾಳೆ, ಅದು ಗರಗರನೆ ತಿರುಗತೊಡಗುತ್ತದೆ ಅನಂತರ ಪಕ್ಕದ ಮಣ್ಣಿನ ಮುದ್ದೆಯನ್ನು ಚಕ್ರದ ತಲೆಯ ಮೇಲಿಡುತ್ತಾಳೆ. ತನ್ನ ನುಣುಪಾದ ಕೈಗಳಿಂದ ಮಣ್ಣು ಸವರುತ್ತಾಳೆ. ಅದು ಒಂದು ಬಗೆಯ ಆಕಾರ ಪಡೆಯುತ್ತದೆ. ಅದನ್ನೆತ್ತಿಕೊಳ್ಳುತ್ತಾಳೆ. ಹೊಟ್ಟೆ ತುಂಬ ನಗುತ್ತಾಳೆ,... ಮುಂದುಗಡೆಯಿಂದ ಭಿಕೂ ಅಜ್ಜ ಹೋಗುತ್ತಿದ್ದ. ಅವನು "ಆಗಲಿ, ನೀ ತಿಗರಿ ಮ್ಯಾಲ ಕೈ ಆಡಿಸಿ ಪಾತ್ರೆ ಮಾಡದಿ ನಿನ್ನದು ಸಣ್ಣ ಪ್ರಾಯ ಹತ್ತು ಹನ್ನೆರಡು ವರ್ಷ ಇರಲಿ ಬಿಡು ಆದರೆ ಒಂದೇ ಕ್ಷಣ, ಭಿಕೂ ಅಣ್ಣನ ಕಣ್ಣು ಕೆಂಪು ಕಿಡಿ ಕಾರುತ್ತವೆ. ಅವನ ದನಿಯಲ್ಲಿ ಬದಲಾವಣೆಯಾಗುತ್ತದೆ.

ಇದೇ ಕಡೀದು, ಇನ್ನು ಮುಂದೆ ತಿಗರಿಗ ಕೈ ಹಚ್ಚಿದ್ರ ಕುತ್ತಿಗೆ ಕೊಯ್ದು ಬಿಡ್ತೇನೆ..."

ಅವಳಿಗೆ ಒಮ್ಮಿಂದೊಮ್ಮೆ ಎಚ್ಚರವಾಗುತ್ತದೆ. ಭಿಕೂ ಅಜ್ಜನ ರಕ್ತ ಬಿಸಿಯಾದ ಮುಖಮಂಡಳ ಅವಳ ಕಣ್ಣೆದುರು ಕುಣಿಯುತ್ತದೆ.

ನಿಜ ಹೇಳಬೇಕಾದರೆ ಅವಳ ಹನ್ನೆರಡು – ಹದಿಮೂರು ವರ್ಷದ ಪ್ರಾಯದಲ್ಲಿ ಆಡಾಡುತ್ತ ತಂದೆಯ ಜೊತೆ, ಚಿಕ್ಕಪ್ಪನ ಜೊತೆ ಇದ್ದಾಗ ತಿಗರಿಯ ಮೇಲೆ ಕೈಯಾಡಿಸಿ ಚಿಕ್ಕಪುಟ್ಟ ಪಾತ್ರೆ ಮಾಡುವುದನ್ನು, ತಿಗರಿ ನಡೆಸುವುದನ್ನು ಕಲಿತಿದ್ದಳು.

ರಾತ್ರಿಯಿಡೀ ನಿದ್ದೆಯ ಮಂಪರು. ಮತ್ತೆ ಕನಸುಗಳ ಸಾಲು ಸಾಲು. ಆದರೂ ಅವಳು ಬೇಗ ಎದ್ದಳು. ಈಗ ಅವಳಿಗೆ ಕೇರಿಯ ಮೇಲೆ ಸೇಡು ತೀರಿಸಿಕೊಳ್ಳುವುದಿತ್ತು. ಇಷ್ಟು ದಿನ ಅವಳನ್ನು ತೆಂಗಿನಗರಿಯ ಹಾವು ಎಂದೆನ್ನುತ್ತಿದ್ದರು. ಈಗ ಅದರಲ್ಲಿ ವಿಷವೂ ತುಂಬಿಕೊಂಡಿದೆ. ಅವಳ ಸಿಟ್ಟು ಮೇಲೇರುತ್ತಿತ್ತು, .. ಕೊನೆಗೂ ಹೊಟ್ಟೆ ಮುಖ್ಯ. ಹೊಟ್ಟೆಯೆಂದರೆ ಕುದಿಯುವ ಕಾವಲಿ, ...ನಾನು ಈ ತನಕ ತುಂಬ ಶಾಸ್ತ್ರ ಪರಿಪಾಲನೆ ಮಾಡಿದೆ. ಶಾಸ್ತ್ರ ಪಾಲಿಸುವ ಮನೆಯಲ್ಲಂತೆ ಹತ್ತೆಂಟು ವಿಘ್ನ.

ಅವಳು ಬಾವಿಗೆ ಹೋಗಿ ಹಲ್ಲುಜ್ಜಿಕೊಂಡು ಮುಖ ತೊಳೆದುಕೊಂಡು ಬರುವಾಗ ಒಂದು ಬಿಂದಿಗೆ ನೀರು ತುಂಬಿಕೊಂಡು ಬಂದಳು. ಸೊಸೆಯು ಅಕ್ಕಿ ಬೀಸಿ ಹಿಟ್ಟು ತಯಾರಿಸಿಟ್ಟಿದ್ದಳು. ಆ ಹಿಟ್ಟು ಕಲಿಸಿ ಬಟ್ಟೆಯ ಮೇಲಿಟ್ಟು ತಟ್ಟಿ ತಟ್ಟಿ ರೊಟ್ಟಿ ಮಾಡುತ್ತಿದ್ದಳು. ಮೊಮ್ಮಗ ಆಗಷ್ಟೆ ಎದ್ದು ಕುಳಿತಿದ್ದ ಅವನು ಐದನೆಯ ತರಗತಿಯಲ್ಲಿ ಓದುತ್ತಿದ್ದ. ಅವನು ಶಾಲೆಗೆ ಹೋಗಬೇಕಾಗಿತ್ತು. ಅವಳು ಮನೆಯ ಅಡಿಕ್ಕೆ ಏನು ತಂದು ಇಟ್ಟು ಕೊರಗುಟ್ಟುತ್ತ ಮಣ್ಣ ಹತ್ತಿದಳು. ಮಗ ತೀರಿಕೊಂಡ ಮೇಲೆ ಅಟ್ಟಕೇರಿಸಿದ ತಿಗರಿಯ ಚಕ್ರ, ಕೂಡುವ ಆಸನಗಳೆಲ್ಲ ಅಲ್ಲಿದ್ದವು. ಅವಳು ಮೊಣಕಾಲಿಟ್ಟು ಸೊಸೆಯನ್ನು ಕೂಗಿ ಕರೆದಳು. ಮೊಮ್ಮಗನಿಗೂ, ಸೊಸೆಗೂ ಕೈ ಹಚ್ಚಲು ಹೇಳಿದಳು. ಬೆಂಕಿಯ ಕೆಂಡದ ಮೇಲಿಟ್ಟ ರೊಟ್ಟಿಯನ್ನು ಹಿಂದಕ್ಕೆಳೆದು ಇಟ್ಟು ಒಲೆಯ ಮೇಲಿದ್ದ ಕಾವಲಿಗೆ ಕೈ ಹಚ್ಚದೆ ಸೊಸೆ ಬಂದಳು. ತಿಗರಿಯ ಚಕ್ರ ಕೆಳಗಿಳಿಸುವಾಗ ಅವಳ ಪೂರ್ತಿ ಬೆನ್ನೆಲುಬು ಮುರಿದಂತೆ ಬಾಗಿ ಹೋಗಿತ್ತು. ಸೀತವ್ವಳು ಮನಸ್ಸಿನಲ್ಲಿ ಅಂದಳು 'ಇವಳಂತೂ ಪೂರ್ತಿ ಹಣ್ಣಾಗಿದ್ದಾಳೆ ಮತ್ತೆ ಹೀಗೆಯೆ ಅನ್ನದ ಕೊರತೆಯಾದರೆ ಅವಳು ಮೊಮ್ಮಗುವನ್ನು ಬಿಟ್ಟು ಹೊರಟು ಹೋದರೇನು ಗತಿ? ಮಾಡಿದ ಅಡಿಗೆಯನ್ನು ನನಗೆ ಬಡಿಸುತ್ತಾಳೆ. ತನ್ನ ಮಗನಿಗೆ ಬಡಿಸುತ್ತಾಳೆ ತಾನು ಮಾತ್ರ ಕದ್ದು ಮುಚ್ಚಿ ತಿಂದಂತೆ ನಾಲ್ಕಗಳು ತಿಂದು ಕೈತೊಳೆದುಕೊಂಡು ಬಿಡುತ್ತಾಳೆ.

ಅವಳು ತಿಗರಿಯ ಚಕ್ರ ಮತ್ತು ಕುಳಿತುಕೊಳ್ಳುವ ಆಸನ ತಂದು ಅಂಗಳದಲ್ಲಿ ಅಡ್ಡ ತಿಡ್ಡ ಒಗೆದಳು. ದಿನವಿಡೀ ಅವಳು ಯಾರಾದರೂ ನೋಡುತ್ತಾರೆಯೋ. ಯಾರಾದರೂ ಏನಾದರೂ ಅನ್ನುತ್ತಾರೆಯೇ ಎಂದು ಕಾಯುತ್ತಿದ್ದಳು. ಆದರೆ ಪ್ರತಿಯೊಬ್ಬರೂ ನೋಡಿಯೂ ನೋಡದಂತೆ ಅಲ್ಲಿಂದ ಮೌನವಾಗಿ ಹೊರಟು ಹೋಗುತ್ತಿದ್ದರು. ಅವಳಿಗೆ ಯಾರಾದರೂ ಹಿರಿಯರು–ಕಿರಿಯರು "ಸೀತವ್ವ ಯಾರು ಈ ತಿಗರಿ ತಿರುಗಿಸ್ತಾರೆ. ಯಾರು ತಿಗರಿಯ ತಲೆಯ ಮೇಲೆ ಮಣ್ಣಿನ ಮುದ್ದೆ ತಂದಿಡುವವರು ?" ಎಂದು ಕೇಳಬೇಕೆನಿಸುತಿತ್ತು. ಆದರೆ ಊರಿನವರೆಲ್ಲರೂ ವೈರ ಬೆಳೆಸಿಕೊಂಡವರಂತೆ

ಮಾತೊಂದೂ ಆಡದೆ ತೆಪ್ಪಗೆ ಹೋಗುತ್ತಿದ್ದಾರೆ. ಅವಳಿಗೆ ಉಸಿರು ಕಟ್ಟಿದಂತಾಯಿತು. ಅವಳಿಗೆ ಅನಿಸಿತು ನೀರು ಮೂಗು–ಕಿವಿಯವರೆಗೆ ಮುಟ್ಟಿದೆ.

ಎರಡನೆಯ ದಿನ ಅವಳು ಒಂದು ಗಿಡದಡಿಯಲ್ಲಿ ಆಧಾರವಿಟ್ಟು ತಿಗರಿಯನ್ನು ಕೂಡಿಸಿದಳು. ಸುಮಾರು ಎರಡು ಗಂಟೆ ಕಷ್ಟ ಪಟ್ಟು ಕೂಡುವ ಆಸನ ನೆಲದಲ್ಲಿ ಸರಿಯಾಗಿ, ಗಟ್ಟಿಯಾಗಿ ಕೂಡುವಂತೆ ಗುದ್ದಾಡಿದಳು.

ಮನೆಯ ಮಾಡಿನ ನೆರಳಲ್ಲಿ ಮರಿಗೆಯಲ್ಲಿ ಮಣ್ಣು ಕೊಳೆಯಲು ಹಾಕಿದ್ದಳು. ಅವಳು ಮೊಮ್ಮಗನಿಗೆ ಮಣ್ಣಿನ ಮುದ್ದೆ ತರಲು ಹೇಳಿದಳು. ಮೊಮ್ಮಗ ಗಡಿಗೆಯಿಂದ ತೆಗೆದು ತಟ್ಟೆಯಲ್ಲಿ ಮಣ್ಣನ್ನಿಟ್ಟುಕೊಂಡು ಬಂದ. ಅವಳು ಮಣ್ಣಿನ ಚೆಂಡು ಮಾಡಿ ತಿಗರಿಯ ತಲೆಯ ಮೇಲೆ ತಟ್ಟಿದಳು. ಮೊಮ್ಮಗನ ಕೈಯಲ್ಲಿ ಕೋಲು ಕೊಟ್ಟು ತಿಗರಿಯ ತೂತಿನಲ್ಲಿ ಹಾಕಿ ಜೋರಾಗಿ ಸುತ್ತಲು ಹೇಳಿದಳು. ಅವಳು ಖುದ್ದಾಗಿ ಮಣ್ಣಿನ ಮುದ್ದೆಯಿಟ್ಟಳು. ಮಣ್ಣಿನಲ್ಲಿ ಕೈ ತೂರಿಸಿ ಪಾತ್ರೆಯ ಕತ್ತು ರಚಿಸಲು ಮುಂದಾದಳು ಸೊಸೆ ಬಾಗಿಲಲ್ಲಿ ನಿಂತಿದ್ದಳು. ಅದನ್ನು ನೋಡಿದ ಅವಳು ಗಂಡ ಸತ್ತವರಂತೆ ಜೋರಾಗಿ ಕೂಗುತ್ತ "ಏನು ಮಾಡ್ತೀಯವ್ವ ಪಾಪಿ" ಎಂದಳು. ವಾಡೆಯಲ್ಲಿದ್ದ ಜನ ಒಬ್ಬೊಬ್ಬರಾಗಿ ಬಂದು ದೂರ ದೂರ ಮೌನವಾಗಿ ನಿಂತುಕೊಂಡಿದ್ದರು.

ಅವಳು ಯಾರ ಪರಿವೆಯನ್ನೂ ಮಾಡಲಿಲ್ಲ. ಮಣ್ಣು ಸರಿಪಡಿಸಿ ಕೈಯಿಂದ ನೇವರಿಸುತ್ತ ಪಾತ್ರೆಯ ಕುತ್ತಿಗೆ ರಚಿಸತೊಡಗಿದಳು. ಮೈಮೇಲೆ ಬಂದವರಂತೆ ಅವಳು ಅಡ್ಡ ತಿಡ್ಡವಾಗಿ ನಾಲ್ಕೆಂಟು ಕುತ್ತಿಗೆ ತೆಗೆದಿಟ್ಟಳು ಈಗ ಅವಳು ಸಂಪೂರ್ಣ ಸೋತು ಹೋದವಳಂತೆ ಸ್ವಲ್ಪ ಹೊತ್ತು ಅಲ್ಲೇ ನಿಂತು ಅನಂತರ ನಿದಾನವಾಗಿ ನಡೆದು ಹೊರಜಗಲಿಯ ಮೇಲೆ ಕುಳಿತುಕೊಂಡಳು. ತಾನು ಅವಸರವಸರವಾಗಿ ಕತ್ತು ಮಾಡಿಟ್ಟ ಪಾತ್ರೆಗಳನ್ನೇ ದಿಟ್ಟಿಸಿ ನೋಡುತ್ತ ಕುಳಿತ ಅವಳಿಗೆ ಕಣ್ಣಲ್ಲಿ ನೀರು ಬಂತು. ಅವಳು ಜಗಲಿಯ ಮೇಲೆ ಅಳುತ್ತ ಕುಳಿತಳು. ಆಗ ಶಾಣು ಬಂದು ಅವಳ ಮುಂದೆ ಕೂತ. ಅವನಿಗೂ ಅಳುಬಂತು

ಶಾಣು ಧರ್ಮೂನ ಕಿರಿಯ ಸಹೋದರ. ಕಪ್ಪು. ಕುಳ್ಳ, ಮೈ ಕೈಯಲ್ಲಿ ಗಟ್ಟಿಯಾಗಿದ್ದ ಅವನ ಒಂದು ಕೈ ಮಾತ್ರ ಮೊಟಕಾಗಿತ್ತು ಆದರಿಂದ ಅವನು ನಡೆಯುವಾಗ ಒಂದು ಕಡೆ ಬಗ್ಗಿದಂತೆ ವಾಲುತ್ತ ನಡೆಯುತ್ತಿದ್ದ. ಆದರೆ ಕುಂಬಾರರ ಕೆಲಸವೆಲ್ಲ ಅವನು ಬಲ್ಲವನಾಗಿದ್ದ. ಕೆರೆಗೆ ಹೋಗಿ ಮಣ್ಣನ ಮಕರಿ ತುಂಬಿ ತರುತ್ತಿದ್ದ ಆವಿಗೆ ಉರಿಸುತ್ತಿದ್ದ ತನ್ನ ಅಣ್ಣನ ಹೆಂಡತಿಯೊಂದಿಗೆ ಆಗಾಗ್ಗೆ ಮಡಕೆ ಮಾರಾಟಕ್ಕೆ ಹೋಗುತ್ತಿದ್ದ ಕರೆದರೆ ಒಕ್ಕಲಿಗರಲ್ಲಿ ಉತ್ತು ಬಿತ್ತಲು, ಸುಗ್ಗಿಯಲ್ಲಿ ಕೆಲಸ ಮಾಡಲು ಹೋಗುತ್ತಿದ್ದ ದೊಡ್ಡಣ್ಣ ಧರ್ಮೂ ತಿಗರಿಯ ಮೇಲೆ ಕುಳಿತು ಮಣ್ಣಿನ ವಿವಿಧ ಪಾತ್ರೆ ರಚಿಸುವಲ್ಲಿ ಮಗ್ನನಾಗಿರುತ್ತಿದ್ದ ಉಳಿದ ಕೆಲಸಗಳನ್ನೆಲ್ಲ ಅವನು ಮತ್ತು ಅವನಣ್ಣನ ಹೆಂಡತಿಯೇ ಮಾಡುತ್ತಿದ್ದರು, ಧರ್ಮೂ ಹೆಂಡ ಕುಡಿದು ತಮ್ಮನಿಗೆ ಕೆಟ್ಟ ಕೆಟ್ಟದ್ದಾಗಿ ಬಯ್ಯುತ್ತಿದ್ದ ಆದರೆ ಶಾಣು ಎಂದೂ ತಿರುಗಿ ಮಾತಾಡುತ್ತಿರಲಿಲ್ಲ. ಅಲ್ಲದೆ ಅವನೇ ಎಲ್ಲರಿಗೂ "ಸರಾಯಿ ಕುಡಿಯಾಕ ಹತ್ತಿಂದ ಅಂವಾ ಹಿಂಗಾಗ್ಯಾನ. ನಮ್ಮ ತಂದಿ ನಾ ಸಣ್ಣವನಿದ್ದಾಗಲೇ ಹ್ವಾದ್ರು, ಆಮ್ಯಾಗ ನನ್ನ ಅಣ್ಣಾನ ನನಗ ಸಾಕಿ ದೊಡ್ಡಾಂವ ಮಾಡ್ದ". ಎನ್ನುತ್ತಿದ್ದ.

ಆದರೆ ಅವನು ಹೇಳುವುದೆಲ್ಲ ಸತ್ಯವಾಗಿರಲಿಲ್ಲ. ಶಾಣುವಿನ ಹಿಂದೆ ಇಬ್ಬರು ತಂಗಿಯಂದಿರು ಇದ್ದರು. ಅವರು ದೊಡ್ಡವರಾದರೂ ಅವರ ಮದುವೆಯ ಸುದ್ದಿ ಎತ್ತುತ್ತಿರಲಿಲ್ಲ. ಆಗ ಧರ್ಮುನ ಹೆಂಡತಿ ಮತ್ತು ಶಾಣು ಶತಪ್ರಯತ್ನ ಮಾಡಿ ಅವರಿಬ್ಬರ ಮದುವೆ ಮಾಡಿದ್ದರು. ಅವರೀಗ ಮಕ್ಕಳ ತಾಯಂದಿರರಾಗಿದ್ದಾರೆ, ಆದರೆ ಶಾಣುವಿನ ಮದುವೆಯ ಮಾತು ಮಾತ್ರ ಯಾರು ಆಡುತ್ತಿರಲಿಲ್ಲ. ಧರ್ಮುಗೆ ಕೇಳಿದರೆ ಅವನು ಅನ್ನುತ್ತಿದ್ದ "ಈ ಕುಂಟನಿಗೆ ಯಾರು ಹೆಣ್ಣು ಕೊಡ್ತಾರೆ ?" ಕುಂಬಾರರ ಮಕ್ಕಳು ಇಪ್ಪತ್ತು ಇಪ್ಪತ್ತೆರಡು ವರ್ಷಗಳಾದ ಕೂಡಲೆ ಮದುವೆಗೆ ಆತುರ ಪಡುತ್ತಾರೆ. ಆದರೆ ಶಾಣುಗೆ ಇಪ್ಪತ್ತೇಳು ವರ್ಷಗಳಾದರೂ ಯಾರು ಮದುವೆಯ ಸುದ್ದಿ ಎತ್ತುತ್ತಿರಲಿಲ್ಲ.

ಇಲ್ಲೂ ಅವನ ಅಣ್ಣನ ಹೆಂಡತಿಯೇ ಮುಂದಾದಳು. ಹತ್ತೆಂಟು ಜನರಿಗೆ ಹೇಳಿ ಅವಳು ಕೈಗೆ ಹಳ್ಳಿಯ ಬಳಿಯ ಕಾಡಿನಲ್ಲಿರುವ ಹಪಕುಳೆ ಎಂಬ ಊರಿನ ಒಂದು ಹುಡುಗಿ ಹುಡುಕಿದಳು. ಗಂಡ, ಗಂಡನ ಸಹೋದರರು ಮತ್ತು ಕೆಲವು ಆಪ್ತೇಷ್ಟರನ್ನು ಕರೆದುಕೊಂಡು ಹೋಗಿ ಮದುವೆಯ ಶಾಸ್ತ್ರ ಮುಗಿಸಿ ಹೆಣ್ಣನ್ನು ಮನೆಗೆ ಕರೆತಂದರು. ಈ ಮಂದಿ ಅಲ್ಲಿಗೆ ಹೋಗಿಯೇ ಮದುವೆಯ ತಯಾರಿ ಮಾಡಿದ್ದರು. ಹೋಗಬೇಕಾದರೆ ಸ್ವಲ್ಪ ಬೆಲ್ಲ ತೆಗೆದುಕೊಂಡು ಹೋಗಿದ್ದರು. ಅದರಿಂದ ಅವರಿಗೆ ಪಾಯಸ ಮಾಡಲು ಹೇಳಿದ್ದರು. ಭಟ್ಟರು, ವಾದ್ಯದವರಿಲ್ಲದೆ ಕೇವಲ ಹೂವಿನ ಹಾರ ವಿನಿಮಯ ಮಾಡಿ ಮದುವೆಯ ವಿಧಿ ಪೂರೈಸಿದ್ದರು. ಅದರಲ್ಲೂ ಆ ಮನೆಯ ಹಿಂದಿನ ಮನೆಯಲ್ಲಿದ್ದ ಒಬ್ಬ ರೋಗಿ ಒಂದೇ ಸವನೆ ಕೂಗಿಕೊಳ್ಳುತ್ತಿದ್ದ. ನಾಲ್ಕು ದಿನಗಳ ಹಿಂದೆ ಮರದ ಮೇಲೆ ಹತ್ತಿ ಜೇನು ತೆಗೆಯುವಾಗ ಮರದಿಂದ ಕೆಳಗೆ ಬಿದ್ದು ಒದ್ದಾಡುತ್ತಿದ್ದಾಗ ಯಾರೊ ದಾರಿ ಹೋಕರು ನೋಡಿ ಮನೆಗೆ ತಂದು ಹಾಕಿದ್ದರು.

ಹುಡುಗಿ ಕೊಂಚ ಕಪ್ಪಾಗಿದ್ದರೂ ಮೈಕೈಯಲ್ಲಿ ತುಂಬಿಕೊಂಡಿದ್ದಳು. ಅವಳು ಮದುವೆಯ ಹೊತ್ತಿನಲ್ಲಿ, ದಾರಿಯಲ್ಲಿ ಬರುವಾಗ ಒಂದು ಶಬ್ದವೂ ಮಾತಾಡಿರಲಿಲ್ಲ. ಏನಾದರೂ ಕೇಳಿದರೆ ಸುಮ್ಮನೆ ಹುಂ...ಹೂಂ ಎಂದು ತಲೆ ಹಾಕುತ್ತಿದ್ದಳು. ಮನೆಗೆ ಬಂದ ಮೇಲೆ ತಿಳಿಯಿತು ಅವಳು ಮೂಗಿನಿಂದ ಮಾತನಾಡುತ್ತಾಳೆಂದು. ಅತ್ತಿಗೆಗೆ ಬೇಸರವಾಯಿತು. ಅವಳ ಮುಖ ಬಾಡಿತು. ಆದರೆ ಶಾಣು ಹೇಳಿದ "ಅತ್ತಿಗೆ, ಅದೇನು ಆಕಿ ಮಾಡಿಕೊಂಡದ್ದಲ್ಲ. ದೇವರು ಕೊಟ್ಟಿದ್ದು ಅದ್ಯೇನು ಮಾಡಾಕ ಬರ್ತದ ? ನನ್ನ ಕಾಲು ನೋಡ್ರಲ್ಲ ಗಿಡ್ಡ ಉದ್ದಲ್ಲ ?"

ಆದರೆ ಹುಡುಗಿ ತುಂಬ ಒಳ್ಳೆಯವಳು ಯಾರ ಮಾತೂ ತೆಗೆದು ಹಾಕುತ್ತಿರಲಿಲ್ಲ. ಕೆಲಸ ನೀಟಾಗಿ ಮಾಡುತ್ತಿದ್ದಳು ಕೆಲಸ ಮನಸ್ಸಿಟ್ಟು ಕಲಿಯುತ್ತಿದ್ದಳು. ಶಾಣು ಕೆಲವೇ ದಿನಗಳಲ್ಲಿ ಅವಳಿಗೆ ಆಪ್ತನಾದ ಅವಳನ್ನು ಕರೆದುಕೊಂಡು ಕೆರೆಗೆ ಮಣ್ಣು ತರಲು ಹೋದಾಗ ಅವರಿಬ್ಬರೂ ಬೇಣ ಬೆಟ್ಟಗಳಲ್ಲಿ ಸುಮ್ಮನೆ ಸುತ್ತಾಡುತ್ತಿದ್ದರು. ಕಾಡಿಗೆ ಇಬ್ಬರೂ ಕಟ್ಟಿಗೆ ತರಲು ಹೋದಾಗ, ಬಂದಕೂಡಲೆ ಅತ್ತಿಗೆ "ಇಷ್ಟು ಹೊತ್ತು ಏನ್ಮಾಡ್ತಿದ್ದೀರಿ ಅಡಿವ್ಯಾಗ, ಗಂಧದ ಕಟ್ಗೆ ಹುಡುಕ್ತಾ ಹೋಗಿದ್ರೇನು ?" ಎಂದು ಕೇಳುತ್ತಿದ್ದಳು.

ಶಾಣು ಸುಮ್ಮನೆ ನಗುತ್ತಿದ್ದ ಮಣ್ಣು ಕುಟ್ಟುವಾಗ, ಮಣ್ಣು ಕಲಿಸುವಾಗ, ಆವಿಗೆ ಉರಿಸುವಾಗ ಎಲ್ಲ ಹೊತ್ತಿನಲ್ಲೂ ಅವನ ಮುಂದೆ ಅವನ ಹೆಂಡತಿ ಇರಬೇಕಾಗಿತ್ತು.

ಒಂದೊಮ್ಮೆ ಅವಳು ಕಾಣದಿದ್ದರೆ ನಾಲ್ಕು ಕಡೆಗೆ ಕಣ್ಣು ಹಾಯಿಸಿ ಹುಡುಕುತ್ತಿದ್ದ
ಕೊನೆಗೊಮ್ಮೆ ಕರೆದು ಏನಾದರೂ ತಂದುಕೊಡು ಎಂದು ಸುಮ್ಮನೆ ಹೇಳುತ್ತಿದ್ದ
"ಕೇಳಿಯೇನು ಅಂಬೂ, ಬೆಳದಿಂಗಳ ಮಡಕೆ ಮಾಡೂ ಮುಂದ ಮಣ್ಣು ಹಂ
ಪೆಟಣೆಯ ಮೇಲೆ ಬೇಪಾಗಿ ಜಾರ್ತದ ಆದ್ಯ ಕತ್ತಲ ದಿನದಾಗ ಅದು ಜಡಾ ಆಗ್ತದದಂತ.

ನಮ್ಮ ಹಿರ್‍ಯಾರು ಹುಣ್ಣಿಮಿ ರಾತ್ರಿ ಮಾಂಡ ಹಾಕಿ ಹೊರಗ ಕೂತು ರಾತ್ರಿಯೆಲ್ಲ ಗಡಿ
ಮಾಡತ್ತಿದ್ದರಂತೆ. ಪೆಟಣೆಯ ತಾಳಕ್ಕೆ ಸರಿಯಾಗಿ ಹಾಡುತ್ತಿದ್ದರು.

"ರಾಮಕೃಷ್ಣ ಹರಿ ಜಯ ಜಯ ರಾಮಕೃಷ್ಣ ಹರಿ ... ನೀನಂತೂ ಭ್ಹಾಳ ನಾಚ್ತಿ. .
ಗಂಡನ ಮುಂದ ನಾಚಕಿ ಅನ್ನೂದ ಇರ್ತದೇನು? ಬರುವ ಶನಿವಾರ ಕಾಣಕೋಣದ
ಸುಗ್ಗಿ ಜಾತ್ರೆ ಐತಿ ಎರಡು ಹೆಡಿಗೆ ತುಂಬ ಗಡಗಿ ತಗೊಂಡು ಹೋಗಾಣಾ ಗಡ
ಮಾರೂದು ಮತ್ತೆ ಜಾತ್ರಿನೂ ಮಾಡೂದು."

ಮದುವೆಯಾಗಿ ಒಂದೂವರೆ ವರ್ಷದ ನಂತರ ಅವಳು ಗರ್ಭವತಿಯಾದಳು

ಅಂಬೂಗೆ ರುಚಿಸುತ್ತದೆ ಎಂದು ಅವನು ಎಲ್ಲೆಲ್ಲಿಂದಲೊ ಬೋರೆ ಮತ್ತಿತರ ಹು
ಹಣ್ಣು ತಂದು ಕೊಡುತ್ತಿದ್ದ ಅಂಬೂಗೆ ಬೇಕು ಅಂತ ಅವನು ಮಾಜಾಳಿ ಪೇಟೆಯಿಂ
ಭಜಿ – ಪಕೋಡ ತಂದು ಕೊಡುತ್ತಿದ್ದ ಅವಳಿಗೆ ಸೇರುತ್ತದೆಯೆಂದು ಕಾರವಾರಕ್ಕೆ ಹೋ
ಒಂದು ಕಿಲೊ ಖರ್ಜೂರ ತಂದು ಒಂದು ಗಡಿಗೆಯಲ್ಲಿ ಹಾಕಿ ಮುಚ್ಚಿಟ್ಟಿದ್ದ.

ಅಂಬು ಹೆರಿಗೆಯಾಗುವಾಗಲೆ ಪ್ರಾಣ ಬಿಟ್ಟಳು. ಒಂದೆರಡು ದಿನ ಅವಳು ಹೆರಿಗೆಯ
ನೋವಿನಿಂದ ಒದ್ದಾಡಿದಳು. ಕೊನೆಗೆ ಸತ್ತ ಮಗು ಹೊರಗೆ ಬಂತು. ಅದಾಗಿ ಹೊರ
ಬಂತು ಎನ್ನುವುದಕ್ಕಿಂತ ದಾದಿಯೇ ಹೊರಗೆಳೆದು ತೆಗೆದಳು ಎಂದರೆ ಸರಿಯಾದೀತು
ಮಗು ಹೊರಗೆ ಬಂದದ್ದೆ ತಡ ರಕ್ತದ ಧಾರೆ ಹರಿಯಿತು. ಅದುವರೆಗೆ ಕುಂಬಾರರ ಹೆ
ಮಕ್ಕಳು ಆಸ್ಪತ್ರೆಯ ಮುಖ ನೋಡಿರಲಿಲ್ಲ ಅಂಬೂವೂ ಅಲ್ಲೇ ಹೆರಿಗೆಯಾಗುವಾ
ಸತ್ತಳು. ಪುರೋಹಿತರು ಹೇಳಿದರು ಅದೊಂದು ಕೆಟ್ಟಸಾವು. ಶವ ಸುಡುವಂತಿಲ್ಲ ಹುಗಿಯ
ಬೇಕಾದೀತು ಗುಡ್ಡದಂಚಿನಲ್ಲಿ ಎಲ್ಲಿ ಹುಗಿಯಲು ಹೋದರೂ ರೈತರು ತಕರಾರ
ಮಾಡುತ್ತಿದ್ದರು. ಕೊನೆಗೆ ಅವಳು ಮತ್ತು ಅವಳ ಮಗುವನ್ನು ಕಾಡಿಗೆ ಒಯ
ಹುಗಿಯಬೇಕಾಯಿತು.

ಶಾಣು ಹುಚ್ಚನಾಗಿದ್ದ. ಸೀತವ್ವನ ಮನೆಯ ಜಗಲಿಯ ಮೇಲೆ ಬಂದು ಕೂಡುತ್ತಿದ್ದ.
ಒಂದೇ ಸವನೆ ಅಳುತ್ತಿದ್ದ. ಕೇರಿಯ ಕೊನೆಯವರೆಗೆ ಹೋಗಿ ಹೆಂಡತಿಯ ಹೆ
ತೆಗೆದುಕೊಂಡು ಹೋದ ದಾರಿಯನ್ನೇ ದಿಟ್ಟಿಸಿ ನೋಡುತ್ತ ಗರ ಬಡಿದವನಂ
ನಿಂತುಕೊಳ್ಳುತ್ತಿದ್ದ... ಕಾಲು ಸೋತು ಅಲ್ಲೇ ಮಣ್ಣಿನಲ್ಲಿ ಕೂಡುತ್ತಿದ್ದ ತನ್ನ ಹಣೆಯನ
ಚಚ್ಚಿಕೊಳ್ಳುತ್ತ "ಒಳ್ಳೆ ಹೆಣ್ಣಮಗಳಾಗಿದ್ದಳು ನನ್ನ ಬಿಟ್ಟು ಹ್ವಾದಳು ನಾನೂ ಇರೂದಿಲ್ಲ-
ನಾನೂ ಸಾಯ್ತೀನಿ' ಎಂದು ಆಲ್ಪರಿಸುತ್ತಿದ್ದ.

ಅಂಬು ಕಾಡಿನಲ್ಲಿ ಹೋಗಿ ಬರುವವರಿಗೆಲ್ಲ ಹೆದರಿಸುತ್ತಿದ್ದಾಳೆ ಎಂಬ ಸುದ್ದಿ ಎಂಟ
ದಿನಗಳಲ್ಲಿ ಕಾಡ್ಗಿಚ್ಚಿನಂತೆ ಹಳ್ಳಿಯಲ್ಲಿ ಹರಡಿತು. ಹೆಚ್ಚಾಗಿ ರೈತರು ದೂರುತ್ತಿದ್ದರು
ಕಟ್ಟಿಗೆಯ ಹೊರೆ ತರುವಾಗ ಅವಳು ಹಿಂದಕ್ಕೆಳೆಯುತ್ತಾಳೆ ಕಟ್ಟಿಗೆಯ ಹೊರೆಯ ಮೇ

ಏಳಿತುಕೊಳ್ಳುತ್ತಾಳೆ ಅದರಿಂದ ಹೆಜ್ಜೆ ಹೆಜ್ಜೆಗೆ ತಲೆಯ ಮೇಲಿನ ಹೊರೆ ಭಾರವಾಗುತ್ತ ಹೋಗುತ್ತದೆ. ಗಿಡಗಂಟಿಗಳಲ್ಲಿ ಯಾರೊ ಮಗುವನ್ನು ಹಿಡಿದುಕೊಂಡು ನಡೆದು ಹೋದಂತೆ ಸದ್ದಾಗುತ್ತದೆ. ದೂರದ ಗಿಡಗಳಾಚೆ ಯಾರೋ ಅಳುತ್ತಿರುವ ಸದ್ದು ಕೇಳಿಸುತ್ತಿದೆ... ಶಾಣು ಇಂಥ ಸುದ್ದಿಗಳನ್ನು ಕೇಳಿ ಹುಚ್ಚನಾಗಿದ್ದ ಅನಂತರ ಹೊಲದಂಚಿನಲ್ಲಿ, ಹೊಳೆಯ ದಂಡೆಯಲ್ಲಿ ಯಾರೋ ಕಿರುಚಿಕೊಂಡ ಸದ್ದು ಬರತೊಡಗಿತು. ಈ ಮಧ್ಯೆ ಕಣ್ಮರೆಯಾಗಿ ಬಿಡುತ್ತಿದ್ದಳು ರಾತ್ರಿಯ ಹೊತ್ತಿನಲ್ಲಿಯೇ ದೆವ್ವ ಹೆಚ್ಚು ಕೆರಳುತ್ತದೆಯೆಂದು ಜನ ಹೇಳುತ್ತಿದ್ದರು. ಒಂದು ದಿನ ರೈತರ ವಾಡೆಯಲ್ಲಿ ಒಂದು ಹೆಣ್ಣು ಮಗಳು ಅಂಬುನ ಹೆಸರು ಹಿಡಿದು ಕೂಗ ತೊಡಗಿದ್ದಳು

ಒಂದು ದಿನ ಒಬ್ಬ ರೈತ ಕೇರಿಯ ಕಡೆ ಮುಖ ಮಾಡಿ "ಮಂದಿ ಹೊಲಕ್ಕೆ ಅಡವಿಗ ಹೋಗಾಕ ಅಂಜತಾರ ಏನಾದರೂ ಮಂತ್ರ ಮಾಡಿ ಮಾಡಿಸಿ ದೆವ್ವ ತಣ್ಣಗಾಗೂ ಹಂಗ ಮಾಡ್ರಿ ಇಲ್ಲದಿದ್ರ ಊರೂ ಬರ್ಬಾದಾದೀತು"

ಶಾಣು ಅಲ್ಲೇ ನಿಂತಿದ್ದ ಅವನು ದಿಗಿಲುಗೊಂಡ. ಆದರೆ ಅವನ ಹೃದಯದಲ್ಲಿ ಏನೋ ನಡೆಯುತ್ತಿತ್ತು. ಅವನು ಒಳಹೊರಗು ಅಸ್ವಸ್ಥನಾಗಿದ್ದ.

ಸಂಜೆಯಾದ ಕೂಡಲೇ ಅವನು ಮೊದಲು ಅತ್ತಿಗೆಗೆ ಅನಂತರ ಸೀತವ್ವನಿಗೆ "ಅವಳು ರಾತ್ರಿ ಹಿಂಗ ಅಡ್ಡಾಡೂದಾದ್ರ ನಾನೇ ಹೋಗಿ ನೋಡತೀನಿ. ಆಕಿಗ ನನಮ್ಯಾಲ ಭ್ಯಾಳ ಪ್ರೀತಿಯಿತ್ತು. ಆಕಿ ಇರೂದಾದ್ರ ನನ ಮುಂದೆ ಬರದೆ ಇರೂದಿಲ್ಲ. ನಾನ್ ಆಕಿಗ ಹೇಳತೀನಿ ನೀ ಹಿಂಗ ರಾತ್ರಿ ಹೊತ್ತಿನಾಗ ಅಲ್ಲಿ ಇಲ್ಲಿ ಅಡ್ಡಾಡಬ್ಯಾಡ. ಬೇಕಾದರೆ ಒಂದು ಗುಡಿಸಲು ಕಟ್ಟಿಕೊಂಡು ಇರಾಣಾ ಅಂತ ಹೇಳತೀನಿ" ಎಂದು ಹೇಳಿದ.

ಆ ರಾತ್ರಿ ಅವನು ಭ್ರಮಿಷ್ಠನಂತೆ, ಹೆಂಡ ಕುಡಿದವರಂತೆ ಆ ಕತ್ತಲೆಯ ಗವಿಯಲ್ಲಿ ಕಾಲಿಟ್ಟ

ಮುಂದಿನ ಮೂರು ದಿನ ಅವನು ಕಾಡಿನಂಚಿನಲ್ಲಿ, ಹೊಲದಲ್ಲಿ, ಹೊಳೆಯ ದಂಡೆಯಲ್ಲಿ ಕತ್ತಲಲ್ಲಿ ಓಡಾಡುತ್ತಿದ್ದ. ಕತ್ತಲೆಯಾಗುವುದನ್ನೇ ಕಾಯುತ್ತಿದ್ದ ಮತ್ತು ಕಾಡುಮೇಡುಗಳಲ್ಲಿ ನುಗ್ಗುತ್ತಿದ್ದ. ಆದರೆ ಎಲ್ಲಿಯೂ ಅಂಬುಳ ಸುಳಿವು ಸಿಗುತ್ತಿರಲಿಲ್ಲ. ಎಲ್ಲೋ ದೂರದಲ್ಲಿ ಆಕ್ರಂದನ ಕೇಳಿ ಬರುತ್ತಿತ್ತು. ಆದರೆ ಹತ್ತಿರ ಹೋದಂತೆ ಸದ್ದಡಗಿ ಹೋಗುತಿತ್ತು. ಆದರೆ ಅವನು ಕತ್ತಲೆಯ ಪರಿಮೆಯಿಲ್ಲದೆ ಹುಚ್ಚನಂತೆ ಊಟ ನಿದ್ದೆಗಳನ್ನು ಗಮನಿಸದೆ ಅಂಜಿಕೆಯಿಲ್ಲದೆ ಹುಚ್ಚನಂತೆ ಅಲೆಯುತ್ತಿದ್ದ. ಅವನಿಗೆ ಅಂಬು ತನ್ನ ಮುಂದೆ ಬಂದು ನಿಲ್ಲುತ್ತಾಳೆ. ನಾಚಿ ನಿಲ್ಲುತ್ತಾಳೆ ಎಂದು ಅನಿಸುತ್ತಿತ್ತು.

ನಾಲ್ಕನೆಯ ದಿನ ಅವನು ಗುಡ್ಡದ ಕಡೆಯಿಂದ ಇಳಿದು ಬರುವ ದಾರಿಯಲ್ಲಿ ನಿಂತಾಗ ಯಾರೋ ಕೂಗುತ್ತಿರುವುದು ಕೇಳಿಸಿತು. ಒಂದು ಕಡೆ ಬೆಟ್ಟದಂತಿತ್ತು. ಅಲ್ಲಿಂದಲೇ ದಾರಿ ಹಾಯ್ದು ಹೋಗುತ್ತಿತ್ತು. ಕೂಗು ಕೇಳಿದ ಶಾಣು ಮುಂದಕ್ಕೆ ಹೋದ. ಅದೇ ಹೊತ್ತಿಗೆ ಕಟ್ಟಿಗೆಯ ಹೊರೆ ಹೊತ್ತು ತರುತ್ತಿದ್ದ ನಾಲ್ವರು ಅವನನ್ನು ನೋಡಿ ಹಿಂದೆ ಮುಂದೆ ನೋಡದೆ ಓಡತೊಡಗಿದರು. ಆಗ ಅವನಿಗೆ ಗೊತ್ತಾಯಿತು ಗೋವೆಯಿಂದ ಹೆಂಡದ ಹೊರೆಯನ್ನು ಹೊತ್ತು ತರುವವರು ತಮ್ಮ ಹತ್ತಿರ ಯಾರೂ ಬರಬಾರದೆಂದು

ಸೀಳುಧ್ವನಿಯಲ್ಲಿ ಕೂಗುತ್ತ ಬರುತ್ತಿದ್ದರು ಎಂದು. ಸೀಳುಧ್ವನಿ ಕೇಳಿದವರು ದೆವ್ವ ಎಂದು ಭ್ರಮಿಸಿ ಓಡಿಹೋಗುತ್ತಿದ್ದರು. ಈಗಂತೂ ಅಂಬೂ ಸತ್ತಿದ್ದರಿಂದ ಅಂಜುವವರಿಗೆ ಅವರ ಕೂಗು ಆಹ್ವಾನ ಕೊಟ್ಟಂತಾಗುತ್ತಿತ್ತು. ಹಿಂದೊಮ್ಮೆ ಊರವರೆಲ್ಲ ಸೇರಿ ಆ ಸರಾಯಿ ಸಾಗಿಸುವವರನ್ನು ಪೋಲೀಸರಿಗೆ ಹಿಡಿದುಕೊಟ್ಟಿದ್ದರು ಒಮ್ಮೆಯಂತೂ ಅವರು ತಮ್ಮ ಹೊರೆಗಳನ್ನು ಹೊಲದಲ್ಲಿ ಬೀಸಾಡಿ ಓಡಿ ಹೋಗಿದ್ದರು.

ಶಾಣು ಸಿಟ್ಟನಿಂದ ಸಿಡಿದ. ಅವರಿಗೆ ಕೆಟ್ಟಕೆಟ್ಟ ಬಯ್ಗಳು ಬಯ್ಯುತ್ತ ಬಂದ ಅವನ ಬಯ್ಗಳ ಸುರಿಮಳೆಯಿಂದ ಕೇರಿಯೆಲ್ಲ ನಡುಗಿತು. ಕೇರಿಯ ಜನರೆಲ್ಲ ಹೊರಗೆ ಬಂದು ನಿಂತುಕೊಂಡಿದ್ದರು. ಕೇರಿಗೆ ಬರುತ್ತಲೆ ಸೀತವ್ವನನ್ನು ನೋಡಿ ಅವನು 'ನೋಡಿದೆಯೇನವ್ವ ಆ ಸರಾಯಿ ಒಯ್ಯುವವರು ಭಯಾನಕವಾದ ಒದರಿಕೋತಿದ್ರು ದೆವ್ವದ ಹಂಗ ಕೂಗು ಹಾಕ್‌ತಿದ್ರು, ಇಂಥ ಒಳ್ಳೆ ನನ್ನ ಅಂಬೂ ದೆವ್ವ ಹ್ಯಾಂಗಾಗತಾಳ? ನಾಳೆ ಬರಲಿ ಅಂವಾ ಹ್ಯಾಂಗ ಜಾಡಿಸ್ತೀನಿ ನೋಡು"

ಮುಸ್ಸಂಜೆ ಅವರೆಲ್ಲ ಕೇರಿಗೆ ಬಂದರು. ಇಷ್ಟು ಶುಭ್ರವಾದ ಉಡುಗೆ ತೊಡುಗೆ ಧರಿಸಿದ ಮಂದಿ ಕೇರಿಗೆ ಬಂದು ಎಷ್ಟೋ ವರ್ಷಗಳಾಗಿದ್ದವು ಸಖಾರಾಮ ಪೈಜಾಮ ಮತ್ತು ಜುಬ್ಬ ಹಾಕಿದ್ದ. ಶೀಲಾ ಬೆಲೆಬಾಳುವ ಸೀರೆ ಉಟ್ಟಿದ್ದಳು. ಅವಳು ಸೀರೆಗೆ ಮ್ಯಾಚಿಂಗ್ ಕುಪ್ಪುಸ ತೊಟ್ಟಿದ್ದಳು ಅವಳ ಕೊರಳಲ್ಲಿದ್ದ ಮಂಗಳಸೂತ್ರ ಶುದ್ಧ ಬಂಗಾರದ್ದೆ? ಬಂಗಾರದ ಲೇಪನ ಮಾಡಿದ್ದೆ? ಎಂದು ಸ್ಪಷ್ಟವಾಗಿ ತಿಳಿಯುತ್ತಿರಲಿಲ್ಲ. ಕೈಯಲ್ಲಿ ಲಕಲಕ ಹೊಳೆಯುವ ಹ್ಯಾಂಡ ಬ್ಯಾಗ್ ಇತ್ತು. ಇಂಥ ಹ್ಯಾಂಡಬ್ಯಾಗ್ ಕುಂಬಾರರು ಮೊದಲಬಾರಿ ನೋಡುತ್ತಿದ್ದರು.

ಸಖಾರಾಮ ನಟಿ ಶೀಲಾಳನ್ನು ಮದುಮಗಳನ್ನಾಗಿ ಕರೆದುತಂದಿದ್ದ. ಶೀಲಾ ಕೇರಿಗೆ ಬಂದಳು ಅಲ್ಲಿಯ ತಂಪುನೆರಳು ತಣ್ಣನೆಯ ಗಾಳಿಯಲ್ಲಿ ಅವಳ ಮನಸ್ಸು ಅರಳಿಕೊಂಡಿತು. ಅವಳು ಸಖಾರಾಮನನ್ನು ಹಿಂಬಾಲಿಸಿ ಅವನ ಮನೆ ಸೇರಿದಳು.

ಮನೆಗೆ ಬಂದ ಬಳಿಕ ಸಖಾರಾಮನು ತನ್ನ ಮನೆಯಲ್ಲಿದ್ದ ಒಂದು ದೊಡ್ಡ ಮಣೆಯನ್ನು ತಂದುಕೊಟ್ಟು ಕೋಣೆಯಲ್ಲಿ ಕೂಡಲು ಹೇಳಿದ. ಅಂಗಳದಲ್ಲಿದ್ದ ಅವನ ತಂದೆ ಪರಸೊ ಆ ಹಜಾರಕ್ಕೆ ಹೋದ. ಒಳಗಿದ್ದ ಹೆಂಡತಿಗೆ ಅವನು 'ಎಲ್ಲಿದ್ದೀ ನೀನು ಬಾ ಇಲ್ಲಿ' ಎಂದು ಕೂಗಿ ಹೇಳಿದ. ಅವಳು ಹೊರಗೆ ಬಂದು ಸ್ವಲ್ಪ ಹೊತ್ತು ಅವರಿಬ್ಬರನ್ನು ಒಂದೇ ಸವನೆ ನೋಡುತ್ತ ನಿಂತುಕೊಂಡಳು. ಶೀಲಾಳ ಕೊರಳಲ್ಲಿ ಮಂಗಳಸೂತ್ರವಿತ್ತು. ಹಿಂದೊಮ್ಮೆ ಶೀಲಾ ಸಖಾರಾಮನನ್ನು ಹುಡುಕಿ ಬಂದದ್ದು ಅವಳಿಗೆ ನೆನಪಾಯಿತು.

"ಏನಪ್ಪ ಇದು ?' ಎಂದು ಅವಳು ಸಖಾರಾಮನನ್ನು ಕೇಳಿದಳು.

"ಅವ್ವಾ ನಾವು ಶೆಜವಾಡ ಗುಡ್ಯಾಗ ಮದವಿ ಮಾಡಿಕೊಂಡ್ವಿ"

ತಂದೆ ತಾಯಿಯ ಪಿತ್ತ ಕೆದರಿತು. ಆದರೆ ಮುಂದೆ ಒಂದು ಅಪರಿಚಿತ ಹೆಣ್ಣು ಮಗಳು ಕುಳಿತಿದ್ದಳು. ಅವಳ ಮೈಮೇಲೆ ಹೊಸ ಹೊಸ ಬಟ್ಟೆಗಳಿದ್ದವು.

"ನಮಗೆ ಹೇಳಬ್ಯಾಡೇನಪ್ಪ?" ತಂದೆಯ ದನಿ ಎತ್ತರಕ್ಕೇರಿತ್ತು.

"ಹೇಳೇನು ಆಗತಿತ್ತು ? ಅವರ ಕಡಿಯವ್ರು ತಯಾರ ಇರ್ಲಿಲ್ಲ. ಮದವಿಗ ನಾಲ್ಕಾರು ಮಂದಿ ಇದ್ರು, ಅವ್ರೂ ಹೊರಗಿನವರೇ"

ಈ ನೋವು ಜಾನಕಿಯಿಂದ ಸಹಿಸುವುದಾಗಲಿಲ್ಲ. ಅವಳು ಹೊರಗೆ ಬಂದು ೀತವ್ವನನ್ನು ಕೂಗಿ ಕರೆದಳು "ಸೀತ ಮಾವ್‌ಶಿ... ಒಂದೀಟು ಮನೆಗೆ ಬಂದು ಹೋಗ್ರಿ" ಅವಳು ಬರುವಾಗ ಅಂಗಳದ ಹೊರಗೆ ತುಂಬ ಜನ ನಿಂತಿದ್ದನ್ನು ಕಂಡಳು. ಅವರೆಲ್ಲ ತುಂಬ ಕುತೂಹಲದಿಂದ ನೋಡುತ್ತಿದ್ದುದು ನಗುತ್ತಿದ್ದುದು ಗುಸುಗುಸು ಮಾತಾಡು ತ್ತಿದ್ದುದು ಕಾಣುತ್ತಿತ್ತು. ಇನ್ನು ಮುಂದೆ ಅವರು ಅಂಗಳದಲ್ಲಿಳಿದು ಕುಣಿಯಬಹುದು ಪಟಾಕಿ ಹೊಡೆಯಬಹುದು.

ಸೀತವ್ವ ಬಂದವಳೇ ಸರಸರ ಮನೆಯ ಒಳಗೆ ಧಾವಿಸಿದಳು ಜಾನಕಿ ಹೇಳಿದಳು 'ನೋಡವ್ವ ಸೀತ ಮಾವ್‌ಶಿ... ಇವರು ಮದವಿ ಆಗಿ ಬಂದಾರಂತವ್ವ" ಅವಳ ಮಾತಿನಲ್ಲಿ ಕಳವಳವಿತ್ತು.

"ಮದುವಿ ಮಾಡಿಕೊಂಡು ಬಂದ್ರಾ? ಅಥವಾ ಸುಮ್ಮ ಕೊಳ್ಳಿಗೆ ಕರಿಮಣಿ ಕಟ್ಟಿಕೊಂಡು ಬಂದ್ರಾ?" ಎಂದು ಶೀಲಾಗೆ ಸೀತವ್ವ ನೇರವಾಗಿ ಪ್ರಶ್ನಿಸಿದಳು.

ಅವಳು ಮುದುಡಿಕೊಂಡು ಕೂತಿದ್ದಳು. ಅವಳು ಕೀರಲುಧ್ವನಿಯಲ್ಲಿ "ಫೋಟೋ ತೆಗೆದಿದ್ದಾರಲ್ಲ. ನನ್ನ ಕಾಕಾನ ಮಗಳು ಮದವಿಗೆ ಬಂದಿದ್ಲು".

"ಅಂವಾ ನಾಟಕಾ ಮಾಡಿಕೊಂತಾ ಊರೂರು ತಿರಗ್‌ತಾನ ನಿನ್ನ ಹೊಟ್ಟೆ ಹೊರಿತಾನಂತೇನು? ನಿನಗೆ ಸಂಬಾಳಸ್ತಾನಂತೇನು? ಅಥವಾ ಬಿಳಿ ಬ್ರಾಹ್ಮಣ ಸಿಕ್ಕಾನಂತ ಮದವಿ ಮಾಡಿಕೊಂಡ್ಯೊ"

"ನಾಳೆ ಬಸರಾದರ ಹೊಟ್ಟೆ ಮುಂದ ಮಾಡಿಕೊಂಡು ನಾಟಕದಾಗ ಕುಣೀತಿ ಏನು?"

ಶೀಲಾಗೆ ಈ ಮಾತು ಚುಚ್ಚಿದುವು. ಅವಳ ಕಣ್ಣಾಲಿಗಳು ಒದ್ದೆಯಾದವು. ಸಾವಿರಾರು ಪ್ರೇಕ್ಷಕರ ಮುಂದೆ ಬಡಬಡ ಮಾತಾಡಿ, ಹಾಡಿ ಜನರ ಹೃದಯ ಕಲಕುವ ನಟನೆ ಮಾಡಿದ ಹೆಣ್ಣು, ಶೀಲಾ ಮುದುಡಿ ಮಂಕಾಗಿ ಕೂತಿದ್ದಳು. ಅವಳು ಕೇಳಿದಳು "ಅವರಿಗೆ ಗಡಗಿ ಮಾಡಲಿಕ್ಕೆ ಬರೋದಿಲ್ಲೇನು."

"ಕುಂಬಾರರ ಹುಡುಗರಿಗೆ ಗಡಗಿ ಮಾಡಾಕ ಹೇಳಿಕೊಡಬೇಕೇನು ? ಅಂವಾ ಗಡಗಿ ಮಾಡಿದ್ರ ನೀ ತಲೀ ಮ್ಯಾಲ ಹೆಡಗಿ ಇಟಗೊಂಡು ಮಾರಾಕ ಹೋಗ್‌ಬೇಕಾಗತದ. ಮಣ್ಣ ಕಲಿಸೂದು, ಬಡಿಯೂದು, ತಟ್ಟೂದೂ ಮಾಡಬೇಕಾಗತದೆ"

ಶೀಲಾ ಈಗ ಸ್ವರ ಏರಿಸಿ ಹೇಳಿದಳು "ನಾನೂ ಯೋಚನೆ ಮಾಡೇ ಬಂದಿದ್ದೀನಿ. ಊರಲ್ಲಿ ನಟಿಗೆ ಯಾವ ಬೆಲೆಯಿದೆ? ಕೆಲವರು ನೋಡಿ ತಮಾಷೆ ಮಾಡ್ತಾರೆ."

ತಾಯಿ ಜಾನಕಿ ಮಧ್ಯೆ ಪ್ರಶ್ನಿಸಿದಳು.

"ಈಕೆ ಜಾತಿ ಯಾವ್ದಂತ ತಿಳಿವಲ್ಲದವ್ವ?"

ಸೀತವ್ವ ಹೇಳಿದಳು 'ನಮ್ಮ ಕುಂಬಾರ ಮಂದಿಗಿಂತ ಕಡಮೆ ಜಾತಿಯವಳಲ್ಲ ಅಲ್ಲ ಆಕಿ ನಮ್ಮ ಮಂದ್ಯಾಗೂ ದೇವಳಿ ಕುಂಬಾರರದಾರ. ಅವರ ಕೂಡ ನಾವು ಈಗ ಊಟ – ಮದವಿ ಸಂಬಂಧ ಎಲ್ಲಾ ಮಾಡತೇವಿ. ಗಡದ ಮ್ಯಾಲಿನ ರಾಯನ ಮಗಳು ಈಕಿ ನಾ ಕೇಳೇನಿ ಈಕಿ ಬಗ್ಗೆ"

ಜಾನಕಿ ಒಂದೂ ಮಾತನಾಡದೆ ನಿಂತಳು. ಸೀತವ್ವ ಸಖಾರಾಮನನ್ನು ಮುಂದೆ

ಕರೆದಳು ಮದುಮಗಳೊಂದಿಗೆ ತಂದೆ ತಾಯಿಗೆ ನಮಸ್ಕಾರ ಮಾಡಲು ಹೇಳಿದಳು. ಅವರಿಬ್ಬರೂ ತಾಯಿ ತಂದೆಯವರನ್ನು ನಮಸ್ಕರಿಸಿ ಅಲ್ಲಿದ್ದ ಹಿರಿಯರಿಗೆಲ್ಲ ಕಾಲು ಮುಟ್ಟಿ ನಮಸ್ಕಾರ ಮಾಡಿದ್ದರು. ಶೀಲಾ ಸರಿಯಾಗಿ ಬಗ್ಗಿ ಪ್ರತಿಯೊಬ್ಬರ ಕಾಲು ಮುಟ್ಟಿ ನಮಸ್ಕರಿಸುತ್ತಿದ್ದುದನ್ನು ನೋಡಿ ಎಲ್ಲರಿಗೂ ಆಕೆಯ ಬಗ್ಗೆ ಗೌರವ ಭಾವನೆಯು ಉಂಟಾಯಿತು. ಒಳ್ಳೆಯ ಸ್ವಭಾವದ ಹುಡುಗಿ ಎಂದು ಎಲ್ಲರೂ ಒಕ್ಕೊರಲಿನಿಂದ ಸರ್ಟಿಫಿಕೇಟ್ ಕೊಟ್ಟರು, ಅನಂತರ ಶೀಲಾ ತನ್ನ ಹ್ಯಾಂಡಬ್ಯಾಗಿನಿಂದ ಒಂದು ಸೀರೆ ಹೊರತೆಗೆದು ಜಾನಕಿಯ ಕೈಯಲ್ಲಿಟ್ಟಳು. ಎಲ್ಲೆಲ್ಲೂ ಒಂದು ಬಗೆಯ ಆತ್ಮೀಯತೆ ಮೂಡಿತು. ಹೆಣ್ಣು ಮಕ್ಕಳು ಮುಂದೆ ಬಂದು ಸೀರೆ ಮುಟ್ಟಿ ನೋಡಿ ಪ್ರಶಂಸಿಸುತ್ತಿದ್ದರು.

ಎರಡನೆಯ ದಿನ ಕೆಲವರು ಹೊಲದ ಹುಡಿಮಣ್ಣಿನಲ್ಲಿ ಧಪಾ ಧಫ್ ಹೆಜ್ಜೆ ಹಾಕುತ್ತ ಬರುತ್ತಿರುವುದು ಕಾಣಿಸಿತು. ಧರ್ಮುನ ಮಗ ಪ್ರೇಮಾನಂದ ಗಡಿಗೆ ಒಣ ಹಾಕಲು ಬಿಸಿಲು ಹುಡುಕುತ್ತ ಕೇರಿಯ ಕಡೆ ಬರುತ್ತಿದ್ದ. ಅವನು ಆ ಬರುವ ಜನರನ್ನು ನೋಡಿದ. ಅವನಿಗೆ ಅರ್ಥವಾಯಿತು. ಅವರೆಲ್ಲ ಗಡ ಎಂಬ ಹಳ್ಳಿಯಿಂದ ಬರುತ್ತಿದ್ದಾರೆಂದು. ಅವರು ಯಾಕೆ ಬರುತ್ತಿದ್ದಾರೆಂಬುದೂ ಅವನಿಗೆ ತಿಳಿಯಿತು.ಅವನು ಮಡಕೆಗಳನ್ನು ಅಲ್ಲಿಯೇ ಬಿಟ್ಟು ಶಿವರಾಮನ ಮನೆಗೆ ಓಡಿದ. "ಶಿವರಾಮಣ್ಣ ಆ ಮಂದಿ ಗಡದಿಂದ ಬರಾಕ ಹತ್ಯಾರ, ಶೀಲಾಗ ಕರಕೊಂಡು ಹೋಗಾಕ ಬರಾಕ ಹತ್ಯಾರಂತ ಕಾಣತದ. ನಾವು ಆಕಿಗ ಒಯ್ಯಾಕ ಬಿಡಬಾರದು."

ಶಿವರಾಮ ಜಾಗ್ರತನಾದ. ಅವನು ತಕ್ಷಣ ಪರಶೂನ ಮನೆಗೆ ಓಡಿದ.ಅವನು ಸಖಾರಾಮನಿಗೆ "ಅವರು ಬರಾಕ ಹತ್ಯಾರ. ಬಂದ ಸುಮ್ಮ ಜಗಳಾ ತಗೀತಾರ ಹುಡುಗೀನ ಎಳಕೊಂಡು ಹೋಗಾಕ ನೋಡಬಹುದು. ನೀ ನಿನ್ನ ಹೇಂತಿನ್ನ ಕರಕೊಂಡು ಹಿಂದಿನ ಗುಡ್ಡದಾಗ ಅಡಗಿ ಕುಂತುಕೊ ನಾವು ಇಲ್ಲಿ ನೋಡತೀವಿ ಏನಾಗ್ತದಂತ"

ಸಖಾರಾಮ ಮತ್ತು ಶೀಲಾ ಉಟ್ಟ ಬಟ್ಟೆಯಲ್ಲಿ ಲಗುಬಗೆಯಿಂದ ಬೆಟ್ಟದ ಕಡೆಗೆ ಓಡಿದರು. ಹೊಲದ ಬದಿಯಲ್ಲೊಂದು ಪುಟ್ಟ ಬೆಟ್ಟವಿತ್ತು. ಅಲ್ಲೊಂದು ದೊಡ್ಡ ನೇರಳೆ ಮರವಿತ್ತು. ಅದರ ಹಿಂದೆ ಅವರಿಬ್ಬರೂ ಹೋಗಿ ಅಡಗಿ ಕುಳಿತರು. ಅಷ್ಟರಲ್ಲಿ ಆ ಜನರು ಕುಂಬಾರ ಕೇರಿಯ ಮುಂದೆ ಹಾಜರಾದರು. ಅವರು ಐದು ಜನರಿದ್ದರು. ಅವರಲ್ಲಿ ಒಂದಿಬ್ಬರು ಮಾತ್ರ ಗಟ್ಟಿಮುಟ್ಟಾಗಿದ್ದರು. ಶೀಲಾ ತಂದೆ ರಾಯಾ ಕುಳ್ಳಾಗಿದ್ದ. ಉದ್ದ ಮುಖದವನಾಗಿದ್ದ. ಅವನ ತಲೆಯು ಬೋಳಾಗಿತ್ತು. ತಲೆಯ ಮೇಲೆ ಒಂದೂ ಕೂದಲಿರಲಿಲ್ಲ. ಮತ್ತೊಬ್ಬ ಬಿಳಿಯ ಬಟ್ಟೆಯಲ್ಲಿದ್ದ. ಅವನು ಬುದ್ಧಿವಾದ ಹೇಳಲು ಬಂದಂತಿತ್ತು. ಒಬ್ಬನಂತೂ ಎಷ್ಟು ಬಡಕಲಾಗಿದ್ದನೆಂದರೆ ಪಾಪ ಅವನನ್ನು ಯಾಕೆ ಕರೆದುಕೊಂಡು ಬಂದಿದ್ದಾರೊ ಎಂದೆನಿಸುತಿತ್ತು.

ಪ್ರೇಮಾನಂದ ಮತ್ತು ಶಿವರಾಮ ಮುಂದೆ ಬಂದರು ಹೊರಗಿನಿಂದ ಬಂದವರಲ್ಲೊಬ್ಬ ಕೇಳಿದ "ಸಖಾರಾಮನ ಮನೆ ಎಲ್ಲಿ ?"

"ಯಾವ ಸಖಾರಾಮ ?"

"ನಾಟಕದಲ್ಲಿ ಪಾರ್ಟ ಮಾಡ್ತಾನಲ್ಲ. ಅವನು"

"ಇಲ್ಲಿ ಕುಂಬಾರರೆಲ್ಲ ನಾಟಕ ಮಾಡ್ತಾರ ಮಾರಿಗ ಬಣ್ಣ ಹಚ್ಚಿಕೊಳ್ಳದೆ ಪಾರ್ಟ

ಾಡತಿರ್‍ತಾರ. ಒಬ್ಬೊಬ್ಬರು ಎಷ್ಟು ಪಸಂದಾಗಿ ಹಾಡು ಹಾಡ್‌ತಾರ ಗೊತ್ತೈತೇನು?"

ಮಧ್ಯೆ ಒಬ್ಬನ ತಲೆ ಬಿಸಿಯಾಯಿತು "ನಿಮ್ಮ ತಮಾಷಿ ಮಾತು ಕೇಳಾಕ ಬಂದಿಲ್ಲ ೀವು ಸಖಾರಾಮ ಎಲ್ಲಿದ್ದಾನೆ ಹೇಳ್ರಿ."

"ಯಾವ ಸಖಾರಾಮ ಅಂತೀರಿ ನೀವು ?"

"ಮತ್ತೆ ಈ ವಾಡೆಯಲ್ಲಿಎಷ್ಟು ಸಖಾರಾಮರಿದ್ದಾರೆ?

"ಪರಶುರಾಮನ ಮನ್ಯಾಗ ಒಬ್ಬ ಸಖಾರಾಮ ಅದಾನ. ಅಂವಾ ಕೈಗೆ ಸಿಗೂದಿಲ್ಲ. ಅಂವಾ ನಾಟಕ ಮಾಡಕೊಂತ ಊರೂರು ತಿರಗತಾನ. ಮುಂಜಾನಿ ಅವನಪ್ಪ ಯ್ಯುತ್ತಿದ್ದ. ಮೂರು ದಿನ ಆತಂತ ಅಂವಾ ಮನೀಗ ಬಂದೇ ಇಲ್ಲ."

"ಅವನ ಮನೆ ತೋರಿಸ್ರಿ ನಮಗೆ"

ಪ್ರೇಮಾನಂದ ಪರುಶೂನ ಮನೆಯ ಕಡೆ ಬೆರಳು ಮಾಡಿ ತೋರಿಸಿದ. ಅವರೆಲ್ಲ ಅವನ ಮನೆಯತ್ತ ಹೆಜ್ಜೆ ಹಾಕಿದರು. ಅಷ್ಟರಲ್ಲಿ ಕೇರಿಯ ಜನ ಊರಿನ ಜನ ಒಂದಾಗಿ ಬಂದಿದ್ದರು. ಇವರೆಲ್ಲ ಅವರ ಹಿಂದೆ ಹೊರಟಿದ್ದರು

ಅವರು ಪುರುಶ್ಯಾನ ಮನೆಗೆ ಹೋಗಿ ಅವನಿಗೆ ನಿಮ್ಮ ಮಗ ಎಲ್ಲಿದ್ದಾನೆ ಅಂತ ಕೇಳಿದಾಗ ಎಲ್ಲಿ ಹೋಗ್ಯಾನೊ ಏನೊ ಮಣ್ಣ ತಿನ್ನಾಕ. ಅಂವಾ "ಒಂದು ದೇವಳಿ ಹೆಣ್ಣು ಮಗಳ ಕೂಡ ಮದವಿ ಮಾಡಿಕೊಂಡಾನಂತ ಕೇಳೇನಿ. ಆ ಹೆಣ್ಣು ಮಗಳೇ ಅಂವಗ ಪುಸಲಾಯಿಸಿ ಮದವಿ ಮಾಡಿಕೊಂಡಳಂತೆ."

"ನಿಮ್ಮ ಜಾತಿ ಯಾವುದು ?"

"ಕುಂಬಾರರಿಗೆ ಜಾತಿಯಿಲ್ಲ. ಬ್ರಾಹ್ಮಣರನ್ನು ಹಿಡಿದು ದೇವಳಿ ತನಕ ಎಲ್ಲಾ ಜಾತಿನೂ ನಮ್ಮದು."

ಅವರಲ್ಲಿ ಮೈಕಟ್ಟಿನಲ್ಲಿ ಸದೃಢನಾದವನೊಬ್ಬ "ನಿಮ್ಮ ಆ ಲಫಂಗ ನಮ್ಮ ಹುಡುಗಿಯನ್ನು ಓಡಿಸಿಕೊಂಡು ಹೋಗಿದ್ದಾನೆ. ನಮ್ಮ ಕೈಗೇನಾದರೂ ಸಿಕ್ಕಿದರೆ ಅವನ ಮೂಳೆ ಪುಡಿಪುಡಿ ಮಾಡಿ ಇಡ್ತಿದ್ದೆ"

ಮೂರು ನಾಲ್ಕು ಹೆಣ್ಣು ಮಕ್ಕಳು ದೊಡ್ಡಕೆ ಬಾಯಿ ಮಾಡುತ್ತ ಮುಂದೆ ಬಂದರು. "ಏನಂತೀರಿ ನೀವು? ಅಂಥ ಒಳ್ಳೆ ಹುಡುಗನ್ನ ಲಫಂಗ ಅಂತೀರೇನು? ಆಕಿ ಅಂವಗ ಸುಮ್ನೆ ಪ್ರೀತಿಸಲಿಲ್ಲ. ಈಗ ಅವರಿಬ್ಬರೂ ಮದವಿ ಮಾಡಿಕೊಂಡಾರ. ಬಾಯಿ ಬಂದದ್ದೇನಾದರೂ ಮಾತಾಡಬ್ಯಾಡ್ರಿ"

"ನಾವು ಅವಳನ್ನು ಕುಂಬಾರರ ಮನೆಯಲ್ಲಿ ಇಡೋದಿಲ್ಲ. ಅವಳನ್ನು ಎಳಕೊಂಡು ಹೋಗ್ತೀವಿ." ಘನಶ್ಯಾಮನ ಹೆಂಡತಿ ರುಕ್ಮಿಣಿ ಮುಂದೆ ಸರಿದಳು ಅವಳು ಹೇಳಿದಳು "ಇನ್ನು ಆಕೀನ್ನ ಕರಕೊಂಡು ತವರ್ಮನೆಗೆ ಹೋಗೂದು ಅವಳ ಬಾಣಂತತನಕ್ಕ."

ಅದೇ ಹೊತ್ತಿಗೆ ಕೇರಿಯಲ್ಲಿ ಏನು ನಡೆದಿದೆ ಎಂದು ನೋಡಲು ಸಖಾರಾಮ ಕೊಂಬೆ ಏರಿ ನಿಂತಿದ್ದ ಮರದ ಆ ಗುಂಪಿನಲ್ಲಿ ಬಡಕಲು ಉದ್ದನೆಯ ಮನುಷ್ಯ ಅವನನ್ನು ಸರಿಯಾಗಿ ಗುರುತಿಸಿದ ಅವನು ಆ ಕಡೆ ಬೆರಳು ತೋರಿಸಿ ಜೋರಾಗಿ ಅರಚಿದ "ಅಲ್ನೋಡಿ ನೆರಳೆ ಗಿಡದಾಗ ಕುಂತಾನ ನೋಡ್ರಿ ಆ ಲಫಂಗ"

ಆ ಐದು ಜನ ನೆರಳೆ ಮರದತ್ತ ಓಡಿದರು. ಅವರ ಹಿಂದೆ ಕುಂಬಾರ ಕೇರಿಯ ಹಿರಿಯರು ಕಿರಿಯರು. ಹೆಂಗಸರು. ಮಕ್ಕಳು ಓಡತೊಡಗಿದರು... ಕೆಲವರು ಮುಂದೆ ಹೋಗುವ ಐವರನ್ನು ತಡೆಯುವ ಪ್ರಯತ್ನ ಮಾಡುತ್ತಿದ್ದರು. ಆದರೆ ಅವರು ಇವರನ್ನು ತಳ್ಳಿ ಮುಂದೆ ಹೋಗುತ್ತಿದ್ದರು.

ಅವರು ಓಡಿ ಬರುತ್ತಿದ್ದುದನ್ನು ನೋಡಿದ ಸಖಾರಾಮ ಮತ್ತು ಶೀಲಾ ಗದ್ದೆಯ ಬಯಲಲ್ಲಿ ಒಂದೇ ಸವನೆ ಓಡಲಾರಂಭಿಸಿದರು. ಕುಂಬಾರರೆಲ್ಲ ಅವರಿಗೆ ಕೂಗಿ ಹೇಳುತ್ತಿದ್ದರು "ಓಡಿ ..ಓಡ್ರಿ ... ಅಡವಿ ಕಡೆ ಹೋಗ್ರಿ".

ಹಿರಿಯರು, ಕಿರಿಯರೆನ್ನದೆ ಎಲ್ಲರೂ ಎದುಸಿರು ಬಿಡುತ್ತ ಓಡುತ್ತಿದ್ದರು. ಸಖಾರಾಮ ಮತ್ತು ಶೀಲಾ ಹೊಲ ದಾಟಿ ಕಾಡಿನತ್ತ ಓಡುತ್ತಿದ್ದರು. ಶುಭ್ರವಾದ ಬಿಸಿಲು ಬಿದ್ದಿತ್ತು. ಆ ಬಿಸಿಲಲ್ಲಿ ಅವರಿಬ್ಬರೂ ತೇಲುತ್ತಿದ್ದಂತೆ ಕಾಣುತ್ತಿತ್ತು.

ಆಗ ಅವರಲ್ಲಿದ್ದ ಬಡಕಲು ಉದ್ದನೆಯ ಮನುಷ್ಯ ಹೊಲದ ಬದ್ದಿಗೆ ಕಾಲು ಬಡಿದು ಧಪ್ಪನೆ ಬಿದ್ದ. ಕುಂಬಾರರು ಕೂಗಿಕೊಂಡರು "ಬಿದ್ದ ಬಿದ್ದ ಅಂವಾ..ಸತ್ತ" ಓಡುತ್ತಿದ್ದ ಎಲ್ಲರೂ ಏದುಸಿರು ಬಿಡುತ್ತ ನಿಂತರು. ಅವರು ಹಿಂತಿರುಗಿ ನೋಡುತ್ತ ನಿಂತಿದ್ದರು. ಹಿಂಬದಿಯಿಂದ ಬರುತ್ತಿದ್ದ ಕುಂಬಾರರೂ ಅವರ ಮುಂದೆ ಬಂದು ನಿಂತರು. ಸಖಾರಾಮ ಮತ್ತು ಶೀಲಾ ಸುಮಾರು ಹದಿನೈದು ನಿಮಿಷ ಓಡುತ್ತ ಹೋಗಿ ಕಾಡಿನಲ್ಲಿ ಸೇರಿಕೊಂಡಿದ್ದರು. ಅವರು ಕಾಡಿನಲ್ಲಿ ಗಿಡಮರದಂತೆ ಕಾಣುತ್ತಿದ್ದರು.

ಗಡದಿಂದ ಬಂದ ಜನ ಮತ್ತಿಷ್ಟು ಮುಂದೆ ಓಡಲು ಸಿದ್ಧರಾಗುತ್ತಿದ್ದಾಗ ಕುಂಬಾರರು ಅವರನ್ನು ತಡೆದು 'ನೀವು ಓಡಿ ಹ್ವಾದರೇನು ಉಪಯೋಗವಾಗೂದಿಲ್ಲ. ಅಡವ್ಯಾಗ ಹದಿನೆಂಟು ಹಾದಿಗಳಿವೆ. ಸಖಾರಾಮನಿಗೆ ಆ ದಾರಿಯೆಲ್ಲ ಗೊತ್ತೈತಿ ನೀವು ಹ್ವಾದರ ಸಿಕ್ಕು ಬೀಳತೀರಿ. ಅವರು ಇಷ್ಟೊತ್ತಿಗೆ ಪೈಂಗೀಣ ದಾರಿ ಹಿಡಿದಿರಬೇಕು. ಅಲ್ಲಿ ಅವರ ಗುರುತಿನ ಮಂದಿ ಅದಾರ."

ಆಗ ಪ್ರೇಮಾನಂದ. ಚಂದ್ರಕಾಂತ ಮೊದಲಾದ ತರುಣರು ಸುಮ್ಮನೆ ಎದೆಯುಬ್ಬಿಸಿ ಮುಷ್ಟಿಬಿಗಿದು ಗಂಭೀರರಾಗಿ ನಿಂತಿದ್ದರು.

ಆದರೂ ಹೊರಗಿನಿಂದ ಬಂದವರಲ್ಲಿಬ್ಬರು ಬಿಸಿಯಾಗಿ "ನಾವು ಅವರಿಗೆ ಬಿಡೋದಿಲ್ಲ. ಖಂಡಿತವಾಗೂ ಬಿಡೋದಿಲ್ಲ. ಹೆಂಗೆ ಕುಣಿಸ್ತೀವಿ ನೋಡ್ತಾ ಇರಿ" ಎಂದು ಹೇಳುತ್ತಿದ್ದರೂ 'ಕೈಲಾಗದ ಹೇಡಿಗಳ ಮಾತು' ಎಂದು ಅವರಿಗೂ ಗೊತ್ತಿತ್ತು.

ರಾಮಚಂದ್ರ ಹೇಳಿದ "ನೋಡಲಿಲ್ವೆ ನಿಮ್ಮ ಹುಡುಗಿ ಹ್ಯಾಂಗ ಗಂಡನ ಹಿಂದೆ ಓಡಿ ಹೋಗಾಕ ಹತ್ತಿದ್ಲು ಅಂತ. ಅವರನ್ನು ನೀವು ಅಡ್ಡಗಟ್ಟಾಕ ಆಗ್ತದೇನು ? ಒಂದಲ್ಲ ಒಂದು ದಿನ ಮದವಿ ಆಗಲೇಬೇಕಲ್ಲ ಎಷ್ಟು ದಿನಾ ಅಂತ 'ನಟಿ'ಯಾಗಿ ಇರುವುದಕ್ಕಾಗುತ್ತದೆ?"

"ಆದ್ರೆ ನಮಗೆ ಕುಂಬಾರರ ಮನೆ ಬೇಡವಾಗಿತ್ತು ದರಿದ್ರ ಧಂದೆ ನಿಮ್ಮದು" ಶೀಲಾಳ ತಂದೆ ಮಾತನಾಡಿದ.

ಆ ಮಾತಿಗೆ ಯಾವ ಕುಂಬಾರರೂ ಸಿಟ್ಟಾಗಲಿಲ್ಲ. ಯಾರೋ ಒಬ್ಬರು ಹೇಳಿದರು "ಹುಶಾರ್... ಏಳನೆಯ ಇಯತ್ತೆವರೆಗೆ ಅಂವಾ ಓದ್ಯಾನ. ಎಲ್ಲಾದರೂ ಮರ್ಯಾದೆಯಿಂದ

ಹೊಟ್ಟೆ ತುಂಬ್ಕೋತಾನ. ನಿಮ್ಮ ಮನಿ ಬಾಗಿಲಿಗೆ ಬರೂದಿಲ್ಲ ಅಂವಾ"

ಆ ಗುಂಪಿನಲ್ಲಿ ಶುಭ್ರವಾದ ಬಟ್ಟೆ ಧರಿಸಿದವನೊಬ್ಬ ಶೀಲಾ ಅವನ ಹಿಂದೆ ಗಿಡಗಂಟಿಯಲ್ಲಿ ಓಡಿ ಹೋದದ್ದು ನೋಡಿ ಆಶ್ಚರ್ಯವಾಯ್ತು. "ಅವಳ ನಸೀಬು ಅವಳೊಂದಿಗಿದ್ರೆ ನಾವಾರೂ ಏನ್ ಮಾಡೂದು?"

ಅವರು ಮತ್ತೆ ಕೇರಿಗೆ ಬಂದರು ಕೇರಿಗೆ ಬಂದ ಬಳಿಕ ಶೀಲಾಳ ತಂದೆ ಕಣ್ಣೀರು ಹಾಕ ತೊಡಗಿದ ಅಳುವಾಗ ಅವನ ಎದೆ, ತಲೆ, ಕತ್ತು ಗಡಗಡ ನಡುಗುತ್ತಿದ್ದವ. ಅಳುತ್ತಲೇ ಅವನು ಮಾತನಾಡುತ್ತಿದ್ದ. "ಅವಳು ನನ್ನ ಮಾತು ಕೇಳತಿದ್ಲು ನನ್ನನ್ನು ಗೌರವದಿಂದ ಕಾಣುತ್ತಿದ್ಲು. ಈವತ್ತು ಅವಳು ನನ್ನನ್ನು ನೋಡಿ ಓಡಿ ಹೋದ್ಲು ಎಂಥಾ ಜಾದೂ ಮಾಡಿದೀಯಪ್ಪ ಅವಳ ಮೇಲೆ"

ಅವರಲ್ಲಿದ್ದ ಒಬ್ಬ ತರುಣ ಗದರಿಸಿದ "ಅಳ್ತಿ ಯಾಕೆ ಬೇರೆಯವರ ಊರಿಗೆ ಬಂದು. ಅವಳದ್ದು ಅವಳು ಅನುಭವಿಸ್ತಾಳೆ ಬಿಡು"

ಪರಶೂ ಹಜಾರದಲ್ಲಿ ಚಾಪೆ ಹಾಕಿ ಅವರನ್ನು ಒಳಗೆ ಬಂದು ಕುಳಿತುಕೊಳ್ಳಲು ಎಷ್ಟು ವಿನಂತಿಸಿದರೂ ಅವರು ಕುಳಿತುಕೊಳ್ಳಲಿಲ್ಲ. ಹಾಗೆಯೇ ನಡೆಯ ತೊಡಗಿದರು. ಅವರು ಹೊಳೆ ದಾಟಿ ಹೋದ ಮೇಲೆ ಇಬ್ಬರು ಹುಡುಗರು ಕಾಡಿನತ್ತ ವಾಯುವೇಗದಲ್ಲಿ ಓಡಿದರು. ಅವರು ಕಾಡಿನತ್ತ ಮುಖ ಮಾಡಿ "ಸಖಾರಾಮ ಅವರು ಹೋದ್ರು .. ಹೋದ್ರು ಬರ್ರಿ ನೀವು" ಎಂದು ಕೂಗಿ ಕೂಗಿ ಹೇಳಿದರು.

ಸ್ವಲ್ಪ ಹೊತ್ತಿನ ನಂತರ ಅವರಿಂದ ಮರುಧ್ವನಿ ಬಂತು. ಕೆಲವು ನಿಮಿಷಗಳಲ್ಲಿ ಅವರು ಕಾಡಿನಿಂದ ಹೊರಗೆ ಬಂದರು. ಬೆಳಿಗ್ಗೆ ಲಕಲಕ ಹೊಳೆಯುತ್ತಿದ್ದ ಅವರು ಈಗ ಕಾಡಿನ ಹುಳದಂತೆ ಕಪ್ಪುಗಟ್ಟಿದ್ದರು. ಶೀಲಾಳ ಸುಂದರವಾದ ಮುಖ ಬೆವರಿನಿಂದ ತುಂಬಿತ್ತು. ಅವಳ ಕೆದರಿದ ಕೂದಲು ಮುಖದ ಮೇಲೆ. ಹಣೆಯ ಮೇಲೆ ಚದುರಿಬಿದ್ದಿದ್ದವು. ಅವರಿಬ್ಬರೂ ಹುಲ್ಲಿನ ಬುಡದಲ್ಲಿ ಅವಿತಿದ್ದರಿಂದ ಶೀಲಾಳ ಸೀರೆಗೆ ಹುಲ್ಲಿನ ಸೂಜಿಯಂತಹ ಚುಂಗುಗಳು ಅಂಟಿಕೊಂಡಿತ್ತು.

ಶೀಲಾ ದನಿಯೆತ್ತರಿಸಿ ಅವರಿಗೆ ಕೇಳಿದಳು ಅವರು ಹೋದ್ರಾ?.

"ಹೌದು ..ಹೋದರು ಓಡಿಸಿ ಬಿಟ್ಟೆವು'

"ಜಗಳಗಿಗಳ ಏನೂ ಆಗಲಿಲ್ಲವಲ್ಲ. ಯಾರೂ ಕೆಟ್ಟದ್ದೇನು ಮಾತಾಡಲಿಲ್ಲವಲ್ಲ?'

"ಛೆ..ಛೇ ಅವರೇ ನಮ್ಮನ್ನು ಗದರಿಸುತ್ತಿದ್ದರು. ಕುಂಬಾರರು ಜಗಳದಲ್ಲಿ ಸೋಲ್ತಾರೆ ವೈನಿ."

"ವೈನಿ ಎಂಬ ಮಾತು ಕೇಳಿದಾಗ ಶೀಲಾಳಿಗೆ ಈ ಜನ ತನ್ನನ್ನು ತಮ್ಮ ಗುಂಪಿನಲ್ಲಿ ಸೇರಿಸಿಕೊಂಡಿದ್ದಾರೆ ಎಂದೆನಿಸಿ ಖುಷಿಗೊಂಡಳು.

ಈಗ ಸೂರ್ಯ ನೆತ್ತಿಗೇರಿದ್ದ ಎಲ್ಲ ಕಡೆ ಕಣ್ಣು ಕೊರೈಸುವ ಬೆಳಕು ಹರಡಿತ್ತು ಊರಲ್ಲಿ. ಹೊಲದಲ್ಲಿ ಬೆಳಕಿನ ಸಾಗರ ತುಂಬಿಕೊಂಡಿತ್ತು. ಅವರು ಆ ಬೆಳಕಿನ ಸಮುದ್ರದಲ್ಲಿ ಕೈ ಬೀಸುತ್ತ ಕೇರಿಯ ಕಡೆ ಹೆಜ್ಜೆ ಹಾಕತೊಡಗಿದರು. ಆದರೆ ಕೇರಿಗೆ ಬಂದರೆ ಮಾತ್ರ ಅದೇ ಕಪ್ಪು ಕಪ್ಪಾದ ನೆರಳು. ಅಲ್ಲೊಂದು ಮಾವಿನ ಮರ ಕೈಪಸರಿಸಿಕೊಂಡು ನಿಂತಿತ್ತು. ಝುಗ ಝುಗ

ಬಿಸಿಲಿನ ಸಾಮ್ರಾಜ್ಯದಲ್ಲಿ ಕುಂಬಾರ ಕೇರಿಯಲ್ಲಿ ಪಸರಿಸಿದ ಆ ಕರಿಯ ನೆರಳು ಶೀಲಾಳಿಗೆ ಹಿಡಿಸಲಿಲ್ಲ. ಅವಳಿಗೆ ಆ ಕೇರಿ ಯಾರೋ ಎಷ್ಟೋ ದಿನಗಳಿಂದ ಮುಚ್ಚಿಟ್ಟಂತೆ ಕಾಣಿಸಿತು.

ಶೀಲಾ ಕೇವಲ ಮೂರು ತಿಂಗಳು ಕುಂಬಾರ ಕೇರಿಯಲ್ಲಿದ್ದಳು. ಈ ಮಧ್ಯೆ ಅವರಿಬ್ಬರೂ ಸೇರಿ ಮೂರು ನಾಲ್ಕು ನಾಟಕಗಳಲ್ಲಿ ಪಾತ್ರ ಮಾಡಿದರು. ಆನಂತರ ಅವಳ ತಂದೆ ಅವರಿಬ್ಬರ ಸಂಸಾರದಲ್ಲಿ ಮೂಗು ತೂರಿಸಲಿಲ್ಲ. ಹೊಸಾಳಿ ಎಂಬ ಹಳ್ಳಿಯಲ್ಲಿ ನಡೆದ ಒಂದು ನಾಟಕಕ್ಕೆ ಶೀಲಾಳ ತಂದೆ ಬಂದಿದ್ದ. ನಾಟಕ ಮುಗಿಯುವವರೆಗೂ ಕೂತಿದ್ದ. ಅನಂತರ ಮುಂದೆ ಬಂದು 'ಚೆನ್ನಾಗಿದ್ದೀಯಲ್ಲ ಮಗಳೆ' ಎಂದು ಕೇಳಿದ್ದ.

ಶೀಲಾಳ ಕಣ್ಣಾಲಿಗಳು ಒದ್ದೆಯಾದವು 'ಚೆನ್ನಾಗಿದ್ದೀನಿ ಅಪ್ಪಾ ಕಾಳಜಿ ಮಾಡಬೇಡಿ. ಮದ್ವೆಯಾಗಿ ಈಗ ಗಂಡನ ಮನೇಲಿದ್ದೀನಲ್ಲ ನಾನು" ಅಂದಳು.

ಈ ಮೂರು ತಿಂಗಳಲ್ಲಿ ಶೀಲಾ ಕುಂಬಾರರು ಮಾಡುವ ಎಲ್ಲ ಕೆಲಸ ಕಲಿತು ಮಾಡಿ ಮುಗಿಸಿದ್ದಳು ಕೆರೆಗೆ, ಗುಡ್ಡಕ್ಕೆ ಹೋಗಿ ಮಣ್ಣು ತಂದಳು, ಅದನ್ನು ಬಡಿದಳು. ಸಾಣಗೆಯಲ್ಲಿ ಸಾಣಿಸಿದಳು. ಕಲಿಸಿದಳು. ಮಣ್ಣು ಸಾಣಿಸುವಾಗ ಮೈಯೆಲ್ಲ, ಬಟ್ಟೆ ಬರೆಗಳೆಲ್ಲ ಧೂಳಿನಿಂದ ಆವರಿಸಿಕೊಳ್ಳುತ್ತಿದ್ದವು. ಅವಳೊಮ್ಮೆ ಬಟ್ಟೆ ಜಾಡಿಸಿ ಬೇರೆ ಮತ್ತೆ ಕೆಲಸದಲ್ಲಿ ತೊಡಗಿಕೊಳ್ಳುತ್ತಿದ್ದಳು.

ಮುಖ್ಯವಾಗಿ ಅವಳು ಮೃದು ಮಾತಿನ, ನಯ ನಡುವಳಿಕೆಯ ಹೆಣ್ಣಾಗಿದ್ದಳು. ಕುಂಬಾರ ಕೇರಿಯ ಜನಕ್ಕೆಲ್ಲ ಅವಳು ಆಪ್ತಳಾಗಿದ್ದಳು. ಒಂದು ದಿನ ಸೀತವ್ವ ಮತ್ತು ಶೀಲಾಳ ಅತ್ತೆ ಜಾನಕಿ ಒಂದು ಮಾತು ಹೇಳಿದರು "ಈಗ ಕುಂಬಾರ ಧಂದ್ಯಾಗ ಏನೂ ಉಳಿದಿಲ್ಲ. ಮಳೆಗಾಲದಾಗ ನಿನಗ ಹಸಿವು ತಡಕೊಳ್ಳಾಕ ಆಗಲಿಕ್ಕಿಲ್ಲ ಕುಂಬಾರರ ಕರುಳಿಗೆ ಅಭ್ಯಾಸವಾಗಿ ಹೋಗ್ಯೈತಿ. ನೀ ಸಖಾರಾಮನನ್ನು ಕರಕೊಂಡು ಗೋವೆಗೆ ಹೋಗು ನಿಮಗ ಇಬ್ಬರಿಗೂ ಬರಿಯಾಕ ಓದಾಕ ಬರ್‍ತದ."

ಶೀಲಾಳ ಮನಸ್ಸಿನಲ್ಲೂ ಇದೇ ವಿಚಾರ ಸುಳಿಯುತ್ತಿತ್ತೇನೊ. ಅವರ ಮಾಮಾ ಗೋವೆಯ ಸಾಂಖವಾಳೆಯಲ್ಲಿರುತ್ತಿದ್ದ ಮತ್ತೆ ಕೆಲ ಪರಿಚಿತರು ಗೋವೆಯಲ್ಲಿದ್ದರು ನಾಟಕದಲ್ಲಿ ಪಾತ್ರ ಮಾಡಿ ಅಭ್ಯಾಸವಾಗಿತ್ತು. ಕಳೆದ ನಾಲ್ಕಾರು ವರ್ಷಗಳಿಂದ ಅವಳು ಪಾತ್ರ ಮಾಡುತ್ತಿದ್ದಳು. ಅವಳು ನುರಿತ ನಟಿ ಎಂದು ಹೆಸರು ಗಳಿಸಿದ್ದಳು. ನಾಟಕ ಕ್ಷೇತ್ರದ ಅನೇಕರ ಪರಿಚಯ ಅವಳಿಗಿತ್ತು. ಒಂಬತ್ತನೆಯ ತರಗತಿಯವರೆಗೆ ಓದಿದ್ದಳು ಎರಡು ಬಾರಿ ಅವಳೊಬ್ಬಳೇ ಗೋವೆಗೆ ಹೋಗಿ ಬಂದಿದ್ದಳು. ಅವಳು ಸಖಾರಾಮನನ್ನು ಕರೆದುಕೊಂಡು ಗೋವೆಗೆ ಹೊರಟು ಬಿಟ್ಟಳು. ಹೋಗುವಾಗ ಶೀಲಾ ತನ್ನ ಅತ್ತೆಯ ಸೆರಗು ಹಿಡಿದು ಹೇಳಿದಳು "ನಾವು ಗೋವೆಗೆ ಹೋದರೂ ನಿಮ್ಮನ್ನು ಮರೆಯೋದಿಲ್ಲ. ಆಗಾಗ್ಗೆ ಬರ್‍ತಾ ಇರ್‍ತೀವಿ"

ಮೇ ತಿಂಗಳು ಮುಗಿಯುತ್ತ ಬಂದಿತು. ಕುಂಬಾರರಿಗೆ ಗಡಿಬಿಡಿ ಶುರುವಾಗಿತ್ತು. ಕೆರೆಯಲ್ಲಿ ಪಾದ ಮುಳುಗುವಷ್ಟು ನೀರಾದರೂ ಗಡಿಗೆಗಳಿಗೆ ಮಣ್ಣು ಸಿಗುವುದಿಲ್ಲ ಈಗ ಮಣ್ಣು ಒಣಗಿ ನಿಂತಿದೆ. ಒಣಗಿದ ಹೆಂಟೆಗಳನ್ನೇ ತಂದು ರಾಶಿ ಹಾಕಿಡಬೇಕು ತನ್ನ ಹೆಂಡತಿ ಕುಂಟಿ ಕಾಯಿಲೆ ಇದ್ದಾಳೆ ಎಂಬುದನ್ನು ನೋಡದೆ ಕುಂಬಾರ ಕೆರೆಗೆ ಕರೆದು

ಕೊಂಡು ಹೋಗುತ್ತಿದ್ದ ಮತ್ತು ಮಣ್ಣಿನ ಮಕರಿ ತುಂಬಿ ಆಕೆಯ ತಲೆಯ ಮೇಲಿಡುತ್ತಿದ್ದ. ತಾನು ಕತ್ತು ಕುಗ್ಗುವವರೆಗೆ ಮಕರಿಯಲ್ಲಿ ಹೆಂಟೆ ತುಂಬಿಕೊಳ್ಳುತ್ತಿದ್ದ ಮೊದಲೇ ನೈಕೈಯಲ್ಲಿ ಮಾಂಸವಿರಲಿಲ್ಲ. ಮೂಳೆಯ ಹಂದರ ತಲೆಯ ಮೇಲೆ ಮಕರಿಯನ್ನಿಟ್ಟು ಕೊಂಡು ಅತ್ತಿತ್ತ ಒಲಿಯುತ್ತ ನಡೆಯುತ್ತಿದ್ದ.

ದೂರದ ಗುಡ್ಡದಲ್ಲಿಯ ಕಾಡು ಒಳಸೇರಿತ್ತು. ಕಪ್ಪು ಕಪ್ಪಾದ ಆ ಸ್ಥಳದಲ್ಲಿ ಒಂದು ಹೊಗೆಯ ಪಟ್ಟಿ ಪಸರಿಸಿತ್ತು. ಅದಕ್ಕೆ ಮಳೆಯ ವಾಸನೆ ಬರುತ್ತಿದ್ದಂತೆ ಆ ವಾಸನೆ ಕುಂಬಾರರ ಮೂಗಿಗೆ ಬಡಿದಂತೆ ಕುಂಬಾರ ಅವಸರ ಮಾಡುತ್ತಿದ್ದ ಓಡಿದಂತೆ ಹೆಜ್ಜೆ ಹಾಕಿ ನಡೆಯುತ್ತಿದ್ದ.

ಘನಶ್ಯಾಮನು ಬೇಸಿಗೆ ಕಾಲದ ಕೊನೆಯ ಆವಿಗೆ ಹಾಕಲು ಕೊಂಚ ವಿಳಂಬ ಮಾಡಿದ್ದ. ಮಡಕೆ ಮಾಡುತ್ತ ಮಾಡುತ್ತ ಆತ ಒಮ್ಮೆಲೆ ಹಾಸಿಗೆ ಹಿಡಿದು ಮಲಗ ಬೇಕಾಯಿತು. ತಲೆ ಸುತ್ತು ಬಂದಂತೆ ಆಗುತ್ತಿತ್ತು. ತಲೆ ನೆಲಕ್ಕಾನಿಸಿ ಮಲಗಿ ಬಿಡೋಣ ಎಂದೆನಿಸುತಿತ್ತು. ಮಾಡಿಟ್ಟ ಮಡಕೆಗಳು ಒಣಗಿ ಬಿರುಕು ಬಿಡಲು ತಯಾರಾಗಿದ್ದವು. ಹೆಂಡತಿ ಮತ್ತು ಕಿರಿಯ ಮಗಳು ಸೇರಿ ಕೆಂಡಕ್ಕೆ ಬೇಕಾಗುವ ಕಟ್ಟಿಗೆ ಅದರ ಕೆಳಗೆ ಹಾಸು ಹಾಸಲು ಉರವಲು ಕಡ್ಡಿಗಳು, ಹುಲ್ಲು ತಂದಿಟ್ಟಿದ್ದರು. ಮೇಲಿನಿಂದ ಆವಿಗೆ ಮುಚ್ಚಲು ಹುಲ್ಲಿನ ಸಿಂಬಿ, ಕೆಂಪು ಮಣ್ಣುತಂದಿಟ್ಟದ್ದರು.

ಒಂದು ದಿನ ಮಧ್ಯಾಹ್ನ ಘನಶಾಮ ಆವಿಗೆಯ ಬಾಯಿಯ ಹತ್ತಿರ ಉದ್ದವಾದ ಸ್ಥಳದಲ್ಲಿ ಚಿಕ್ಕಪುಟ್ಟ ಕಟ್ಟಿಗೆ. ಉರುವಲು ಕಡ್ಡಿಗಳು. ಹುಲ್ಲು ತಂದು ಹಾಸಿಟ್ಟು ಅದರ ಮೇಲೆ ಪ್ರತಿಯೊಂದು ಮಡಿಕೆಯ ಬುಡಕ್ಕೆ ಸಿಂಬಿಯನ್ನಿಟ್ಟು ದೊಡ್ಡ ಮಡಕೆಗಳ ಉದ್ದಕೆ ಮೂರು ಹೊರೆಗಳನ್ನು ಪೇರಿಸಿದ. ಅದರ ಮೇಲೆ ಮತ್ತೆರಡು ಹೊರೆಗಳು ಒಟ್ಟಿಗೆ ಒಂಬತ್ತು ಹೊರೆಗಳು. ಪ್ರತಿಯೊಂದು ಹೊರೆಗೂ ಆರು ಮಡಕೆಗಳು ಅದರಲ್ಲಿ ಘುಮಟೆ, ಪುಟ್ಟಕೊಡ, ಚಿಕ್ಕ ಚಿಕ್ಕ ಗಡಿಗೆಗಳು. ದೊಡ್ಡ ಗಡಿಗೆಗಳು. ಅಗಲ ಬಾಯಿಯ ಪಾತ್ರೆ, ಕೊಡ ಇತ್ಯಾದಿ ಅವಿಗೆಯಲ್ಲಿ ತುಂಬುವಷ್ಟರಲ್ಲಿ ಸೀತವ್ವನ ಸೊಸೆ ಬಂದು ಬುಟ್ಟಿ ತುಂಬ ಕಾವಲಿ. ಅಗಲ ಬಾಯಿಯ ಮುಚ್ಚಳ, ಹಣತೆಗಳನ್ನು ತಂದು ಘನಶ್ಯಾಮನ ಹೇರಿಟ್ಟ ಹೊರೆಯ ಸಂದಿಗೊಂದಿಗಳಲ್ಲಿ ತೂರಿಸಿಟ್ಟಳು.

ಕುಂಬಾರರ ವಿಧವೆ ಹೆಣ್ಣು ಮಕ್ಕಳು ತಾವು ಸ್ವತಂತ್ರವಾಗಿ ಅವಿಗೆಯನ್ನಿಟ್ಟು ತಾವು ಮಾಡಿದ ಪಾತ್ರೆಪಡಗಗಳನ್ನು ಸುಡುತ್ತಿರಲಿಲ್ಲ. ಯಾರದಾದರೂ ಆವಿಗೆ ಸಿದ್ಧವಾದರೆ ಅವರ ಆವಿಗೆಯಲ್ಲಿ ತಮ್ಮ ಪಾತ್ರೆಗಳನ್ನು ಇಟ್ಟು ಸುಟ್ಟುಕೊಳ್ಳುತ್ತಿದ್ದರು.

ಮಡಕೆಯ ಹೊರೆ ಪೇರಿಸಿದ ಬಳಿಕ ಘನಶ್ಯಾಮನು ಅದರ ಮೇಲೆ ಹುಲ್ಲಿನ ದಪ್ಪ ಹಾಸು ಹಾಸಿದ. ಆವಿಗೆಯ ಹೊರಭಾಗದಲ್ಲಿ ಕೆಂಪು ಮಣ್ಣಿನ ತೆಳು ಲೇಪನ ಮಾಡಿದ. ಈಗ ಆವಿಗೆ ಆನೆಯ ಬೆನ್ನಿನಂತೆ ಕಾಣುತ್ತಿತ್ತು. ಅನಂತರ ಅವನು ಆ ಆವಿಗೆಯ ಮುಂಭಾಗದಲ್ಲಿ ಕಟ್ಟಿಗೆಯನ್ನೊಟ್ಟಿ ದೊಡ್ಡ ದೊಡ್ಡ ಕೆಂಡಗಳನ್ನು ಮಾಡಿಕೊಂಡ. ಅವುಗಳನ್ನು ಸ್ವಲ್ಪ ಸ್ವಲ್ಪ ಮುಂದಕ್ಕೆ ತಳ್ಳಿ ಆವಿಗೆಯನ್ನು ಬಿಸಿ ಮಾಡಿಕೊಂಡ. ಆವಿಗೆ ಮೊದಲು ಬಿಸಿ ಮಾಡಿಕೊಳ್ಳದೆ ಆವಿಗೆಗೆ ಬೆಂಕಿ ಹಚ್ಚಿದರೆ ಭಟ್ಟಿಯೊಳಗಿದ್ದ ಪಾತ್ರೆಗಳೆಲ್ಲ ಪುಡಿಪುಡಿಯಾಗಿ ಹೋಗುತ್ತದೆ. ಆದ್ದರಿಂದ ಘನಶ್ಯಾಮ ಮೊದಲು ಆವಿಗೆ ಬಿಸಿ

ಮಾಡಿಕೊಂಡು ಭಟ್ಟಿಯ ಒಳಗಿರುವ ಕಡ್ಡಿ ಹುಲ್ಲುಗಳಿಗೆ ಬೆಂಕಿಯಿಡುತ್ತಿದ್ದ. ಆವಿಗೆ ಒಳಗೆ ಬೆಂಕಿ ಹೊತ್ತಿಕೊಂಡು ಬಿಸಿಯೇರ ತೊಡಗಿತು. ಭಟ್ಟಿಯೊಳಗೆ ಬೆಂಕಿ ಪಸರಿಸುತ್ತಿದ್ದಂತೆ ಆವಿಗೆಯ ಮೇಲ್ಭಾಗದಲ್ಲಿ ಹೊಗೆ ಹೊರಗೆ ಹೋಗಲು ತೂತು ಮಾಡಿ ಬೆಂಕಿ ಆವಿಗೆಯ ತುಂಬ ಹರಡುವಂತೆ ಮಾಡಿದ ಈಗ ಎರಡೂ ಬದಿಯ ಕಿವಿಯಂತಿರುವ ಕಿಂಡಿಯಿಂದ ಮೇಲಿನ ತೂತಿನೊಳಗಿಂದ ಬೆಂಕಿ ಭಗಭಗ ಉರಿಯುತ್ತಿರುವುದು ಕಾಣಿಸಿತು. ಒಳಗಿನ ಹೊಗೆ ಹೊರಗೆ ಬರಲಾರಂಭಿಸಿತು.

ಮಧ್ಯಾಹ್ನದ ನಂತರ ಮೂರು ಗಂಟೆಗೆ ಅವನು ಆವಿಗೆ ಬಿಸಿ ಮಾಡಲಾರಂಭಿಸಿದ್ದ. ಮಡಕೆಗಳು ಸುಟ್ಟು ಮೇಲೆ–ಕೆಳಗಿನ ಬೆಂಕಿ ನಂದಿಸುವುದರಲ್ಲಿ ರಾತ್ರೆಯ ಹತ್ತು ಗಂಟೆಯಾಯಿತು. ಸ್ವಲ್ಪ ತಡವಾದರೂ ಘನಶ್ಯಾಮನ ಆವಿಗೆ ಮಳೆಯ ಬಾಯಿಗೆ ಬೀಳಲಿಲ್ಲ. ಆದರೆ ಅವನ ನಂತರ ಎರಡೇ ದಿನಗಳಲ್ಲಿ ಯಶವಂತ ಹಾಕಿದ ಆವಿಗೆ ಮಾತ್ರ ಮಳೆಯ ಕೋಪಕ್ಕೆ ತುತ್ತಾಯಿತು. ಅವನು ಆವಿಗೆಯ ಒಳಗೆ ಮಡಕೆಗಳನ್ನು ಪೇರಿಸಿ. ಮಣ್ಣು ಮೆತ್ತಿ ಇನ್ನೇನು ಬೆಂಕಿಯ ಕೆಂಡಗಳನ್ನು ತಯಾರಿಸಿ ಆವಿಗೆಯ ಬಾಯಿಗೆ ತಳ್ಳಬೇಕೇನ್ನುವುದರಲ್ಲಿ ಬಿರುಗಾಳಿ ಎದ್ದಂತೆ ಗಾಳಿ ಬೀಸತೊಡಗಿತು. ಆವಿಗೆಗೆ ಬೆಂಕಿಯಿಟ್ಟರೆ ಮಳೆಯ ಗಾಳಿಗೆ ಆವಿಗೆಯ ಹೊರ ಆವರಣ ಗಾಳಿಗೆ ಹಾರಿ ಹೋಗಬಹುದೆಂಬ ಚಿಂತೆ ಕಾಡಿತು.

ಗಾಳಿಯೊಂದಿಗೆ ಗಗನವೂ ಮೋಡಗಳಿಂದ ತುಂಬಿ ಬಂತು ಈಗ ಮಳೆ ನಿಂತಿತು. ಆದರೆ ಮೋಡ ನೀರಾಗಿ ಕುಸಿಯತೊಡಗಿತು. ಯಶವಂತನಿಗೆ ಏನು ಮಾಡಬೇಕೆಂಬುದೇ ಹೊಳೆಯಲಿಲ್ಲ. ಆವಿಗೆಯ ತೆರೆದು ಅದರಲ್ಲಿ ಪೇರಿಸಿದ ಮಡಕೆಯ ಹೊರೆಯನ್ನು ಹೊರಗೆತ್ತಿ ಇಡಬೇಕಾಗಿತ್ತು. ಅದೇ ಹೊತ್ತಿಗೆ ಅವನ ಹೆಂಡತಿ ಮಕ್ಕಳು ಓಡೋಡಿ ಬಂದರು. ಅವರೆಲ್ಲರೂ ಸೇರಿ ಆವಿಗೆಯಲ್ಲಿದ್ದ ಮಡಕೆಯ ಹೊರೆಗಳನ್ನೆಲ್ಲ ಹೊರಗೆ ತೆಗೆದು ಅದನ್ನು ಬಿಚ್ಚಿ ಹಸಿ ಮಡಕೆಗಳನ್ನು ನೀರು ಅಂಟದ ಸ್ಥಳದಲ್ಲಿ ಕಾದಿರಿಸಿದರು. ಮಳೆಯ ಆರ್ಭಟ ಇನ್ನೂ ಹೆಚ್ಚಾಯಿತು. ಕೊನೆಗೆ ನಾಲ್ಕು ಹಸಿ ಮಡಕೆಗಳು ನೀರಿನಲ್ಲಿ ತೊಯ್ದು ಕೆಸರಿನಲ್ಲಿ ಕೆಸರಾಗಿ ಸೇರಿಕೊಂಡವು.

ಮೇ ತಿಂಗಳಲ್ಲಿ ಆರಂಭವಾದ ಮಳೆ ಮಧ್ಯೆಮಧ್ಯೆ ಕಣ್ಣು ಮುಚ್ಚಾಲೆ ಆಟ ಆಡಿ ಮಾಯವಾಗಿ ಹೋಗುತ್ತಿತ್ತು. ಮತ್ತೆ ಒಂದೆರಡು ದಿನ ಬಿಟ್ಟು ಆಕಸ್ಮಿಕ ದಾಳಿ ಮಾಡುತಿತ್ತು. ಇದರಿಂದ ಕೆಲವರು ಮಾಡಿಟ್ಟ ಹಸಿ ಮಣ್ಣಿನ ಮಡಕೆಗಳು ಮನೆಯ ಮೂಲೆಯಲ್ಲಿ ಕೂತು ಬಿಟ್ಟಿದ್ದವು. ಅವುಗಳನ್ನು ಕೆಲವರು ಬಿಸಿಲಿದೆಯೆಂದು ಅಂಗಳದಲ್ಲಿ ಒಣಗಲು ಇಟ್ಟಾಗಲೇ ಆಕಸ್ಮಿಕ ಮಳೆ ಸುರಿದು ಅವು ಮತ್ತೆ ಮಣ್ಣಾಗಿದ್ದವು. ಆಸರೆ ಮತ್ತು ಮಳೆಯಿಲ್ಲದೆ ಕುಂಬಾರರ ಕೆಲಸ ನಡೆಯುತ್ತಿರಲಿಲ್ಲ. ಮಣ್ಣು ಒಣಗಿಸಿ, ಬಡಿದು, ಸಾಣಿಸಿ ಸ್ವಚ್ಛ ಮಾಡಲು. ಮಾಡಿಟ್ಟ ಮಡಕೆಗಳನ್ನು ಒಣಹಾಕಲು, ಆವಿಗೆ ಉರಿಸಲು. ಮಾರಾಟಕ್ಕೆ ಹೋಗಲು ಆಸರೆ ಮತ್ತು ಬಿಸಿಲು ಬೇಕೇ ಬೇಕಾಗಿತ್ತು.

ಈ ವರ್ಷ ಮಳೆಗಾಲ ಕೊಂಚ ಬೇಗ ಆರಂಭವಾಗಿತ್ತು. ಒಂದು ಸಾರೆ ಬೀಳತೊಡಗಿದ ಮಳೆ ಮಧ್ಯೆ ನಿಲ್ಲಲೇ ಇಲ್ಲ ಬೇಸಿಗೆಯಲ್ಲಿ ಸುಟ್ಟಿಟ್ಟ ಮಡಕೆಗಳನ್ನು

ಬಂಬಾರರ ಹೆಣ್ಣು ಮಕ್ಕಳು ಹೆಡಿಗೆಯಲ್ಲಿ ತುಂಬಿಕೊಂಡು ಮಾರಾಟಕ್ಕೆ ಹೋಗುತ್ತಿದ್ದರು. ದಾರಿಯಲ್ಲಿದ್ದಾಗ ಒಮ್ಮೆಲೆ ಮಳೆ ಬಿರುಸಾಗಿ ಬೀಳುತ್ತಿತ್ತು. ತಲೆಯ ಮೇಲಿನ ಗಡಿಗೆಗಳಲ್ಲಿ ನೀರು ತುಂಬಿ ಭಾರವಾಗುತ್ತಿತ್ತು. ಆಗ ಹೆಡಿಗೆಯನ್ನು ಮೊದಲು ಮಂಡಿಯ ಮೇಲಿಳಿಸಿ ಅನಂತರ ನೆಲಕ್ಕಿಡುತ್ತಿದ್ದರು. ಒದ್ದೆಯಾದ ಹಸಿ ಬಟ್ಟೆಗಳಲ್ಲಿಯೆ ಆ ಹೆಣ್ಣು ಮಕ್ಕಳು ಮಡಕೆ ಮಾರಾಟ ಮಾಡುತ್ತಿದ್ದರು. 'ದಯಮಾಡಿ ತಗೊಳ್ರಿ... ಹಸಿದ ಹೊಟ್ಟೆಗಾಗಿ ತಂದಿದ್ದೀವಿ' ಎಂದು ಹೇಳುತ್ತಿದ್ದರು. ಮನೆಗೆ ಬಂದು ಕೆಮ್ಮುತ್ತ ಕೂಡುತಿದ್ದರು. ಕೂದಲಲ್ಲಿದ್ದ ಹೇನುಗಳನ್ನು ಕೆದರುತ್ತಿದ್ದರು.

ಮಳೆಗಾಲದ ಮೂರು ತಿಂಗಳಂತೂ ಕುಂಬಾರ ಕೆಲಸ ನಡೆಯುತ್ತಿರಲಿಲ್ಲ. ಗಂಡಸರಂತೂ ಸಂಪೂರ್ಣ ನಿರೋದ್ಯೋಗಿಗಳಾಗುತ್ತಿದ್ದರು. ಅವರು ಮೈ ಮುದುಡಿಸಿ ಕೊಂಡು ಮನೆಯಲ್ಲಿ ಬಿದ್ದಿರುತ್ತಿದ್ದರು. ಹಸಿವು ಸಹಿಸುವುದು. ಹಸಿವು ಗೆಲ್ಲುವುದು ಇವೆರಡೇ ಅವರ ಕೆಲಸವಾಗಿತ್ತು. ತುಂಬಿದ ಆಕಾಶದಲ್ಲಿ ಸೂರ್ಯ ಮೂಡಿದ್ದು. ಮುಳುಗಿದ್ದೂ ಗೊತ್ತಾಗುತ್ತಿರಲಿಲ್ಲ. ಹಸಿವಿನ ಚಕ್ರದ ಮೆಲೆ ದಿನವೆಣಿಸಬೇಕಾಗುತಿತ್ತು. ಹೊಲಗಳಲ್ಲಿ ಮಾತ್ರ ನಾಲ್ಕೂ ಕಡೆ ಹಸಿರು ಮೇಲೆದ್ದು ಬರುತ್ತಿತ್ತು. ಊರೆಲ್ಲ ತೃಪ್ತ, ಸಂತುಷ್ಟ ಮಯವೆಂದೆನಿಸುತಿತ್ತು.

ಇತ್ತ ಕುಂಬಾರರೆಲ್ಲ ಹಸಿವೆಯಿಂದ ತತ್ತರಿಸುತ್ತಿದ್ದರು. ಕೇರಿಯಲ್ಲಿ ಮೌನ ಆವರಿಸಿತ್ತು. ಆಗಸದಲ್ಲಿಯ ಮೋಡಗಳ ಹೊಗೆ ಮನೆಗಳಲ್ಲಿ ನುಗ್ಗುತ್ತಿತ್ತು.

ಶ್ರಾವಣ ಬರುವವರೆಗೆ ಕುಂಬಾರರೆಲ್ಲ ನೆಲಕಚ್ಚಿರುತ್ತಿದ್ದರು. ಅನ್ನದ ಪಾತ್ರೆಗಳನ್ನೆಲ್ಲ ತೊಳೆದು ಡಬ್ಬು ಹಾಕುತ್ತಿದ್ದರು. ಹೆಣ್ಣು ಮಕ್ಕಳು ಕೈಯಲ್ಲಿ ಕೈಚೀಲ ಹಿಡಿದು ರೈತರ ಕೇರಿಯಲ್ಲಿ. ವ್ಯಾಪಾರಿಗಳ ಅಂಗಡಿಗಳಲ್ಲಿ ಠಳಾಯಿಸಿ ಉದ್ರಿ ಸಾಮಾನು ಸಿಗುತ್ತದೆಯೇ ಎಂದು ನೋಡುತ್ತಿದ್ದರು. ಕೆಲವರು ಸೊಂಟಕ್ಕೆ ಟವೆಲ್ಲು ಸುತ್ತಿಕೊಂಡು ಹೊಲದ ನಟ್ಟಿ ಕೆಲಸಕ್ಕೆ ಹೋಗುತ್ತಿದ್ದರು ಒಂದು ಸ್ವಲ್ಪ ಅಕ್ಕಿಗಾಗಿ ದಿನವಿಡೀ ದುಡಿಯುತ್ತಿದ್ದರು. ಸೊಂಟವೆಲ್ಲ ದಣಿದು ಬಾಗುತಿತ್ತು. ಅವರು ನಿಯತ್ತಿನಿಂದ ಕೆಲಸ ಮಾಡಿದರೂ ಮಾಲಿಕರ ಬಯ್ಗಳು ತಿನ್ನಬೇಕಾಗುತಿತ್ತು. ಹಸಿವು ತಡೆಯಲಾಗದೆ ಕೈಕಾಲು ಕಂಪಿಸುತ್ತಿದ್ದವು. ಸಹಿಸಲಸಾಧ್ಯವಾದಾಗ ಒಂದು ಬದಿಗೆ ಸರಿದು ಹೊಲದಲ್ಲಿ ಇಳಿದು ಬರುತಿದ್ದ ನೀರಿನ ಗುಟುಕು ಕುಡಿದು ಕೊಂಚ ಸಮಾಧಾನ ಮಾಡಿಕೊಳ್ಳುತ್ತಿದ್ದರು.

ಗದ್ದೆಯ ನಟ್ಟಿಯ ಕೆಲಸಕ್ಕೆ ಹೋದರೆ ಮಧ್ಯಾಹ್ನದ ಊಟ ಹೊಲದಲ್ಲೇ ತಂದು ಕೊಡುತ್ತಿದ್ದರು. ಮನೆಯ ಸಮೀಪ ಹೊಲ ಇದ್ದರೆ ಕೆಲ ಹೆಂಗಸರು ತಮಗಿಟ್ಟ ಊಟದಲ್ಲಿ ಸ್ವಲ್ಪ ಉಂಡು ಮಿಕ್ಕಿದ್ದನ್ನು ಅದೇ ಎಲೆಯಲ್ಲಿ ಸುತ್ತಿಕೊಂಡು ಬಂದು ಮನೆಯಲ್ಲಿ ಹಸಿದು ಅನ್ನಕ್ಕಾಗಿ ಕಾಯುತ್ತಿದ್ದ ಮಕ್ಕಳಿಗೆ ಕೊಡುತ್ತಿದ್ದರು. ಒಂದು ದಿನ ಗೋಪಾಳನ ಹೆಂಡತಿ ಗುಲಾಬಿ, ಮುಕುಂದ ನಾಯಕರ ಹೊಲದಲ್ಲಿ ನಟ್ಟಿ ಕೆಲಸಕ್ಕೆ ಹೋಗಿದ್ದಳು. ಒಂದು ಕಾಲಿನಿಂದ ಕುಂಟಿಯಾದರೂ ಕೆಲಸ ಮಾಡುವುದರಲ್ಲಿ ಎಲ್ಲರಿಗಿಂತ ಮುಂದಾಗಿ ರುತ್ತಿದ್ದಳು. ಅವಳು ಚೆನ್ನಾಗಿ ಕೆಲಸ ಮಾಡುತ್ತಾಳೆಂದು ಅವಳು ಕುಂಟುತ್ತಿದ್ದರೂ ಅವಳನ್ನು ಹೊಲದ ಕೆಲಸಕ್ಕೆ ರೈತರು ತಪ್ಪದೇ ಕರೆಯುತ್ತಿದ್ದರು. ಮುಕುಂದನ ಸೊಸೆ

ಹೊಲಕ್ಕೆ ಊಟ ತೆಗೆದುಕೊಂಡು ಬಂದಿದ್ದಳು. ಅವಳ ಅತ್ತೆಯ ಜೊತೆಗೆ ಇನ್ನಿಬ್ಬರು ಸಂಬಳಕ್ಕೆ ದುಡಿಯುತ್ತಿದ್ದರು. 'ಭ್ಹಾಳ ಹಸಿವೆಯಾಗಿದೆಯವ್ವ' ಎಂದು ಆ ಸೊಸೆಗೆ ಹೇಳಿ ಒಂದಿಷ್ಟು ಹೆಚ್ಚು ಅನ್ನ 'ಎಲೆಯಲ್ಲಿ ಹಾಕಿಸಿಕೊಂಡಿದ್ದಳು. ಸ್ವಲ್ಪ ಹೊತ್ತು ಬಾಯಿಗೆ ಒಂದೆರಡು ತುತ್ತು ಇಟ್ಟಂತೆ ಮಾಡಿ ಎಲ್ಲರ ಕಣ್ಣು ತಪ್ಪಿಸಿ ಒಂದು ಬದಿಗೆ ಸರಿಯುತ್ತ ಸರಿಯುತ್ತ ಹೊಲದಲ್ಲಿ ಅತ್ತಿತ್ತ ವಾಲುತ್ತ ಮನೆಯ ಕಡೆ ದಾಪುಗಾಲು ಹಾಕತೊಡಗಿದಳು

"ಏಯ್. ..ಎಲ್ಲಿ ಹೊಂಟಿಯವ್ವ"?

"ಮನ್ಯಾಗ ಎಲ್ಲಾರೂ ಮುಂಜಾನಿಯಿಂದ ಉಪಾಸ ಅದಾರವ್ವ, ಗಡಾನೆ ಬರ್ತೀನಿ"

ಮುಕುಂದನ ಸೊಸೆ ಅವಳನ್ನು ಮತ್ತೆ ಕರೆದಳು. ತಾನು ಊಟ ಮಾಡಲೆಂದು ಎಲೆಯ ಮೇಲೆ ಹಾಕಿಕೊಂಡ ಅರ್ಧ ಅನ್ನ ಅವಳ ಎಲೆಯಲ್ಲಿ ಹಾಕಿದಳು. ಪಾತ್ರೆಯಲ್ಲಿದ್ದ ಗಟ್ಟಿ ಹುಳಿಯನ್ನು ಅವಳಿಗೆ ಒಂದು ಪಾತ್ರೆಯಲ್ಲಿ ಹಾಕಿಕೊಟ್ಟಳು ಗುಲಾಬಿಯ ಹೃದಯ ತುಂಬಿ ಬಂತು ಅವಳು ಹೇಳಿದಳು "ನೀವು ಸಾಕ್ಷಾತ ದೇವಿ ಅವ್ವಾ"

...ಚವತಿ ಹಬ್ಬದಲ್ಲಿ ಗಣಪತಿ ಮೂರ್ತಿ ಮಾಡುವ ರಾಮಚಂದ್ರ ಒಂದು ದಿನ ಬೆಳಗ್ಗೆಯೆ ಅಂಟು ಮಣ್ಣು ತರಲು ಕೆರೆಗೆ ಹೋಗಿದ್ದ. ಕಂಠಮಟ ನೀರಿನಲ್ಲಿ ಮುಳುಗಿ ಇಳಿದು ಅವನು ಅಂಟುಮಣ್ಣು ಎತ್ತಿ ಹಾಕುತ್ತಿದ್ದ ಅದರ ಒಂದು ದೊಡ್ಡ ಚೆಂಡು ಮಾಡಿ ಸಾಗುವಾನಿ ಎಲೆಗಳಲ್ಲಿ ಸುತ್ತಿ ತಲೆಯ ಮೇಲಿಟ್ಟುಕೊಂಡ. ಈ ಮಧ್ಯೆ ಸಣ್ಣ ಮಳೆಯೂ ಹನಿಯುತ್ತಿತ್ತು.ಗಾಳಿ ತಂಪಾಗಿ ಬೀಸುತಿತ್ತು. ನಾಲ್ದೆಸೆಯಲ್ಲಿ ಹಚ್ಚ ಹಸುರಾದ ಹೊಲಗಳು ಹುಲ್ಲಿನಿಂದ ತುಂಬಿದ ಒಡ್ಡುಗಳು. .. ಹನಿ ಹನಿ ಮಳೆ ಮತ್ತು ತಂಪು !

ನೀರಿನಲ್ಲಿ ಮುಳುಗಿ ಮಣ್ಣು ತೆಗೆಯುತ್ತಿದ್ದಾಗ ಅವನ ಹಸಿವು ಉಲ್ಬಣಗೊಂಡಿತ್ತು. ಈಗ ತಲೆಯ ಮೇಲೆ ಮಣ್ಣಿನ ಚೆಂಡು ಇಟ್ಟುಕೊಂಡು ನಡೆಯುವಾಗ ಅವನು ನಿಶ್ಶಕ್ತಿಯಿಂದ ಸೋತು ಹೋಗಿದ್ದ. ರಾತ್ರಿ ಅವನು ಸರಿಯಾಗಿ ಊಟ ಮಾಡಿರಲಿಲ್ಲ. ಬೆಳಗ್ಗೆ ತಿಂಡಿಯೂ ತಿಂದಿರಲಿಲ್ಲ. ಹಸಿವು ಸಂಪೂರ್ಣ ನಿತ್ರಾಣಗೊಳಿಸಿತ್ತು. ಹೊಲದ ಮೇರೆಗಳಲ್ಲಿ ಅವನು ನಡೆಯುವಾಗ ಹೆಂಡ ಕುಡಿದವರಂತೆ ಅತ್ತಿತ್ತ ಒಲೆಯುತ್ತಿದ್ದ ಕೆಲವು ವೇಳೆ ಅವನು ಹೆಜ್ಜೆ ತಪ್ಪಿ ಹೊಲದಲ್ಲಿ ಜಾರುತ್ತಿದ್ದ–ಹೇಗೆ ಹೇಗೊ ನಡೆದು ಅವನು ಕೇರಿಗೆ ಹತ್ತಿರವಾದ. ಆಬೋಲೆ ಮನೆಯಲ್ಲಿದ್ದ ಒಂದು ಗಡಿಗೆಯನ್ನೆತ್ತಿಕೊಂಡು ಊರಲ್ಲಿ ಹೋಗಿ ಯಾರಿಗಾದರೂ ಕೊಟ್ಟು ಸ್ವಲ್ಪ ಅಕ್ಕಿ ಸಿಗುತ್ತದೆಯೆ ಎಂದು ನೋಡಲು ಹೊರಟಿದ್ದಳು. ಅವಳು ಅವನು ಅತ್ತಿತ್ತ ಯಾಕೆ ಒಲಿಯುತ್ತಿದ್ದಾನೆಂದು ನೋಡಿದಳು... ಅಷ್ಟರಲ್ಲಿ ಅವನು ತಲೆಯ ಮೆಲಿನ ಮಣ್ಣಿನ ಮುದ್ದೆಯೊಡನೆ ಹೊಲದಲ್ಲಿ ಧೊಪ್ಪನೆ ಬಿದ್ದು ಬಿಟ್ಟ. ಅವಳು ಕೂಗಿಕೊಂಡಳು ಓಡಿ ಬರ್‍ರಪೋ ಆನಂದೀ.. ಆನಂದೀ ..ನಿನ್ನ ಗಂಡ ಹೊಲದಾಗ ಬಿದ್ದ ಬಿಟ್ಟಾನ ನೋಡು"

ಆನಂದಿ ಮತ್ತು ಇತರರು ಅತ್ತ ಓಡುತ್ತ ಹೋದರು ಆಬೋಲೆಯೂ ಅವರ ಹಿಂದೆ ಓಡಿಹೋದಳು ಎಲ್ಲರೂ ಸೇರಿ ಅವನನ್ನು ಎತ್ತಿಕೊಂಡು ಬಂದರು. ರಾಮಚಂದ್ರ "ಏನ್ ಮಾಡುದು ಹಸಿವು ತಡೆಯಾಕ ಆಗಲಿಲ್ಲ. ಕುಂಬಾರರ ಹಸಿವು ಯಾರಿಗೂ ತಿಳಿಯಂಗಿಲ್ಲ. ಉಗುಳು ನುಂಗುತ್ತಾ ಇರ್‍ತಾನಂತ ತಿಳಿಯಂಗಿಲ್ಲ."

ಆನಂದಿ ಕಾಯಿಸಲು ಇಟ್ಟ ಗಂಜಿ ಇನ್ನೂ ಒಲೆಯ ಮೇಲೆ ಕುದಿಯುತ್ತಿತ್ತು. ಪಕ್ಕದ ಮನೆಯ ಗೋಕುಳ ಓಡುತ್ತ ಹೋಗಿ ಗಂಜಿ ತೆಗೆದುಕೊಂಡು ಬಂದಳು.

ಮಕ್ಕಳು ದಿನವಿಡೀ ಹಸಿವೆಯಿಂದ ಕೂಗಿಕೊಳ್ಳುತ್ತಿದ್ದವು. 'ತಿನ್ನಾಕ ಕೊಡು. ಊಟ ನೀಡು' ಎಂದು ಕಾಡುತ್ತಿದ್ದವು. ಒಂದು ಬಗೆಯ ನೆಲದ ಈರುಳ್ಳಿ ಬೆಳೆಯುತ್ತಿತ್ತು. ನೆಲ ಅಗೆದು ಅವುಗಳನ್ನು ಕಿತ್ತು ತರಬೇಕಿತ್ತು. ಅದು ಆಲೂಗೆಡ್ಡೆಯಂತೆ ಬೇಯಿಸಿ ತಿನ್ನಬಹುದಿತ್ತು. ಅದು ರುಚಿಯಾಗಿಯೂ ಇರುತಿತ್ತು. ಆದರೆ ಪಚನ ಸುಲಭ ವಾಗಿರಲಿಲ್ಲ. ಅದನ್ನು ತಿಂದರೆ ಪೂರ್ತಿ ದಿನ ಹಸಿವೆಯಾಗುತ್ತಿರಲಿಲ್ಲ. ಆದರೆ ಕಾಡಿಗೆ ಹೋಗಿ ಅದನ್ನ ಅಗೆದು ತಂದು ತಿನ್ನುವುದು ಸಭ್ಯರ ಲಕ್ಷಣವೆಂದೆನಿಸಿಕೊಳ್ಳುತ್ತಿರಲಿಲ್ಲ. ಆದರೆ ಹೆಂಗಸರು ಯಾರಿಗೂ ಕಾಣದಂತೆ ಹೋಗಿ ಅಗೆದು ನೆಲದ ಈರುಳ್ಳಿ ಸೀರೆಯಲ್ಲಿ ಸುತ್ತಿಕೊಂಡು ಬರುತ್ತಿದ್ದರು. ಬೆಳಗ್ಗೆದ್ದು ಮಕ್ಕಳಿಗೆ ಅವುಗಳನ್ನು ಬೇಯಿಸಿ ಕೊಡುತ್ತಿದ್ದರು. ಅದರಿಂದ ದಿನವಿಡೀ ಹಸಿವಿನ ಚಿಂತೆ ಇರುತ್ತಿರಲಿಲ್ಲ.

ಪುರುಶ್ಯಾನ ಹೆಂಡತಿ ಜಾನಕಿ ಸ್ವಲ್ಪ ಗಟ್ಟಿ ಮೂಳೆಯವಳಾಗಿದ್ದಳು. ಅವಳು ರೈತರಲ್ಲಿ ಸುಗ್ಗಿಯ ಕಾಲದಲ್ಲಿ ಭತ್ತ ಬಡಿಯಲು ಗಾಳಿಗೆ ತೂರಲು ಹೋಗುತ್ತಿದ್ದಳು. ಅವರು ಕೊಟ್ಟ ಅಕ್ಕಿ-ಭತ್ತಗಳಿಂದ ಕೆಲವು ದಿನ ಸಾಗಿಸುತ್ತಿದ್ದಳು. ಒಂದು ದಿನ ಬೆಳಗ್ಗೆ ಎದ್ದು ಪಾತ್ರೆ ಪಡಗಗಳನ್ನು ತಡಕಿ ನೋಡಿದರೂ ಒಂದು ಕಾಳು ಅಕ್ಕಿ ಇರಲಿಲ್ಲ. ಗಂಡ, ಮಕ್ಕಳಿಗಂತೂ ಏನಾದರೂ ಕುದಿಸಿ ಹಾಕಬೇಕಿತ್ತು. ಅವಳಿಗೆ ಹೆಚ್ಚಾಗಿ ಮಧ್ಯದ ಹುಡುಗ ವಿಶ್ವಾಸನ ಬಗ್ಗೆ ವಿಶೇಷ ಕಾಳಜಿಯಿತ್ತು ಅವನಿಂದ ಹಸಿವೆ ತಡೆದುಕೊಳ್ಳುವುದಾಗುತ್ತಿರಲಿಲ್ಲ. ಹೊರಗೆ ಮಳೆಯೂ ಜೀಳುತ್ತಿತ್ತು. ಪೂರ್ತಿ ಕೇರಿ ಒದ್ದೆಯಾದ ಕಂಬಳಿಯಂತಾಗಿತ್ತು.

ಅವಳು ಎದ್ದು ರೈತ ಉತ್ತಮನ ಮನೆಗೆ ಹೋದಳು "ಮಾಮಾ ಒಲೆಯ ಮ್ಯಾಲ ನೀರಿಟ್ಟು ಬಂದೇನಿ. ಒಂದರ್ಧ ಪಾಯ್ಲಿ ಅಕ್ಕಿ ಕೊಡ್ರಿ, ಸುಗ್ಗಿಗೆ ಬಂದು ಮುಟ್ಟಸ್ತೀನಿ"

ಉತ್ತಮ ಹೇಳಿದ "ನೀವು ಕುಂಬಾರರಲ್ಲ. ನೀವು ಬಿಸಲಾಗ ನಿಂತು ಕೆಲಸ ಮಾಡೂ ಮಂದಿ ಅಲ್ಲ. ಸುಮ್ನ ಲೆಕ್ಕಕ್ಕೆ ಅಷ್ಟೇ ನೀವು. ಬಿತ್ತನೆ ಮಾಡಬೇಕಾದರೂ ಅಷ್ಟೇ ಒಂದು ಮುಷ್ಟಿ ಕಾಳು ಬಿಡೋದರಾಗ ನಿಮಗ ಸೊಂಟ ನೋವು ಬರತ್ಯೆತಿ. ತಲೆಯ ಮ್ಯಾಲ ಧಾನ್ಯದ ಹೊರೆ ಇಟ್ಟಗೊಂಡು ನಡೆಯುವಾಗ ಕಾಲಾಗಿನ ಇರುವೆಯೂ ಸಾಯೂದಿಲ್ಲ. ಆದರ ನಿಮ್ಮ ಮಂದಿ ಮಾತಿಗ ತಪ್ಪೂದಿಲ್ಲ ಅಂತ ನಾವು ನಿಮಗೆ ಬೆಲೆ ಕೊಡ್ತೇವಿ."

"ನನ್ನ ಕೆಲ್ಸ ಅಂಥಾದ್ದಲ್ಲ ಮಾಮಾ. ನನ್ನ ಕೆಲ್ಸ ನೋಡಿಲ್ಲ ನೀವು. ಮಳೆ ಬಂದ್ರ ನಾನೇ ಹೋಗಿ ಹೊಲದಾಗ ಕಡಿದು ಹಾಕಿದ ಭತ್ತದ ಹೊರೆ ತಂದು ಮ್ಯಾಲ ಹಾಕ್ತೀನಿ"

ಆದರೆ ಉತ್ತಮ ಅಕ್ಕಿ ಇಲ್ಲ ಎಂದು ಹೇಳಿ ನಾಲ್ಕು ಪಾಯಲಿ ಭತ್ತ ಅಳೆದು ಕೊಟ್ಟ ಆ ಭತ್ತ ತಲೆಯ ಮೇಲಿಟ್ಟುಕೊಂಡು ಬರುವಾಗ ಜಾನಕಿ ಈ ಮಳೆಯಲ್ಲಿ ಈ ಭತ್ತ ಹೇಗೆ ಬೇಯಿಸುವುದು? ಹೇಗೆ ಒಣಗಿಸುವುದು. ಹೇಗೆ ಅಕ್ಕಿ ಮಾಡುವುದು ಎಂದು ಅವಳು ಚಿಂತಿಸುತ್ತ ಬರುತ್ತಿದ್ದಳು.

ಅವಳು ಮನೆಗೆ ಬಂದವಳೇ ಅದರಲ್ಲಿ ಸ್ವಲ್ಪ ಭತ್ತ ಮಡಕೆಯಲ್ಲಿ ಹಾಕಿ ನೀರು ಹಾಕಿ ಕುದಿಸಲು ಇಟ್ಟಳು. ಹಳೆಯ ಭತ್ತ ಸ್ವಲ್ಪ ಬೇಯಿಸದೆ ಕುಟ್ಟಿದರೆ ಪುಡಿಪುಡಿಯಾಗಿ

ಹೋಗುತ್ತದೆಯೆಂದು ಅವಳು ಬೇಯಲು ಇಟ್ಟಳು ಸ್ವಲ್ಪ ಬೆಂದ ಕೂಡಲೇ ಅವಳು ಒಲೆಯಿಂದ ಕೆಳಗಿಳಿಸಿದಳು. ಅನ್ನ ಬಗ್ಗಿಸಿ ನೀರು ಸೋಸಿದಂತೆ ಭತ್ತದ ನೀರು ಸೋಸಿ ತೆಗೆದಳು. ಬಳಿಕ ಒಲೆಯ ಮೇಲೊಂದು ತಗಡು ಇಟ್ಟು ಅದರ ಮೇಲೆ ಗೋಣಿಯ ತಟ್ಟು ಹಾಸಿ ಅದರ ಮೇಲೆ ಸೋಸಿದ ಭತ್ತ ಪಸರಿಸಿ ಒಲೆಯಲ್ಲಿ ಸಣ್ಣ ಪ್ರಮಾಣದ ಬೆಂಕಿಯಿಟ್ಟು ಆ ಭತ್ತವನ್ನು ಅತ್ತಿಂದಿತ್ತ ಇತ್ತಿಂದತ್ತ ಸರಿಸುತ್ತ ಅದರಲ್ಲಿನ ನೀರು ಉಗಿಯಾಗಿ ಹೋಗುವಂತೆ ಮಾಡಿದಳು.ಅಷ್ಟು ಮಾಡುವುದರಲ್ಲಿ ಹೊತ್ತು ಇಳಿದಿತ್ತು.

ಅದು ಒಣಗಿದ ಬಳಿಕ ಒರಳಿನಲ್ಲಿ ಹಾಕಿ ನಿಧಾನವಾಗಿ ಕುಟ್ಟಿದಳು ಅಕ್ಕಿ ಮಾಡಿದಳು ಅದನ್ನು ಗೆರಸೆಯಲ್ಲಿ ಹಾಕಿ ತೌಡು ಬೇರ್ಪಡಿಸಿದಳು. ಒಂದು ಪಾತ್ರೆಯಲ್ಲಿ ಹಾಕಿಕೊಂಡಳು. ಅವಳ ಮಧ್ಯದ ಹುಡುಗ ಅದನ್ನೆಲ್ಲ ಸೂಕ್ಷ್ಮವಾಗಿ ಗಮನಿಸುತ್ತಿದ್ದ ಅವನು ತಾಯಿಗೆ ಅಂದ 'ಅಣ್ಣ ಮತ್ತು ಶೀಲಾ ವೈನಿ ಗೋವೆಗೆ ಹೋಗಿ ಛಲೋದಾಯ್ತಲ್ಲ."

"ಹೌದಲ್ಲ. ಬ್ಯಾರೆಯವರ ಹುಡುಗಿಗೆ ಇಂಥ ದರಿದ್ರತನ ಬರಬಾರದಲ್ಲ. ನಾನು ಹೇಳತೀನಿ ಕೇಳು ಅವಳು ನಮ್ಹಂಗ ಹಸಿವು ತಡಕೊಳ್ತಿರಲಿಲ್ಲ",

"ಇನ್ನೇನು ಅರ್ಥ ಉಳಿದಿಲ್ಲ ಅವ್ವಾ. ನಾವ್ ಇನ್ಮುಂದೆ ಕುಂಬಾರ ಧಂದೇನ ಬಿಡಬೇಕಾಗ್ತದ".

ಗಣೇಶ ಚತುರ್ಥಿ ಬರುವ ಸಮಯ ಕುಂಬಾರರೆಲ್ಲ ಕುಗ್ಗಿ ಹೋಗಿದ್ದರು ಒಂದು ಮಳೆಗಾಲ ಪೂರ್ತಿ ಕಳೆದು ಹೋದರೂ ಅವರೆಲ್ಲ ಜೀವದಿಂದಿರುವುದೇ ಒಂದು ಸೋಜಿಗವಾಗಿತ್ತು. ಹೆಚ್ಚಾಗಿ ಕುಂಬಾರರೆಲ್ಲ ಮಳೆಗಾಲದಲ್ಲಿಯೇ ಸಾಯುತ್ತಾರೆಂಬ ಪ್ರತೀತಿ ಇದೆ. ಕಾರಣ ಹಸಿವು.

ಚತುರ್ಥಿ ಹತ್ತಿರ ಬಂತು ಮಳೆಯ ಆರ್ಭಟ ಕಡಮೆಯಾಯಿತು. ಕೇರಿ ಕೊಂಚ ಬೆಚ್ಚಗಾಯಿತು.ಮಳೆ ಬಿಸಿಲುಗಳ ಕಣ್ಣು ಮುಚ್ಚಾಲೆಯಲ್ಲಿಯೇ ಕುಂಬಾರರು ತಮ್ಮ ಮಡಕೆಗಳನ್ನು ಒಣಗಿಸಿಕೊಳ್ಳುತ್ತಿದ್ದರು. ಮಳೆಯ ಮುನ್ನೋಟ ನೋಡಿಯೇ ಆವಿಗೆ ಉರಿಸತೊಡಗಿಸಿದರು. ಮಡಕೆಗಳಿಂದ ತುಂಬಿದ ಹೆಡಿಗೆಗಳು ಊರು ಕೇರಿಯಲ್ಲಿ ಸಂಚರಿಸತೊಡಗಿದವು. "ಅವ್ವಾ ಚವತಿ ಆದ್ರೂ ಒಂದು ಗಡಗಿ ಕೊಂಡುಕೊಳ್ರಿ" ಎಂದು ಹೇಳುತ್ತಿದ್ದಂತೆ ಮಡಕೆಗಳ ಮಾರಾಟ ಹೆಚ್ಚಾಯಿತು.

ಕುಂಬಾರ ಕೇರಿಯಲ್ಲಿ ಮೂರು ನಾಲ್ಕು ಮನೆಗಳಲ್ಲಿ ಗಣಪತಿ ಮೂರ್ತಿ ಮಾಡಿದ್ದರು. ಅವುಗಳಿಗೆ ಬಣ್ಣ ಅಲಂಕಾರ ಮಾಡಿದಾಗ ಕೇರಿಯ ಉತ್ಸಾಹ ಇಮ್ಮಡಿಸಿತ್ತು.

ಕುಂಬಾರರು ಹೆಚ್ಚಾಗಿ ಪ್ರತಿವರ್ಷ ಮಾಡಿಕೊಡುವವರಿಗೆ ಮಾತ್ರ ಗಣಪತಿಯ ಮೂರ್ತಿಗಳನ್ನು ತಯಾರಿಸಿಕೊಡುತ್ತಿದ್ದರು. ಚವತಿಗೆ ಕೆಲವು ದಿನ ಇದ್ದಾಗ ಅವರು ಬಂದು ವಿಧಿಪೂರ್ವಕ ತೆಂಗಿನ ಕಾಯಿಯ ವೀಳ್ಯ ಕೊಟ್ಟು ಹೋಗುತ್ತಿದ್ದರು. ಆನಂತರ ಕುಂಬಾರರು ಅವರವರ ಹೆಸರಿನಲ್ಲಿ ಗಣಪತಿಯ ಮೂರ್ತಿ ಮಾಡಿಡುತ್ತಿದ್ದರು. ಹೆಚ್ಚಿನ ಸಂಖ್ಯೆಯಲ್ಲಿ ಮೂರ್ತಿ ಮಾಡಿಡಲು ಅವರಿಗೆ ಅಲ್ಲಿ ಸ್ಥಳಾವಕಾಶವಿರಲಿಲ್ಲ. ಕೇರಿಗೆ ಬರಲು ಕುಂಬಾರಕೇರಿಯಿತ್ತು. ಮಳೆಗಾಲದಲ್ಲಿ ಬರುವಾಗಂತೂ ಮಳೆಯಿಂದ ಹೊಲಗಳೆಲ್ಲ ನೀರಿನಿಂದ ತುಂಬಿ ಪಕ್ಕದ ಹೊಳೆಯೂ ನೀರಿನಿಂದ ತುಂಬಿ ದಾರಿಯೇ ಕಾಣುತ್ತಿರಲಿಲ್ಲ.

ರಿಯ ರಾಮಚಂದ್ರ, ಗೋಪಾಳ, ಪುರಸೊ, ಶಿವರಾಮ ಇವರಷ್ಟೇ ಗಣಪತಿ ಮೂರ್ತಿಗಳನ್ನು ಮಾಡುತ್ತಿದ್ದರು. ಕೇವಲ ಶಿವರಾಮ ಒಬ್ಬನೇ ಜನರ ಬೇಡಿಕೆಗಿಂತ ಹೆಚ್ಚು ಣಪತಿಮೂರ್ತಿ ಮಾಡಿ, ಹೆಚ್ಚು ಮಾಡಿದ ಮೂರ್ತಿಗಳನ್ನು ಅವನ ಮತ್ತು ಅವನು ಂಡತಿ ತಲೆಯ ಮೇಲಿಟ್ಟುಕೊಂಡು ಹೋಗಿ ಮಾಜಾಳಿಯ ಒಬ್ಬರ ಅಂಗಡಿಯ ಗಲಿಯಮೇಲೆ ಮಾರಾಟಕ್ಕಿಟ್ಟು ಬರುತ್ತಿದ್ದರು. ಮನೆಯಲ್ಲಿ ಮೂರ್ತಿ ಮಾಡುವ ಕೆಲಸ ರಂಭವಾದಂದಿನಿಂದ ಮನೆಗ ಮೀನು ಮಾಂಸ ತರಕೂಡದೆಂಬ ಅಲಿಖಿತ ಯಮವಿತ್ತು. ಈ ನಿಯಮಗಳನ್ನೆಲ್ಲ ಕರಾರುವಾಕ್ಕಾಗಿ ಇತರ ಕುಂಬಾರರು ಪಾಲಿಸುತ್ತಿದ್ದರೆ ವರಾಮ ಮಾತ್ರ ಇಂಥವುಗಳಿಗೆ ಬೆಲೆ ಕೊಡುತ್ತಿರಲಿಲ್ಲ. ಗಣಪತಿಯ ಮೂರ್ತಿಗಳನ್ನು ಮಾಡಿ ಒಂದರ ಹಿಂದೊಂದರಂತೆ ಇಡುತ್ತಿದ್ದರು. ಒಲೆಯಲ್ಲಿ ಹುರಿಯುವ ಒಣಮೀನಿನ ಾಸನೆ ಮನೆತುಂಬ ಹರಡುತ್ತಿತ್ತು. ಕೆಲವು ವೇಳೆ ಮೀನನ್ನು ಹಿಡಿದುಕೊಂಡು ದೇವರ ುಂದಿನಿಂದಲೇ ಹಾಯ್ದು ಹೋಗುತ್ತಿದ್ದಳು. ಅವನು ಹೇಳುತ್ತಿದ್ದ 'ಗಣಪತಿಗೆ ಕಣ್ಣು ಡುವವರೆಗೆ ಅವನು ದೇವನಲ್ಲ. ಚವತಿಗೆ ಎರಡು ದಿನಗಳಿದ್ದಾಗ ಅವನು ತನ್ನ ಹೆಂಡತಿಯ ತಲೆಯ ಮೇಲಿಟ್ಟು ಮೂರ್ತಿಗಳನ್ನು ಮಾಜಾಳಿಗೆ ಸಾಗಿಸುತ್ತಿದ್ದ. ದಾರಿಯಲ್ಲಿ ಂದು ದಿನ ವಿಠ್ಠಲನಾಯಕ "ಹೆಂಡತಿಯ ತಲೆಯಮೆಲೆ ದೇವರೇ? ಹಿಂದೆಂದೂ ಂಗಾಗಲಿಲ್ಲಪ್ಪ .. ಇಂಥಾದ್ದನ್ನು ನೋಡಿಯೂ ಇಲ್ಲ" ಅಂದ

"ಮಾಮಾ, ಇನ್ನೂ ದೃಷ್ಟಿ ಇಟ್ಟಿಲ್ಲ. ಅಲ್ಲೀ ಮಟಾ ಅದು ಮಣ್ಣಿನ ಮುದ್ದೇನೇ.

ರಾಮಚಂದ್ರನ ಬಳಿ ಪೂರ್ವಾಚಾರದ ಮೂರು ಗಣಪತಿಗಳಿದ್ದವು. ಅಜ್ಜ ಮುತ್ತಜ್ಜನ ಾಲದಿಂದಲೂ ಅವರು ಗಣಪತಿ ತಯಾರಿಸುತ್ತ ಬಂದಿದ್ದರು. ಅವರು ಬಂದು ಮೊದಲು ೇಳ್ಯ ಕೊಡದಿದ್ದರೂ ಅವರ ಹೆಸರಿನಲ್ಲಿ ಮೂರ್ತಿ ಮಾಡಿಡುತ್ತಿದ್ದರು. ಹಬ್ಬದ ದಿನ ಅವರು ಕಾಯಿಹಣ್ಣು ಹಂಬಲು ತಂದು ದೇವರಿಗೆ ಆರತಿಯೆತ್ತಿ ವಾದ್ಯದ ಸಂಭ್ರಮದಲ್ಲಿ ಮೂರ್ತಿಯನ್ನೆತ್ತಿಕೊಂಡು ಹೋಗುತ್ತಿದ್ದರು. ಹೀಗೆ ತಲೆತಲೆಮಾರುಗಳಿಂದ ಗಣಪತಿ ಮಾಡಿಕೊಡುವುದು ಗೌರವದ ದ್ಯೋತಕವೆಂದು ಭಾವಿಸುತ್ತಿದ್ದರು. ಪೂರ್ವಾಚಾರದ ನಿಯಮ ಯಾರೂ ಉಲ್ಲಂಘಿಸುತ್ತಿರಲಿಲ್ಲ. ಹೀಗೆ ಕುಂಬಾರರು ಮತ್ತು ಜನತೆಯ ನಡುವೆ ಒಂದು ಬಗೆಯ ಭಾವನಿಕ ಸಂಬಂಧ ಬೆಸೆದುಬಂದಿತ್ತು.

ಚವತಿಯ ದಿನ ಕೇರಿಯಲ್ಲಿ ದೊಡ್ಡ ಉತ್ಸವ ನಡೆದಿತ್ತು. ಊರಿನ ಮಂದಿ ಗುಂಪು ಗುಂಪಾಗಿ ವಾದ್ಯಮೇಳದೊಂದಿಗೆ ಬಂದು ಗಣಪತಿ ಮಾಡಿದವರಿಗೆ ಸಲ್ಲಬೇಕಾದ ವಿಧ್ಯುಕ್ತ ಗೌರವ ಸಲ್ಲಿಸಿ ಮೂರ್ತಿಗಳನ್ನು ಸಂಭ್ರಮದಿಂದ ಕೊಂಡೊಯ್ಯುತ್ತಿದ್ದರು. ಗಣಪತಿಯನ್ನು ತಲೆಯ ಮೇಲಟ್ಟುಕೊಂಡು ಹೋಗುವಾಗ ಕೆಲವರು ಪಟಾಕಿಗಳನ್ನು ಸಿಡಿಸುತ್ತಿದ್ದರು. ಬಂದುಹೋಗುವ ಗದ್ದಲ ನಡೆದಿತ್ತು. ಹೊಸ ಹೊಸ ಬಟ್ಟೆಗಳನ್ನು ಧರಿಸಿ ವಾದ್ಯವಾದನದ ಸಂಭ್ರಮದ ಜನ ಬರುವುದೇ ಒಂದು ಬಗೆಯ ಖುಷಿ ನೀಡುತ್ತಿತ್ತು. ಅವರು ಬರುವಾಗ ಪೂಸಿಕೊಂಡು ಬರುವ ಅತ್ತರಿನ ಪರಿಮಳ ಕೇರಿಯಲ್ಲೆಲ್ಲ ಪಸರಿಸುತ್ತಿತ್ತು. ಈ ಹೊತ್ತು ಪ್ರಖರವಾದ ಬಿಸಿಲೂ ಇತ್ತು ಮೇಲಿನ ಮಾವಿನ ಗಿಡವನ್ನು ಲಕ್ಷಿಸದೆ ಸೂರ್ಯ ಕಿರಣಗಳು ಭೂಮಿತಾಯಿಯನ್ನು ಚುಂಬಿಸಿದ್ದವು. ಮಳೆಗಾಲದಲ್ಲಿ

ಸರಿಯಾದ ಉತ್ಪನ್ನವಿಲ್ಲದೆ'ಸೊರಗಿದ ಕುಂಬಾರರು ಇಂದು ಹಬ್ಬದ ಖುಷಿಯಲ್ಲಿದ್ದರು.

ಪೂರ್ವಚಾರದಂತೆ ನಡೆದ ಗಣಪತಿಯ ಮೂರ್ತಿಯನ್ನು ಒಯ್ಯಲು ದೇಸಾಯಿ ವಾಡೆಯ ಜನ ವಾದ್ಯವೃಂದದೊಂದಿಗೆ ಬಂದಿದ್ದರು. ವಾದ್ಯ ನುಡಿಸುತ್ತ ಅವರು ನೇರವಾಗಿ ರಾಮಚಂದ್ರನ ಮನೆಯ ಕಡೆ ಹೋದರು. ಅವನ ಮನೆಯ ಅಂಗಳದಲ್ಲಿ ವಾದ್ಯ ವಾದನ ನಡೆದು ಅಚಾನಕವಾಗಿ ಬಂದಾಯಿತು. ಜೋರು ಜೋರಾಗಿ ಮಾತಾಡುವ ಸದ್ದು ಕೇಳಿ ಬಂತು. ಕುಂಬಾರರೆಲ್ಲ ಅತ್ತ ಕಡೆ ಕಿವಿಕೊಟ್ಟರು. ಸೀತವ್ವನೂ ಅಂಗಳಕ್ಕೆ ಬಂದು ನಿಂತುಕೊಂಡಳು. ತಲೆತಲಾಂತರದಿಂದ ಗಣಪತಿ ಮಾಡಿ ಕೊಡುತ್ತಿದ್ದವನು ಅದರ ಬೆಲೆಯನ್ನು ಬಾಯಿಯಿಂದ ಹೇಳಬಾರದೆಂಬ ವಿಧಿಯಿತ್ತು. ಗಣಪತಿ ಒಯ್ಯುವವರು ವೀಳ್ಯದ ತಟ್ಟೆಯಲ್ಲಿಟ್ಟಷ್ಟನ್ನೇ ಬಾಯಿಮುಚ್ಚಿಕೊಂಡು ಸ್ವೀಕರಿಸಿ ತೃಪ್ತಿ ಪಡಬೇಕೆಂಬ ರೂಢಿಯಿತ್ತು ಆದರೆ ಈಗ ಕಾಲ ಬದಲಾಗಿತ್ತು. ಕಾಳು ಕಡಿಗಳ ಜೀವನಾವಶ್ಯಕ ಎಲ್ಲ ವಸ್ತುಗಳ ಬೆಲೆ ಗಗನಕ್ಕೆರಿದ್ದವು ಆದ್ದರಿಂದ ಹಿಂದೆ ಕೊಡುವಷ್ಟೇ ಗೌರವ ಧನ ಕೊಟ್ಟರೆ ಕುಂಬಾರರಾದರೂ ಬಾಯಿ ಮುಚ್ಚಿಕೊಂಡಿರುವುದು ಹೇಗೆ ಸಾಧ್ಯ? ಕೆಲವರಂತೂ ಹಿಂದಿನ ಕ್ರಮದಂತೆ ಅಷ್ಟೇ ದುಡ್ಡು ತಟೆಯಲ್ಲಿಡುತ್ತಿದ್ದರು. ಕುಂಬಾರರು ಏದುಸಿರು ಬಿಡಬೇಕಾಗುತ್ತಿತ್ತು ಕೆಲವೊಮ್ಮೆ ಬಣ್ಣದ ಹಣವೂ ಹುಟ್ಟುತ್ತಿರಲಿಲ್ಲ.

ಸುಬ್ರಾಯ ದೇಸಾಯನ ಮನೆಯವರು ಪ್ರತಿವರ್ಷ ತಟ್ಟೆಯಲ್ಲಿ ಒಂದು ನೂರು ಒಂದು ರೂಪಾಯಿಗಳನ್ನಿಟ್ಟು ಹೋಗುತ್ತಿದ್ದನ್ನು ರಾಮಚಂದ್ರ ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಈ ಬಾರಿಯೂ ಒಂದು ನೂರು ಒಂದು ರೂಪಾಯಿ ಇಟ್ಟಾಗ ಅವನ ಕೋಪ ಕೆರಳಿತು. ಸಿಟ್ಟನ್ನು ತಡೆಹಿಡಿದು ಮೂರು ಬೆರಳು ತೋರಿಸಿ 'ಮೂರು ನೂರು ಕೊಡಿ; ಎಂದು ಕೈಯಿಂದಲೇ ಸನ್ನೆ ಮಾಡಿದ. ಅವರು ನೋಡಿದರೂ ನೋಡದವರಂತೆ ಮಾಡಿ ಗಣಪತಿ ಎತ್ತಲು ಕೈ ಹಚ್ಚಿದರು. ಅದೇ ಹೊತ್ತಿಗೆ ಆ ಗುಂಪಿನಲ್ಲಿದ್ದ ಒಬ್ಬರು ಅಷ್ಟೇ ಅಷ್ಟೋ ಕೊಡೋದು' ಎಂದರು.

ರಾಮಚಂದ್ರನು ಅವರನ್ನು ತಡೆದು ಸಿಟ್ಟಿನಿಂದ ಹೇಳಿದ "ನಾಲ್ಕೈದು ವರ್ಷದಿಂದ ನಾನೂ ನೋಡಾಕ ಹತ್ಯೇನಿ. ನೂರಾ ಒಂದು ತಾಟಿನಾಗ ಇಟ್ಟು ಗಣಪತಿ ಎತ್ತಿಕೊಂಡು ಹೊಕ್ಕೀರಿ. ದೇಸಾಯರ ಕಿಮ್ಮತ್ತ ಅಷ್ಟು ಅಂತ ತಿಳಿಯೂದೇನು? ಎಲ್ಲಾ ವಸ್ತು ತುಟ್ಟಿಯಾಗ್ಯಾವ ಪ್ಯಾಟಿ ಧಾರಣಿ ಎಲ್ಲಿ ಮುಟ್ಯೈತಿ ನೋಡ್ರಿ. ನೀವು ಕೊಡೋ ನೂರು ರೂಪಾಯಿಗೆ ಒಂದು ಈಸ್ವಣ ಮೀನೂ ಬರಂಗಿಲ್ಲ."

ಅವರಲ್ಲಿ ಕೆಲವರು ತರುಣರು ಇದ್ದರು. ಅವರು ಕಚ್ ಕಚ ಮಾತಾಡುತ್ತಿದ್ದರು. "ನಮ್ಮ ಕಿಮ್ಮತ್ತೆಷ್ಟು ಅಂತ ಕೇಳ್ತೀರಲ್ಲ. ಈಸ್ವಣ ಅಂತೆ ಈಸ್ವಣ. ನೀನು ತಂದದ್ದು ದೇವರು ಕೊಟ್ಟ ಕೆರೆಯ ಮಣ್ಣೆ ಅಲ್ವೆ? ನೀನು ಮಣ್ಣು ತಂದು ಮೆತ್ತಿ ಸ್ವಲ್ಪ ಬಣ್ಣ ಹಾಕಿದಿ ಅಷ್ಟೇ ?"

ರಾಮಚಂದ್ರ ಸಿಟ್ಟು ಮತ್ತಿಷ್ಟು ಏರಿತು. "ದೇವರು ಕೊಟ್ಟಿದ್ದು ಅಂತೀರಲ್ಲ... ನಿಮ್ಮ ರೈತರ ಹೊಲ ದೇವರು ಬೆಳೆಸ್ತಾನಂತ ಬಂದ ಬಂದವರಿಗೆ ಫುಕಟ್ ಕೊಡ್ತೀರೇನು? ಒಂದು ಗಡಗಿ ನಮ್ಹತ್ರ ಖರೀದಿಸಿದ್ರೆ ನಿಮ್ಮ ಹೆಂಡರು, ನಮಗೆ ತೂರಿ ಒಗೆಯುವ ಜೊಳ್ಳು ಭತ್ತ ಕೊಟ್ಟು ಕಳಿಸ್ತೀರಿ."

ಈ ವಾಗ್ವಾದ ಇನ್ನಷ್ಟು ಬೆಳೆಯುವುದಿತ್ತು. ಅಲ್ಲಿ ಆಗಲೇ ಯಶವಂತ ಮತ್ತು ವಿಶ್ರಾಮ ಬಂದು ನಿಂತಿದ್ದರು. ದೇಸಾಯರ ಗುಂಪಿನಲ್ಲಿದ್ದ ಹಿರಿಯರೊಬ್ಬರು ಮುಂದೆ ಬಂದು "ದೇವರ ಮುಂದೆ ಜಗಳಾಡುವುದು ಸರಿಯಲ್ಲ. ದೇವರ ಬಗ್ಗೆ ಚವಕಶಿ ಮಾಡೋದಾದ್ರೆ ದೇವರನ್ನಾದರೂ ಯಾಕೆ ಪೂಜಿಸ್‌ಬೇಕು?"

ವಿಶ್ರಾಮನು ರಾಮಚಂದ್ರನ ಕೈ ಹಿಡಿದು ಒಳಗೆ ಕರೆದುಕೊಂಡು ಹೋದ. ಆದರೆ ಅವನ ಹೆಂಡತಿ ಹೊರಗೆ ನಿಂತಿದ್ದಳು. ಅವಳು ಹೇಳಿದಳು. "ನಿಮಗ ಅದು ದೇವರಾಗಿದ್ದರೂ ನಮಗದು ಹೊಟ್ಟೆ ಪ್ರಶ್ನಿ. ನೀವು ದೊಡ್ಡ ದೇಸಾಯರ ಹೆಸರ ಹೇಳತೀರಿ ಮತ್ತ ನಮ್ಮ ಹೊಟ್ಟೆಮ್ಯಾಗ ಹೊಡೀತೀರಿ. ನಿಮ್ಮದ್ಯಾವದರಿ ದೊಡ್ಡಸ್ತನ?" ಆನಂದಿಯ ಮಾತು ಗಡಿದಾಟಿ ಹೋಗಿತ್ತು. ತಾನು ಹೀಗೆ ಮಾತನಾಡಬಾರದಿತ್ತು ಅಂತ ಅವಳಿಗೆ ಅನಿಸಿತು.

ಆ ಜನಗಳು ಅವಳನ್ನು ದುರುಗುಟ್ಟಿ ನೋಡಿದರು. ಅವಳು ನಮ್ಮ ಕುಲಗೋತ್ರ ಬಗ್ಗೆ ಮಾತಾಡ್ತಿದ್ದಾಳೆ. ಅವರ ಗಣಪತಿ ನಾವ್ ಒಯ್ಯಕೂಡದು. ನಡೀರಿ ಹೋಗೋಣ.

ಆ ಹಿರಿಯರು ಮತ್ತೆ ಹೇಳಿದರು "ದೇವರನ್ನು ಬಾಗಿಲಿನಿಂದ ಹೊರಗೆ ತಂದಿದ್ದೀವಿ. ಮುಂದೆ ಗೌರವದ ತಟ್ಟೆ ಇಟ್ಟದ್ದೀವಿ. ದೇವರ ಪ್ರೀತ್ಯರ್ಥ ಇಟ್ಟ ದುಡ್ಡು ನಾವು ತಿರುಗಿ ತೆಗೆದುಕೊಂಡು ಹೋಗ್‌ಬಾರದು. ನಮ್ಮ ಮಕ್ಕಳು ಮರಿಗಳಿಗೆ ಒಳ್ಳೆಯದಾಗಬೇಕು."

ಆ ಮಂದಿ ಮತ್ತೆ ಕೆಲವು ನೋಟುಗಳನ್ನು ತೆಗೆದು ತಟ್ಟೆಯಲ್ಲಿಟ್ಟರು. ಯಶವಂತ ಹೊರಗೆ ನಿಂತಿದ್ದ ಅವನು ರಾಮಚಂದ್ರನನ್ನು ಕರೆದು ಅವರ ತಲೆಯ ಮೇಲೆ ಗಣಪತಿಯ ಮೂರ್ತಿ ಎತ್ತಿಡು. ಎಂದು ಹೇಳಿದ. ರಾಮಚಂದ್ರ ಮೌನದಿಂದ ಗಣಪತಿಯನ್ನು ಎತ್ತಿಕೊಂಡು ಅವರ ಕೈಯಲ್ಲಿಟ್ಟ ವಾದ್ಯ ಮೊಳಗಲಿಲ್ಲ. ಪಟಾಕಿ ಸಿಡಿಯಲಿಲ್ಲ. ಅವರು ಮೌನವಾಗಿ ನಡೆಯತೊಡಗಿದರು. ಅವರು ಸ್ವಲ್ಪ ಮುಂದಕ್ಕೆ ಹೋದ ಮೇಲೆ ಅವರಲ್ಲಿದ್ದವನೊಬ್ಬ ಹಿಂತಿರುಗಿ ಹೇಳಿದ" ಮುಂದಿನ ವರ್ಷ ಮತ್ತೆ ನಮಗಾಗಿ ಗಣಪತಿ ಮಾಡಬೇಡಿ. ಇದೇ ಕೊನೆಯದು. ನಮ್ಮ ಪೂರ್ವಜನ ಮಾತು ವಾಪಸ್ ಪಡೆದು ಹೊಂಟದ್ದೇವೆ"

ಆಗ ಅಲ್ಲಿ ನಿತಾಂತ ಶಾಂತತೆ ಆವರಿಸಿತು. ಗರಿ ಕಳೆದು ಕೊಂಡ ಕಾಗೆ ಧೊಪ್ಪನೆ ಮುಂದೆ ಬಿದ್ದಂತಾಯಿತು.

ವಿಶ್ರಾಮ ಮನೆಯ ಕಡೆ ಹೋಗಲು ಹೊರಟದ್ದ ಸೀತವ್ವ ಅಂಗಳದಲ್ಲಿ ನಿಂತು 'ಏನಾಯ್ತೊ ವಿಶ್ರಾಮಾ' ಎಂದು ಕೇಳಿದಳು.

"ದೇವರ ಮುಂದೆ ಜಗಳಾ ಮಾಡಿದ್ರು, ತಟ್ಟ್ಯಾಗ ಕಡಮೆ ರೊಕ್ಕ ಇಟ್ಟದ್ರುವ್ವ ರಾಮಚಂದ್ರ ಅಂತ ಒಂದನೂರು ರೂಪಾಯಿಗೆ ಒಂದ ಈಸ್ಟೂಣ ಮೀನಾದ್ರೂ ಸಿಗತೈತೇನು ಅಂತ. ಅವರು ಸಿಟಗೊಂಡು ಹ್ವಾದ್ರು ಮುಂದಿನ ವರ್ಷ ಗಣಪತಿ ಮಾಡೂದು ಬ್ಯಾಡಾಂತ ಹೇಳಿಕೋತ."

"ಬರೋಬ್ಬರ ಆಗಲಿಲ್ಲ ವಿಶ್ರಾಮಾ. ನಾನ ಮದವಿ ಆಗಿ ಬಂದಂದಿನಿಂದ ನೋಡತೇನಿ ಈ ದೇಸಾಯಿ ಮನೆತನದವ್ರು ಪ್ರತಿವರ್ಷ ಗಣಪತಿ ಒಯ್ಯುತಿದ್ರು, ಹಾಂಗಾಗಿ ವಾಡೇಗ ದೊಡ್ಡ ಮಂದಿ ಕಾಲ್‌ಧೂಳಿಯಾದ್ರ ಅಂಟತಿತ್ತು. ಅವರು ಹೋಗೂ ಮುಂದೆ ಕೇರಿಗೆ ಶಾಪ ಕೊಟ್ಟು ಹೋಗಿರ್‌ಬೇಕು."

“ನಾನಂತೀನಿ ಸೀತವ್ವ, ಕುಂಬಾರರೇ ಯಾಕ ಕಳಕೋತಾ, ತುಳಸಿಕೋತಾ ಇರಬೇಕು? ಬ್ಯಾರೆ ಊರಾಗ ಐನೂರು ಆರುನೂರು ಕೊಟ್ಟು ಗಣಪತಿ ಒಯ್ತಾರ... ಇಲ್ಲಿ ಮಾತ್ರ ನೂರು ರೂಪಾಯಿ ಒಗೀತಾರ. ನಾವು ಮಾಡಿದ ಗಣಪತಿಗ, ನಾವ್ ಮಾಡಿದ ಗಡಿಗೆಗ ಯಾಕ ಕಿಮ್ಮತ್ತಿಲ್ಲ? ಕುಂಬಾರರನ್ನ ಹಂಗ ಹಿಂಡತಾ ಅದಾರವ್ವ”

“ಹೌದಪ್ಪ, ಹೊಟ್ಟಿಗ ಹಸಿವ್ಯಾಗ್ಯದ ಅಂತ ಯಾರೂ ಗಿಡದ ಬೇರು ಕಿತ್ತ ತಿನ್ನೂದಿಲ್ಲ...” ಇದಿಷ್ಟು ಮಾತಾಡುವಾಗ ಅವಳ ನಾಲಿಗೆ ತಡವರಿಸಿತು.. ಮುಂದಿನ ಮಾತಿಗೆ ತಡೆ ಹಾಕಿದಳು. ಕಳೆದ ಆರು ತಿಂಗಳ ಹಿಂದೆ ಅವಳೇ ಬುಡಕ್ಕೆ ಕಿಚ್ಚು ಹಾಕಲು ಮುಂದಾಗಿದ್ದಳು. ಮುತ್ತೈದೆಯರು ಮಣ್ಣು ಕಲಿಸಿ ಮಡಿಕೆ ಮಾಡಲು ಪ್ರಾರಂಭ ಮಾಡಿದಾಗ ಶಾಸ್ತ್ರ ಸಮ್ಮತವಲ್ಲ ವಿಧವೆಯಾದ ಅವಳು ತಿಗರಿಯ ಮೇಲೆ ಮಣ್ಣಿನ ಪಾತ್ರೆ ಮಾಡುವ ಸಾಹಸಕ್ಕೆ ಕೈಯಿಕ್ಕಿದ್ದಳು. ಆ ಪಾತ್ರೆಗಳೆಲ್ಲ ಅಂಗಳದಲ್ಲಿದ್ದ ರಾಮಫಲದ ಗಿಡದಡಿಯಲ್ಲಿ ಎಷ್ಟೋ ಕಾಲ ಅನಾಥವಾಗಿ ಬಿದ್ದು, ಬಿಸಿಲು ಮಳೆಗಾಲ ಕಂಡು ಪಾತ್ರೆಗಳಿಗೆಲ್ಲ ಸೀಳು ಬಿಟ್ಟಿತ್ತು. ಒಂದು ದಿನ ಅವಳ ಸೊಸೆ ಸಿಟ್ಟಾಗಿ ಅಂಗಳದಲ್ಲಿ ಬಿದ್ದಿದ್ದ ಮಣ್ಣಿನ ಪಾತ್ರೆಗಳನ್ನೆಲ್ಲ ಮಂಕರಿಯಲ್ಲಿ ತುಂಬಿಕೊಂಡು ದೂರಕ್ಕೊಯ್ದು ಒಡೆದು ಹಾಕಿದ್ದಳು.

ಘನಶ್ಯಾಮನ ಇನ್ನೊಬ್ಬ ಚಿಕ್ಕಪ್ಪ ಮಲ್ಲಾಪುರದಲ್ಲಿ ಮಾವನ ಮನೆಯಲ್ಲೇ ಇದ್ದ. ಅವನಿಗೆ ನಾಲ್ವರು ಮಕ್ಕಳು. ಅವನ ಕೊನೆಯ ಮಗ ಸೀತಾರಾಮ ಆಕಸ್ಮಿಕ ವಾಡೆಗೆ ಬಂದ. ಅವನ ಜತೆಗೆ ಅವನ ಹೆಂಡತಿ ಗೌರವರ್ಣದ, ಮೈತುಂಬಿಕೊಂಡಿದ್ದ ಹೆಣ್ಣು ಮಗಳು. ಅವನು ಬಂದು “ಅಲ್ಲಿ ಯಾರ ಧಂದೆನೂ ಸರಿಯಾಗಿ ನಡೀತಾ ಇಲ್ಲ. ವ್ಯಾಪಾರ ಬಿದ್ದು ಹೋಗಿದೆ. ನಾನು ಹೇಗಿದ್ದರೂ ನಿನ್ನ ಸೋದರ, ತಮ್ಮ. ನಾನು ಇಲ್ಲೇ ಇದ್ದು ಬಿಡ್ತೇನೆ' ಎಂದು ಹೇಳಿದ.

ಆದರೆ ಘನಶ್ಯಾಮನ ಹೆಂಡತಿ ರುಕ್ಮಿಣಿ ಅವರಿಬ್ಬರನ್ನು ತಮ್ಮೊಂದಿಗೆ ಇಟ್ಟುಕೊಳ್ಳಲು ಸಹಸಾ ಒಪ್ಪಲಿಲ್ಲ. “ನಿಮ್ಮ ವ್ಯಾಪಾರ ಅಲ್ಲಿ ಬಿದ್ದು ಹೋಗ್ಯದ ಅಂತೀರಿ, ಮತ್ತ ಇಲ್ಲೇನು ಮುಗಿಲು ಮುಟ್ಟ್ಯದೆಯೇನು? ನೀ ಅಲ್ಲಿ ಜಗಳಾಡಿ ಬಂದ್ಹಂಗೈತಿ. ಬ್ಯಾಡ, ನೀ ನಮ್ಮ ಕೂಡ ಇರಬ್ಯಾಡ. ನೀ ಎಲ್ಲೂ ಬರೊಬ್ಬರಿ ಇರಾಂವ್ನಲ್ಲ.”

ಆದರೆ ಅವನು ತನ್ನ ಹೆಂಡತಿಯೊಂದಿಗೆ ಅಲ್ಲಿಯೇ ಜಗಲಿಯ ಮೇಲೆ ಸತ್ಯಾಗ್ರಹಕ್ಕೆ ಕುಳಿತಂತೆ ಕುಳಿತುಬಿಟ್ಟ. ಒಂದೆರಡು ದಿನ ಘನಶ್ಯಾಮ ಊಟ ತಿಂಡಿಯ ಹೊತ್ತಿಗೆ ಕರೆದು ಗಂಜಿ, ಅನ್ನ ಹಾಕುತ್ತಿದ್ದ. ಆದರೆ ಅವನು ಏನು ಮಾಡಿದರೂ ಅಲ್ಲಿಂದ ಕದಲಲು ತಯಾರಿರಲಿಲ್ಲ. “ಇದು ನಮ್ಮ ಹಿರ್‍ಯಾರ ಊರು ನಾ ಇಲ್ಲೇ ಬಿದ್ದಿರ್ತೀನಿ. ಹೌಂದ, ನಾ ಅಲ್ಲಿ ಜಗಳಾಡೇ ಬಂದೀನಿ. ಮತ್ತ ನಿಮ್ಮ ಮಾರಿ ನೋಡೂದಿಲ್ಲ ಅಂತ ಅವರಿಗೆ ಹೇಳೇ ಬಂದೀನಿ.”

ಘನಶಾಮನೂ ಯೋಚಿಸಿದ. ಹೇಗಿದ್ದರೂ ಅವನು ತನ್ನ ಮೂಲಸ್ಥಳವಾದ ಕೇರಿಗೇ ಬಂದಿದ್ದಾನೆ. ಈ ಜಮೀನಿನಲ್ಲಿ ಅವನ ಪಾಲೂ ಇದೆ. ಒಂದು ದಿನ ಅವನು ಸೀತಾರಾಮನಿಗೆ ಕೇಳಿದ “ನಿನ್ನ ಹತ್ರ ದುಡ್ಡಗಿಡ್ಡ ಐತೇನು. ಇದ್ದರ ಆ ಖಾಲಿ ಜಗಾದಾಗ ನಿನಗೊಂದು ಝೋಪಡಿ ಕಟ್ಟಿ ನಿಲ್ಲಿಸೋಣು.”

ಅವನು ಸುಮಾರು ಐದುನೂರು ರೂಪಾಯಿ ಖರ್ಚು ಮಾಡಲು ಸಿದ್ಧನಿರುವುದಾಗಿ ಹೇಳಿದಾಗ, ಹತ್ತೆಂಟು ಕುಂಬಾರರನ್ನು ಕೈಮುಗಿದು ಕರೆದು ತಂದು ಗುಡಿಸಲು ಕಟ್ಟುವ ಕೆಲಸಕ್ಕೆ ಹಚ್ಚಿದ. ಸೀತಾರಾಮನನ್ನು ಕರೆದುಕೊಂಡು ಕಾಡಿಗೆ ಹೋಗಿ ಕಂಬ, ಬಿದಿರು, ಗೂಟ ಏನೆಲ್ಲ ಬೇಕೊ ಅದನ್ನೆಲ್ಲ ಕಡೆದು ತಂದರು. ಕೆಲವರನ್ನು ಕರೆದೊಯ್ದು ಅಲ್ಲಿ ಇಲ್ಲಿ ಬಿದ್ದ ಕಲ್ಲುಗಳನ್ನೆಲ್ಲ ಒಟ್ಟುಗೂಡಿಸಿ, ಮಣ್ಣು ಕಲೆಸಿ ಸಾದಾ ನೆಲಗಟ್ಟು ಹಾಕಿ ಎದೆಯೆತ್ತರದ ಗೋಡೆ ಕಟ್ಟಿದರು. ಹತ್ತು ಹನ್ನೆರಡು ದಿನಗಳಲ್ಲಿ ಎಲ್ಲರ ಸಹಕಾರದಿಂದ ಗುಡಿಸಲಿಗೆ ಸೋಗೆ ಮುಚ್ಚಿಗೆಯಾಯಿತು. ಕೇವಲ ಒಂದೇ ಕೋಣೆ ಒಬ್ಬನು ಮಲಗಿ ಕಾಲು ಚಾಚುವಷ್ಟು ಅಗಲ.

ಆ ಗುಡಿಸಲು ಘನಶ್ಯಾಮನ ಮನೆಯ ಹಿಂಭಾಗದಲ್ಲಿ ದೂರದ ತುದಿಯ ಮೂಲೆಯಲ್ಲಿತ್ತು. ಆ ಗುಡಿಸಲು ಹತ್ತಿರ ಒಂದು ಮರವಿತ್ತು. ಪೌಷ್ಯ- ಮಾಘ ಮಾಸಗಳಲ್ಲಿ ಅದು ಕೆಂಪು ಮಾವಿನ ಕಣಜವಾಗಿರುತ್ತಿತ್ತು. ಹೂವುಗಳ ರಾಶಿಯೇ ಮನೆಯ ಮೇಲೆ, ಸುತ್ತ ಮುತ್ತು ಹೂವು ಹರಡಿ ಬೀಳುತಿತ್ತು. ಉದ್ದ ಕಾಯಾಗುತಿತ್ತು. ಅದು ಹಣ್ಣಾಗಿ ಒಣಗಿ ಕೆಂಪು ಕಾಯಿಗಳು ಮನೆಯ ಸುತ್ತಮುತ್ತ ಚದುರಿ ಬೀಳುತ್ತಿದ್ದವು. ಜನ ಆ ಗುಡಿಸಲಿಗೆ ಸೀತಾರಾಮನ ಝೋಪಡಿ ಎನ್ನುತ್ತಿದ್ದರು. ಅಲ್ಲಿ ಜನರ ಓಡಾಟ ಕಡಮೆಯಿತ್ತು. ಗುಡಿಸಲಿಗೆ ಹೊಂದಿಯೆ ಕೆಳಗಡೆಯಲ್ಲಿ ದೊಡ್ಡ ಗಿಡಗಂಟೆಗಳ ಮರೆ ಇತ್ತು. ಅದರಿಂದ ಅಲ್ಲೊಂದು ಗುಡಿಸಲು ಇದೆಯೆನ್ನುವುದು ಯಾರಿಗೂ ಗೊತ್ತಾಗುತ್ತಿರಲಿಲ್ಲ.

ಸೀತಾರಾಮನ ಹೆಂಡತಿ ಬೆಳ್ಳಗೆ-ಮೈ ಕೈಯಲ್ಲಿ ತುಂಬಿಕೊಂಡು ಧಡೂತಿ ಹೆಂಗಸಿನಂತೆ ಕಂಡರೂ ಆಕೆ ತೀರ ಸಾಧ್ವಿಯಾಗಿದ್ದಳು. ಒಂದು ದೃಷ್ಟಿಯಲ್ಲಿ ಪಾಪದ ಜೀವ ಅನ್ನಬಹುದು. ಯಾರು ಏನೇ ಹೇಳಿದರೂ 'ಹೌದವ್ವ' 'ಹೌದವ್ವ' ಎಂದು ತಲೆದೂಗುತ್ತಿದ್ದಳು. "ನೋಡವ್ವ, ನಿನ್ನ ಗಂಡ ನಿನ್ನ ಮದಪಿ ಆಗೂ ಮುಂಛ ಮೂರು ಹೆಂಡರನ್ನು ಮಾಡಿಕೊಂಡು ಮೂರು ಊರಾಗ ಮೂರು ಹೆಂಡಿರನ್ನು ಇಟ್ಟುಕೊಂಡಿದ್ದ ಎಂದು ಯಾರಾದರೂ ತಮಾಷೆಗೆ ಹೇಳಿದರೂ 'ಹೌದವ್ವ... ನೀವ್ ಹೇಳೂದ್ ಖರೆ ಐತಿ" ಎಂದು ಹೇಳಿ ತಕ್ಷಣ ವಿಷಯ ಬದಲಿಸಿ ಬೇರೆ ಒಂದು ಮಾತು ಶುರು ಮಾಡುತ್ತಿದ್ದಳು. 'ನಾ ಹುಟ್ಟುದಕ್ಕಿಂತ ಮುಂಚೆ ಆರು ತಿಂಗಳ ಬಸರಿ ಇದ್ದಾಗ, ನನ್ನವ್ವ ಬಾಳೆ ಹಣ್ಣು ತಿಂದು ಸಿಪ್ಪಿ ಕಿಡಕ್ಯಾಗಿಂದ ಹೊರಕ್ಕೆಸೆದಳು. ಅದು ಸರ್‍ಯಾಗಿ ಒಬ್ಬ ಮುದುಕಪ್ಪನ ಕೈಯಾಗ ಬಿತ್ತು. ಅಂವಾ ಅಂದ ನಿನಗೆ ಬಾಳೆಹಣ್ಣು ಮತ್ತ ನನಗೆ ಸಿಪ್ಪೆ..." ಕಾಡಿಗೆ ಹೋದರೂ ಅಲ್ಲಿ ಇಲ್ಲಿ ಬಿದ್ದ ಒಣ ಕಟ್ಟಿಗೆ ಕಟ್ಟಿಕೊಂಡು ಬಂದರೂ ಗಂಡನಿಂದ ಬಯ್ಗಳ, ಹೊಡೆತ ತಿನ್ನುತ್ತಿದ್ದಳು. ಗುಡ್ಡದ ಮೇಲೊಯ್ದು ಎಷ್ಟು ಭಾರದ ಮಣ್ಣಿನ ಮಂಕರಿ ಕೊಟ್ಟರೂ ಜಪ್ಪನ್ನದೆ, ಏದುಸುರು ಬಿಡದೆ ಸುರಕ್ಷಿತವಾಗಿ ಅಂಗಳದಲ್ಲಿಡುತ್ತಿದ್ದಳು. ಹೆಚ್ಚಾಗಿ ಬೇರೆಯವರ ಮಣ್ಣಿನ ಮಂಕರಿಯನ್ನೇ ಆಕೆ ಹೊತ್ತು ತರುತ್ತಿದ್ದುದುಂಟು. ಅವಳ ಗಂಡ ಮಡಕೆ ಮಾಡುತ್ತಿರಲಿಲ್ಲ. ತನಗೆ ಬೇಕಾದಂತಹ ಮಣ್ಣು ತಾನೇ ತಂದು, ಕಲಿಸಿ ಮೆತ್ತಗೆ ಮಾಡಿ ಮೂರ್ತಿ ಇತ್ಯಾದಿ ಮಾಡುತ್ತಿದ್ದ ಮಣ್ಣು ಹೊತ್ತುಕೊಂಡು ಸೀತವ್ವನ ಅಂಗಳದಲ್ಲಿ ಆಗಾಗ್ಗೆ ಹಾಯ್ದು ಹೋಗುವಾಗ ಅವಳಿಗೆ ಕೇಳುವಂತೆ "ಹುಚ್ಚುರಂಡಿಗೆ ಮಣ್ಣು ಬಡಿಯಾಕೂ ಬರೂದಿಲ್ಲ. ಕಲಸಾಕೂ ಬರೂದಿಲ್ಲ. ಎಂದು ಬಡಬಡಿಸುತ್ತ ಹೋಗುತ್ತಿದ್ದ.

ಹೆಣ್ಣು ಮಗಳು ಮೈಕೈಲ್ಲಿ ತುಂಬಿಕೊಂಡಿದ್ದರೂ ಕುಪ್ಪುಸದಲ್ಲಿ ಎದೆ ನೀಟಾಗಿ ಕಾಣಿಸುತ್ತಿದ್ದರೂ ಮದುವೆಯಾಗಿ ನಾಲ್ಕು ವರ್ಷಗಳಾದರೂ ಅವಳಿಗೆ ಮಕ್ಕಳಾಗಿರಲಿಲ್ಲ. ಇತರ ಹೆಣ್ಣು ಮಕ್ಕಳು ಅವಳಿಗೆ 'ಏನವ್ವ ಯಾಕ ಇನ್ನೂ ನಮ್ಮ ಬಾಯಿ ಸಿಹಿ ಮಾಡಿಲ್ಲ 'ಗುಮಟೆಯ ಮೇಲೆ ಬಡಿಗೆ ಬೀಳೋದ್ಯಾವಾಗ? ಅಂತ ಗೇಲಿ ಮಾಡುತ್ತಿದ್ದರು.

ಅವಳು ಬೇರೇನೆ ಹೇಳುತ್ತಿದ್ದಳು "ನನ್ನಪ್ಪ ಒಂದ ಪ್ರಾಣಿ ಬ್ಯಾಟಿ ಮಾಡಿ ತರ್‍ತಿದ್ದ. ಅದರ ಚರ್ಮ ಗುಮಟೆ ವಾದ್ಯಕ್ಕೆ ಹಾಕತಿದ್ದ. ಎಷ್ಟು ಭೇಷಾಗಿ ಬಾರಿಸ್ತಿದ್ದ ಗುಮಟೆ ವಾದ್ಯ ಗೊತ್ತೈತೇನು? ನನ್ನವ್ವ ಪ್ರಾಣಿಯ. ಮಾಂಸದ ಅಡಗಿ ಎಷ್ಟು ರುಚಿರುಚಿ ಮಾಡ್ತಿದ್ದಳು ಅಂತೀ. ಈ ನಮ್ಮ ಮನಿಯಾವ್ರು ಗುಮಟೆಯ ಮಡಕೆ ಮಾಡೂಂತಂದ್ರ ಗೊಂಬಿ ಮಾಡ್ತಾ ಕೂಡತಾರ. ಏನನ್ನೂಣು?"

ಸೀತಾರಾಮ ಹುಚ್ಚು ಹಿಡಿದವರಂತೆ ರಾಶಿರಾಶಿ ಗೊಂಬೆ. ಮಾಡುತ್ತಿದ್ದ. ಇವನು ಮಾಡಿದ ಗೊಂಬೆಗಳ ಮೆರವಣಿಗೆ ಜಾತ್ರೆಯಲ್ಲಿ ಮಾಡುತ್ತಿದ್ದರು. ಒಂದೇ ಒಂದು ಜಾತ್ರೆಯನ್ನೂ ಬಿಡುತ್ತಿರಲಿಲ್ಲ. ಕಾರವಾರವಿರಲಿ, ಕಾಣಕೋಣವಿರಲಿ ಯಾವ ಊರಾದರೇನು ಜಾತ್ರೆಯ ದಿನ ಸರಿಯಾಗಿ ತಿಳಿದುಕೊಂಡು ತಾನು ಮಾಡಿದ ರಾಶಿ ರಾಶಿ ಗೊಂಬೆಗಳನ್ನು ಹೆಡಿಗೆಯಲ್ಲಿ ತುಂಬಿಕೊಂಡು ಹೆಡಿಗೆ ತಲೆಯ ಮೇಲಿಟ್ಟುಕೊಂಡು ಜಾತ್ರೆಗೆ ಹೊರಟು ಬಿಡುತ್ತಿದ್ದ. ಅನಂತರ ನಾಲ್ಕೆಂಟು ದಿನ ನಾಪತ್ತೆಯಾಗಿ ಬಿಡುತ್ತಿದ್ದ. ಅವನು ಯಾವ ಜಾತ್ರೆಯಲ್ಲಿದ್ದಾನೆ, ಎಲ್ಲಿ ಊಟ ಮಾಡುತ್ತಿದ್ದಾನೆ, ಎಲ್ಲಿ ಮಲಗುತ್ತಿದ್ದಾನೆ ಒಂದೂ ಗೊತ್ತಾಗುತ್ತಿರಲಿಲ್ಲ.

ಜಾತ್ರೆಗೆ ಹೋದಾಗ ಹೊರಗಿನ ಇನ್ನೊಂದು ಸಂಸಾರ ನೋಡಿಕೊಂಡು ಬರುತ್ತಿದ್ದ. ಹೆಂಡತಿ ಮಾತಾಡುವಾಗ ಏನಾದರೂ ತಪ್ಪಾದರೆ ಅವಳಿಗೆ ದನ ಬಡಿದಂತೆ ಬಡಿಯುತ್ತಿದ್ದ. ಆಗ ಅವಳು ಚಿಕ್ಕ ಮಗುವಿನಂತೆ ಅಳುತ್ತಿದ್ದಳು. "ನೀವ್ ಬರ್‍ತೀರಿ ಅಂತ ಪಡಿ ತುಂಬಿ ಅಕ್ಕಿ ಕಾದು ಕಾದು ಇಟ್ಟಿದ್ದೆ. ಅನ್ನ ಮಿದುವಾದ್ರ ಮಿದುವಾಗ್ಯದ ಅಂತೀರಿ, ಗಟ್ಟಿಯಾದ್ರ ಗಟ್ಟಿ ಕಲ್ಯಾಗ್ಯದ ಅಂತೀರಿ, ನಿನಗೇನ ಹುಚ್ಚ ಹಿಡಿದೈತೇನಂತೀರಿ"

ಅನಂತರ ಒಂದು ಬಾರಿ ಒಂದು ಜಾತ್ರೆಗೆ ಗೊಂಬೆ ತಕ್ಕೊಂಡು ಹೋದವನು ತಿರುಗಿ ಬರಲೇ ಇಲ್ಲ. ಎಂಟು ದಿನ, ಹದಿನೈದು ದಿನ, ಮೂರು ತಿಂಗಳು ಸರಿದುಹೋದವು. ಬರಲೇ ಇಲ್ಲ. ಅನಂತರ ಮಲ್ಲಾಪುರದ ಅವಳ ಸಹೋದರನಿಂದ ಅವನು ಫಾತರ್ಪೆಯಲ್ಲಿ ಇನ್ನೊಬ್ಬಳೊಡನೆ ಮದುವೆಯಾಗಿದ್ದಾನೆಂದು ತಿಳಿದು ಬಂತು.

ಈ ವಿಷಯ ತಿಳಿದ ನಂತರ ಅವನ ಹೆಂಡತಿ ಹೇಳಿದಳು ಅವನು ಅಂಥಾವ್ನ. ಹೆಣ್ಣು ಬಾಕ–ಲಂಪಟ ಅಂತಾರಲ್ಲ ಹಂಗ. ನನಗ ಹೇಳುತ್ತಿದ್ದ. ಗೊಂಬಿ ಮಾರಿಯಾದ ಮ್ಯಾಲ ಕನಕಾಂಬರ ಹೂವು ಮಾರಾಕ್ ಕೂಡತೀನಿ ಅಂತ. ಗೊಂಬೆ ತಲೀಮ್ಯಾಗಿಟ್ಟು ಹೂ ಮುಡಿಸಿರಬೇಕು ಆಕಿಗ" ಸಿಡಿಮಿಡಿಗೊಂಡು ಆಕೆ ಮಾತಾಡಿದ್ದು ನಿಜವಾದರೂ ಸಾಯಂಕಾಲ ತನ್ನ ಗುಡಿಸಲ ಬಾಗಿಲಲ್ಲಿ ಕುಳಿತು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಅವಳ ಸ್ವರಕ್ಕೆ ಸ್ವರ ಬೆರೆಸಿ ಗುಡ್ಡದ ಮೇಲಿರುವ ನಾಯಿಗಳೂ ಕರುಣಾಜನಕವಾಗಿ ಕೂಗಲಾರಂಭಿಸಿದವು. ಆ ವಾಡೆಯಲ್ಲಿ ಒಂದು ಬಗೆಯ ಶೋಕತಪ್ತ ವಾತಾವರಣ ನಿರ್ಮಾಣವಾಯಿತು.

ಎಷ್ಟೊ ಹೆಂಗಸರು ಗಂಡಸರು ಆ ಕಡೆಯಿಂದ ದಾಟಿ ಹೋದರು. ಯಶವಂತನು ಕೇಳಿದ "ನೀ ಅಂವಾ ಸತ್ತ್ಯಾಂಗ ಯಾಕ ಅಳ್ತಿ? ಅಂವಾ ಅವನ ತಲಬು ತೀರ್ಸಿಕೊಳ್ಳಾಕ ಹೋಗ್ಯಾನ. ಬಂದಾಗ ಬರ್ತಾನ ಬಿಡು. ನೀ ನಿಂಥ ನೋಡ್ಕೊ."

ಯಾರಾದರೂ ಬೆಟ್ಟಕ್ಕೆ ಮಣ್ಣು ತರಲಿಕ್ಕೆ ಹೋದರೆ ಅವಳು ಅವನ ಹಿಂದೆ ಓಡುತ್ತಿದ್ದಳು. ಅವನೊಂದಿಗೆ ತಾನೂ ಮಣ್ಣು ಹೊರುತ್ತಿದ್ದಳು. ಬರಬೇಡ ಅಂದರೂ ಕೇಳುತ್ತಿರಲಿಲ್ಲ. ಯಾರಾದರೂ ಅಂಗಳದಲ್ಲಿ ಮಣ್ಣು ಬಡಿಯಲು ಕುಳಿತರೆ ತಾನೂ ಒಂದು ಬಡತಿ ಹಿಡಿದು ಮಣ್ಣು ಜಪ್ಪಲು ಕುಳಿತುಕೊಳ್ಳುತ್ತಿದ್ದಳು. ಯಾರಾದರೂ ಆವಿಗೆ ಉರಿಸಲು ಪ್ರಯತ್ನಿಸುತ್ತಿದ್ದರೆ ತಾನೂ ಅಲ್ಲಿಯೇ ಗುಣಗುಣಿಸುತ್ತ ನಿಲ್ಲುತ್ತಿದ್ದಳು. ಒಂದು ದಿನ ಗೋಪಾಳ ಆವಿಗೆ ಹಚ್ಚುವ ಕೆಲಸದಲ್ಲಿ ನಿರತನಾಗಿದ್ದ. ಮಡಿಕೆಗಳನ್ನು ಒಟ್ಟುವ ಪ್ರಯತ್ನ ದಲ್ಲಿದ್ದಾಗ ಒಬ್ಬಾಂವ ರೈತ ಹೊಲದಾಗ ಬೆದರುಗೊಂಬಿ ತಲಿ ಇಡಾಕ ಬೇಕಂತಿದ್ದ."

ಆ ಮಾತಿಗೆ ಗೋಪಾಳ ತಕ್ಷಣ ಬಿಸಿಯಾದ 'ಅವಲಕ್ಷಣ ರಂಡಿ ಆವಿಗ್ಯಾಗ ಗಡಗಿ ಇಡೂ ಮುಂಥ ಗಡಗಿ ಒಡೀಲಿ ಅಂತೀಯೇನು? ನಡೀ... ಇಲ್ಲಿಂದ... ಇಲ್ಲದಿದ್ರ ತಲೀಮ್ಯಾಗ ಬಡಗಿ ಇಡತೇನ ನೋಡು"

ಗಂಡ ಬಿಟ್ಟು ಹೋದ ಮೇಲೆ ಬೇರೆ ಬೇರೆ ಗಂಡಸರು ಆಗಾಗ್ಗೆ ಗುಡಿಸಲ ಕಡೆಗೆ ಬಂದು ಗುಣಗುಣಿಸುತ್ತಿದ್ದರು. ಕೆರೆಗೆ ಹೋದರೆ ಬಟ್ಟೆಯ ಗಂಟು ಭಾರವಾದರೆ ಅವಳ ತಲೆಯ ಮೇಲಿಡುವ ನೆಪದಲ್ಲಿ ಅವಳ ಹೊಟ್ಟೆಯನ್ನು ಜಿವುಟುತ್ತಿದ್ದರು. ಎದೆ ಸವರುತ್ತಿದ್ದರು. ಅವಳು ಹುಸಿಕೋಪದಿಂದ.. 'ಶ್ಶಿ ನೋಯ್ತದ...' ಎಂದು ಹೇಳಿ ಹಿಂತಿರುಗಿ ನೋಡಿ ಹೊರಟು ಹೋಗುತ್ತಿದ್ದಳು.

ಯಾರಾದರೊಬ್ಬ ಅವಳ ಗುಡಿಸಲಿನಲ್ಲಿ ರಾತ್ರಿ ಅಪರಾತ್ರಿಯಲ್ಲಿ ನುಗ್ಗುತ್ತಿದ್ದ. ಅವಳ ಸೊಂಟಕ್ಕೆ ಕೈ ಹಾಕಿ ಅಡ್ಡ ಮಲಗಿಸುತ್ತಿದ್ದ. ಅವಳು ಬೇಕು ಬೇಡ ಒಂದೂ ಹೇಳುತ್ತಿರಲಿಲ್ಲ. ಮಜಾ ತೆಗೆದುಕೊಳ್ಳುವ ನರಿಯಂತೆ ಮುಸುಗುಟ್ಟುತ್ತ ಬಿದ್ದುಕೊಳ್ಳುತ್ತಿದ್ದಳು. ಹಿರಿಯರು ಕಿರಿಯರೆನ್ನದೆ ಯಾರು ಯಾರೊ ಬರುತ್ತಿದ್ದರು. ಕೊನೆ ಕೊನೆಗೆ ವಾಡೆಯ ಹೊರಗಿನ ರೈತರೂ ಕೂಡ ಅವಳ ಝೋಪಡಿಯಲ್ಲಿ ನುಗ್ಗ ತೊಡಗಿದರು.

ಸುಮಾರು ಒಂದೂವರೆ ವರ್ಷ ಈ ಆಟ ನಡೆದಿತ್ತು. ತುಂಬ ಜನ ಈ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. ಹೆಣ್ಣು ಮಕ್ಕಳಿಗೂ ಈ ಸುದ್ದಿ ತಿಳಿದಿತ್ತು. ಅವರು ಸಿಟ್ಟಿನಿಂದ ಅವಳನ್ನು ನೋಡುತ್ತಿದ್ದರು. ಕೆಲವರು ಬಾಯಿಯಲ್ಲಿ ನಿರೂರಿಸಿಕೊಂಡು ಗುಸುಗುಸು ಮಾತಾಡುತ್ತಿದ್ದರು. ಅವರು "ಆಕಿಗೂ ಮೈಮನಸ್ಸೈತಲ್ಲ. ಆಕಿಗೂ ಸುಖ ಬೇಕಲ್ಲ" ಅವಳ ಗುಡಿಸಲಿಗೆ ಹೋಗಿ ಕುಳಿತುಕೊಂಡು ಅತ್ತಿತ್ತ ಕತ್ತು ಹೊರಳಿಸಿ, ಏನೇನೊ ವಿಷಯ ಎತ್ತಿ ಮಾತಿನಿಂದ ಅಂದಾಜು ಮಾಡುತ್ತಿದ್ದರು. ಕುಂಬಾರಕೇರಿಯಲ್ಲಿ ಈ ಹಿಂದೆ ಇಂಥ ಘಟನೆ ನಡೆದಿರಲಿಲ್ಲ. ಕೆಲವರಿಗಂತೂ ಇದು ತಮಾಷೆಯ ವಿಷಯವಾಗಿತ್ತು. ಎಲ್ಲರೂ ಉತ್ಸುಕತೆಯಿಂದ ಕೇಳಿ ತಮ್ಮ ತಮ್ಮಲ್ಲೆ ಸಂತೋಷ ಪಡುತ್ತಿದ್ದರು.

ಯಾರಾದರೊಬ್ಬರು ಸೀತವ್ವನಿಗೆ ಈ ವಿಷಯ ತಿಳಿಸುತ್ತಿದ್ದಳು. ಸೀತವ್ವನೂ ವಾಸನೆ

ಹಿಡಿಯಲು ಒಳ ಬದಿಯ ಕಿಂಡಿಯಿಂದ ನೋಡುತ್ತಿದ್ದಳು. ಅದಕ್ಕೂ ಮೊದಲು ಸೊಸೆ ಹತ್ತಿರದಲ್ಲೆಲ್ಲೂ ಇಲ್ಲ ಎಂದು ಮನದಟ್ಟು ಮಾಡಿಕೊಳ್ಳುತ್ತಿದ್ದಳು.

ಮೂವತ್ತು ವರ್ಷದ ವಿಧವೆ ಸೊಸೆ ಮನೆಯಲ್ಲಿದ್ದಳು. ಅವಳ ಉಸಿರುಗಟ್ಟಿದ ಬದುಕು ಅವಳು ನೋಡುತ್ತಿದ್ದಳು. ಅವಳು ಒಲೆಯಲ್ಲಿದ್ದ ಕಟ್ಟಿಗೆಯನ್ನು ಹೊರಗೆಳೆದು ಜಪ್ಪಿದಳು. ಜೋರಾಗಿ ಕೆಡವಿದಳು. ಪಾತ್ರೆಗಳನ್ನು ನೆಲಕ್ಕೆ ಕುಟ್ಟಿ ಸದ್ದು ಮಾಡಿದಳು. ಅವಳೂ ಮುಂಧೋರಣೆಯ ಹೆಂಗಸು. ಅವಳೂ ಪರಿಸ್ಥಿತಿಯ ಅಂದಾಜು ಮಾಡುತ್ತಿದ್ದಳು. ಸೊಸೆ ರೇಗಿದರೂ ಕೆಲವೊಮ್ಮೆ ಸುಮ್ಮನಿರುತ್ತಿದ್ದಳು. ಆದರೆ ಊರಲ್ಲಿ ನಡೆದ ಇಂಥ ಹೊಲಸು ಸಮಾಚಾರ ಸೊಸೆಯ ಕಿವಿಯ ಮೇಲೆ ಬೀಳದಂತೆ ಎಚ್ಚರ ವಹಿಸುತ್ತಿದ್ದಳು. ತಾನೂ ದೂರ ಇರುತ್ತಿದ್ದಳು. ಒಂದೊಂದು ಬಾರಿ ಇಂಥ ಹೊಲಸು ಸುದ್ದಿ ಹಬ್ಬಿಸುವ ಹೆಂಗಸರ ಮುಡಿಗೆ ಕೈ ಹಾಕಿ ದಬಾಯಿಸುತ್ತಿದ್ದಳು.

ದಿನ ಕಳೆದಂತೆ ಬಾಯಜಾ ಈ ಹೊಲಸು ವ್ಯವಹಾರದಿಂದ ಸುಸ್ತಾದಳು, ಬೇಸರಪಟ್ಟಳು. ತನ್ನ ಪಾಡಿಗೆ ತಾನಿರತೊಡಗಿದಳು. ಗಂಡಸರ್ಯಾರಾದರೂ ಬಂದರೆ ಅಂಜುತ್ತಿದ್ದಳು. ಬಂದವನು ಕಟಿಗೆ ಕೈ ಹಾಕಿದರಂತೂ ಚಿಕ್ಕ ಮಕ್ಕಳಂತೆ ಇಂ.. ಇಂ... ಮಾಡಿ ಮುಖಮುಚ್ಚಿಕೊಂಡು ಅಳುತ್ತಿದ್ದಳು.

ಧರ್ಮುನ ಅಜ್ಜಿಗೆ ಈಗ ತೊಂಬತ್ತು ದಾಟಿರಬಹುದು. ಧರ್ಮುನ ತಾಯಿ ತೀರಿಕೊಂಡಿದ್ದಳು. ಅಜ್ಜಿ ಬದುಕಿದ್ದಳು. ಇತ್ತೀಚೆಗೆ ಧರ್ಮುನ ಕುಡಿತ ಹೆಚ್ಚಾಗಿ ಕುಡಿದು ಹೊಲದಂಚಿನಲ್ಲಿ ದಾಟುವ ದಾರಿಯಲ್ಲಿ, ಎಲ್ಲೆಂದರಲ್ಲಿ ಬಿದ್ದಿರುತ್ತಿದ್ದ. ಮನೆಗೆ ಬಂದರೆ ಮನೆಯ ವರಾಂಡದಲ್ಲಿ ಕುಳಿತು ಯಾರದೊ ಹೆಸರಿನಲ್ಲಿ ಬೊಬ್ಬೆ ಹಾಕುತ್ತಿರುತ್ತಿದ್ದ. ದೇಹ ಅಸ್ಥಿ ಪಂಜರವಾಗಿತ್ತು. ಅವನ ಹೆಂಡತಿ ಮತ್ತು ಮಗ ಪ್ರೇಮಾನಂದ ಹೇಗೆ ಹೇಗೊ ತಮ್ಮ ಕುಂಬಾರಿಕೆಯನ್ನು ಸಂಬಾಳಿಸುತ್ತಿದ್ದರು. ಧರ್ಮುನ ಕಿರಿಯ ಸಹೋದರ ಶಾಣು ಅವನ ಹೆಂಡತಿ ಗತಿಸಿದ ಮೇಲೆ ಹುಚ್ಚು ಹಿಡಿದಂತವನಾಗಿದ್ದ.

ಅಜ್ಜಿ ಮುದುಕಿಯನ್ನು ಯಾರೂ ನೋಡುತ್ತಿರಲಿಲ್ಲ. ಅವಳೂ ಎಷ್ಟು ಹಠಮಾರಿ ಯೆಂದರೆ ಹೊರಗೆ ಹೋಗಿ ಬೇಡಿ, ತಿನ್ನುವುದರಲ್ಲಿಯೇ ಅವಳಿಗೆ ಖುಷಿಯಿರುತಿತ್ತು. ಅವಳು ಒಂದು ಮಣ್ಣಿನ ತಟ್ಟೆ ಹಿಡಿದುಕೊಂಡು ಅವರಿವರ ಮನೆಯ ಬಾಗಿಲಲ್ಲಿ ನಿಂತು 'ಒಂದೀಟ ಗಂಜಿ ಹಾಕ್ರ ಅಂತ ದೈನತೆಯಿಂದ ಬೇಡುತ್ತಿದ್ದಳು. ಒಮ್ಮೊಮ್ಮೆ ಕೋಲೂರಿಕೊಂಡು ಹೂಂಹೂಂ ಮಾಡುತ್ತ ಮಣ್ಣಿನ ತಟ್ಟೆ ಹಿಡಿದು ರೈತರ ವಾಡೆಗೂ ಹೋಗಿ ಬರುತ್ತಿದ್ದಳು. ಅವಳ ಹಲ್ಲು ಉದುರಿಬಿದ್ದ ಮುಖ, ಬಾಡಿದ ದೇಹ, ಗುಳಿಬಿದ್ದ ಕಣ್ಣು, ಕೂದಲುದುರಿದ ತಲೆ, ಧರ್ಮುನಂತೆ ಕಪ್ಪುಕಪ್ಪಾದ ಮೈಮಾಟ ಒಂದು ಭಯಾನಕ ಚಿತ್ರ ಮುಂದಿಡುತ್ತಿತ್ತು. ಕೈಯಲ್ಲಿ ಕೋಲು ಹಿಡಿದು ಕಾಲು ಎಳೆಯುತ್ತಾ ಕೈಯಲ್ಲೊಂದು ಪಾತ್ರೆ ಹಿಡಿದು ನಿಧಾನವಾಗಿ ಸಾಗುತ್ತಿದ್ದಳು. ಹತ್ತಿರ ಬಂದು ಕಣ್ಣು ಚಿಕ್ಕದು ಮಾಡಿ ಯಾರಿಗಾದರೂ ಕೇಳುತ್ತಿದ್ದಳು. "ನಿನ್ನೆ ರಾತ್ರಿ ನಿಮ್ಮ ಮನ್ಯಾಗ ಯಾರ ಅಳಾಕ ಹತ್ತಿದ್ರು?"

ತುಂಬ ದಿನಗಳ ಹಿಂದೆ ಅವಳು ಒಂದು ಕಥೆ ಹೇಳುತ್ತಿದ್ದಳು. ಒಮ್ಮೆ ಈಶ್ವರ ಸಂನ್ಯಾಸಿಯ ರೂಪ ಧರಿಸಿ ಕುಂಬಾರನ ಸತ್ವ ಪರೀಕ್ಷೆ ಮಾಡಲು ಭೂಮಿಗೆ ಬಂದನಂತೆ.

ಕುಂಬಾರ. ಭಟ್ಟಿಯಲ್ಲಿ ಹಾಕಿ ಸುಡಲು ಗಾಳಿಯಲ್ಲಿ ಒಣಗಿಸಿದ ಮಡಕೆಗಳನ್ನು ಆವಿಗೆಯಲ್ಲಿ ತಂದು ಸಾಲಾಗಿ ಇಡುತ್ತಿದ್ದಾಗ ಬಂದ ಈಶ್ವರ ತಾನೊಂದು ಬಂಗಾರದ ಗಡಿಗೆಯನ್ನು ಕುಂಬಾರನ ಕಣ್ಣು ತಪ್ಪಿಸಿ ಆವಿಗೆಯಲ್ಲಿಟ್ಟನಂತೆ.

ಮರುದಿನ ಸುಟ್ಟ ಗಡಿಗೆಗಳನ್ನು ಹೊರಗೆ ತೆಗೆಯುವಾಗಿ ಅವನಿಗೆ ಆ ಬಂಗಾರದ ಗಡಿಗೆ ಕೈಗೆ ಸಿಕ್ಕಿತು. ಅವನು ಸದ್ದುಗದ್ದಲ ಮಾಡದೆ ಅದನ್ನೊಯ್ದು ತನ್ನ ಮನೆಯಲ್ಲಿಟ್ಟನಂತೆ.

ಎರಡನೆಯ ದಿನ ಈಶ್ವರ ಬಂದು ಕೇಳಿದನಂತೆ. 'ಆವಿಗೆ ಹೇಗೆ ಉರೀತು. ಆವಿಗೆಯಲ್ಲಿ ಏನು ಸಿಕ್ಕೀತು?"

ಕುಂಬಾರ ಹೇಳಿದ "ಏನ್ ಸಿಗತದ ಮಣ್ಣು ಮತ್ತು ಬೂದಿ"

ಈಶ್ವರ ಶಾಪ ಕೊಟ್ಟ "ನಿಮಗೆ ಆಯುಷ್ಯಪೂರ್ತಿ ಮಣ್ಣು ಮತ್ತು ಬೂದಿಯೇ ಸಿಗಲಿ" ಎಂದು.

ಮುಂದೇನಾಯಿತು ಅಂದರೆ ಕುಂಬಾರನ ಅಣ್ಣ ತಮ್ಮಂದಿರು ಆ ಬಂಗಾರದ ಮಡಕೆಗಾಗಿ ಬಡಿದಾಡಿ ಸತ್ತರು.

ಇಂದು ಕುಂಬಾರ ಸಹೋದರಲ್ಲಿ ಬಾಂಧವ್ಯ ಇಲ್ಲ. ಮದುವೆಯಾದ ಮರುದಿನವೇ ಸಹೋದರ ಬೇರೊಂದು ಒಲೆ ಹೂಡುತ್ತಾನೆ. ಅಲ್ಲದೆ ಮಣ್ಣು ಮತ್ತು ಬೂದಿ ತಿನ್ನುವಷ್ಟು ಬಡತನ.

ಅಜ್ಜ ಮುದುಕಿ ರಾತ್ರೆಯ ಹೊತ್ತು ವಾಡೆಯಲ್ಲೆಲ್ಲ ಓಡಾಡುತ್ತಿದ್ದಳು. ಕೆಲವು ಗಂಡಸರು ಬಾಯಜಾಳ ಗುಡಿಸಲಿನಲ್ಲಿ ಹೊಕ್ಕು ಅವಳನ್ನು ಮುಕ್ಕುತಿದ್ದುದನ್ನು ಅವಳು ನೋಡುತ್ತಿದ್ದಳು. ಆ ಗುಡಿಸಲಿನ ಹಿಂಭಾಗಕ್ಕೆ ಒಂದೇ ಒಂದು ಕಿಟಕಿಯಿತ್ತು. ಅದಕ್ಕೆ ಗೋಣಿಚೀಲ ತೂಗು ಹಾಕುತ್ತಿದ್ದರು. ಅವಳು ಆ ಗೋಣಿಚೀಲ ಬದಿಗೆ ಸರಿಸಿ ಚಿಮಣಿಯ ದೀಪದ ಮಂದ ಬೆಳಕಿನಲ್ಲಿ ನೋಡುತ್ತಿದ್ದಳು. ಗಂಡಸೊಬ್ಬ ಬಂದು ಸೊಂಟ ಬಳಸಿದರೆ ಬಾಯಜಿ ಅತ್ತಂತೆ ಮಾಡುತ್ತಿದ್ದಳು. ಆದರೆ ಅವನ ಕೆಳಗೆ ಬಿದ್ದೊಡನೆ ತಣ್ಣಗಾಗುತ್ತಿದ್ದಳು. ಸುಮ್ಮನೆ ಮುಲುಗುತ್ತ ನಿಟ್ಟುಸುರು ಬಿಡುತ್ತಿದ್ದಳು.

ಒಂದು ದಿನ ಮಧ್ಯಾಹ್ನ ಅವಳು ಬಾಯಜಾಳ ಮನೆಗೆ ಹೋದಳು. ಬಚ್ಚು ಬಾಯಲ್ಲಿ ಅಸಭ್ಯ ಮಾತಾಡುತ್ತ ಮುದುಕಿ "ಏನವ್ವ ನಿನ್ನ ತಲಬು ಜಾಸ್ತಿಯಾಗಾಕ ಹತ್ತ್ಯೈತಿ. ಕಂಡ ಕಂಡ ಮಂದೀನ್ನ ಮನ್ಯಾಗ ಬಿಟಕೋತಿಯೇನು... ನಿನಗೆಂಥ ಕಡತ ಬಂದ್ಯೆತವ್ವಾ?"

"ಆ ಗಂಡಸರದಾರಲ್ಲ... ಒಳಗ ಬಂದು ಸೊಂಟ ಹಿಡಕೋತಾರ. ನಾನಾರೂ ಏನ್ ಮಾಡಲಿ. ಮತ್ತ ನನಗಂಡ ನನಗ್ಯಾಕ ಒಬ್ಬಾಕೀನ ಬಿಟ್ಟು ಹ್ಯಾದ. ಆಂವಾ ಇರಬೇಕಿತ್ತಲ್ಲ. ಅಂವಾ ಇದ್ರ ಹಿಂಗ ಆಗತಿತ್ತೇನ?"

"ನಾ ಇನ್ನ ಮ್ಯಾಗ ನೋಡತೀನಿ... ನಿನ್ನ ಸೀರೀಗ ಯಾರ್ ಕೈ ಹಾಕ್‌ತಾರಂತ. ಈಗ ನೀಡವ್ವ ನಿನ್ನ ಗಡಿಗ್ಯಾಗ ಏನಾದ್ರೂ ಇದ್ರ" ಎಂದಳು ಮುದುಕಿ.

ಅನಂತರ ಅವಳು ನಿತ್ಯ ಬಾಯಜಾಳ ಗುಡಿಸಲಿನ ಮುಂಬಾಗಿಲಿನಲ್ಲಿ ಅಡ್ಡ ಮಲಗಿರುತ್ತಿದ್ದಳು. ಹೊರಗೆ ಕಾಲಿನ ಸದ್ದಾದ ಕೂಡಲೆ ನೆಲದ ಮೇಲೆ ಕೋಲು ಜಪ್ಪುತ್ತಿದ್ದಳು. ಯಾರಾದರೂ ಬಂದು ಬಾಗಿಲಿಗೆ ಕೈ ಹಾಕಿದರೆ ದೊಡ್ಡಕ್ಕೆ ದೊಡ್ಡಕೆ ಕೆಕ್ಕರಿಸಿ

ಕೆಮ್ಮುತ್ತಿದ್ದಳು. ಅವಳು ಕೆಮ್ಮುವುದು ನೋಡಿದರೆ ಇನ್ನೇನು ಬಂದವನ ಮೈಮೇಲೆ ಉಗುಳುತ್ತಾಳೆ ಎನ್ನುವಂತಿರುತ್ತಿತ್ತು. ಹೊರಗೆ ನಿಂತವ ಅಲ್ಲಿಂದ ಪಲಾಯನ ಮಾಡುತ್ತಿದ್ದ.

ಒಂದು ದಿನ ಅಂಬಿಗರು ಮಾವಿನ ಮರ ಕ್ರಯಕ್ಕೆ ಕೇಳಲು ಮತ್ತೆ ಬಂದರು. ಮೂವರು ಮರದ ಕೆಳಗೆ ನಿಂತು ಮರದ ಸುತ್ತು ಹಾಕುತ್ತಿದ್ದರು. ಕಣ್ಣಿನ ಮೇಲೆ ಬಿಸಿಲು ಬೀಳಬಾರದೆಂದು ಅಡ್ಡ ಕೈ ಹಿಡಿದು ಮೇಲೆ ನೋಡುತ್ತಿದ್ದರು. ಯಾರೊ ಮೂವರು ಬಂದು ಮರದ ಕೆಳಗೆ ನಿಂತು ಮಾತಾಡುತ್ತಿದ್ದರು, ಮರ ಪರೀಕ್ಷಿಸುತ್ತಿದ್ದಾರೆ. ಇದನ್ನು ನೋಡಿದ ಗೋಪಾಳ ಪುರಸೊ, ಶಿವರಾಮ ತಮ್ಮ ಕೆಲಸ ಬಿಟ್ಟು ಅವರ ಬಳಿ ಬಂದರು. ಪುರುಶ್ಯಾ ಮಾತಾಡತೊಡಗಿದ. "ಹಿಂದ ನೀವ್ ಬಂದಾಗ ನಾವು ಮರಾ ಮಾರೂದಿಲ್ಲ ಅಂತ ಹೇಳಿ ಕಳಿಸೇವಿ. ಮತ್ಯಾಕ ಈಗ ಬಂದ್ರಿ?"

"ನಿಮ್ಮ ಮನಶ್ಯಾನೇ ಬಂದ್ ಹೇಳ್ಯಾನೆ ಮರಾ ಮಾರತೀವೀಂತ."

"ಯಾರಂವಾ?"

ಅವರ ನಾಲಿಗೆ ತಡವರಿಸಿತು. "ನಮಗ ಅವರ ಮಾರಿ ಗುರುತೈತಿರಿ... ಹೆಸರು ಗೊತ್ತಿಲ್ರಿ"

ಎಲ್ಲರೂ ಸುಮ್ಮನಾದರು. ಈಗ ಯಾವ ಕುಂಬಾರನಲ್ಲೂ ಅಲ್ಲಗಳೆಯುವ ಸಾಮರ್ಥ್ಯ ಉಳಿದಿರಲಿಲ್ಲ. ವ್ಯಾಪಾರ ನೆಲ ಕಚ್ಚಿತ್ತು. ಹಣದ ಅಗತ್ಯ ಎಲ್ಲರಿಗೂ ಇತ್ತು. ಗೋಪಾಳನ ಹುಡುಗಿಗೆ ಹದಿನಾರು ತುಂಬಿತ್ತು. ಕುಂಬಾರನ ಹೆಣ್ಣು ಮಕ್ಕಳಿಗೆ ಹದಿನಾರು ಎಂದರೆ ಮಿತಿ ಮೀರಿದ ವಯಸ್ಸು. ಯಶವಂತನ ಮನೆಯ ಹಿಂದಿನ ಮಾಡು ಜೀರ್ಣಗೊಂಡು ನೆಲಕ್ಕೊರಗಲು ಸಿದ್ಧವಾಗಿತ್ತು. ಧರ್ಮನ ಹೆಂಡದ ದಾಹ ದಿನದಿನಕ್ಕೆ ಹೆಚ್ಚಾಗುತಲಿತ್ತು. ಸೀತವ್ವನ ಮೊಮ್ಮಕ್ಕಳ ಪಿರಿಪಿರಿ ಸಹಿಸಲಸಾಧ್ಯವಾಗಿತ್ತು. ಪ್ರತಿಯೊಬ್ಬರೂ ಒಂದಲ್ಲ ಒಂದು ಅಡಚಣೆಯಲ್ಲಿದ್ದರು.

ಅವರು ಬಂದ ಅಂಬಿಗರಿಗೆ "ನಾವ್ ಸಂಜೀ ಮುಂದ ಕುಂತು ಮಾತಾಡ್‌ತೀವಿ. ಅವರ ಪರವಾನಗಿ ತಗೋತೀವಿ. ಅದರ ನೆನಪಿಟ್ಕೋರಿ... ಕಡಮಿ ಕಿಮ್ಮತ್ತಿನಾಗ ಹೊಡ್ಕೊಂಡು ಹೋಗಾಕ ನೋಡಿದ್ರೆ ಸಿಗಾಂಗಿಲ್ಲ. ನೀವ್ ಒಂದ್ಯಾಡ್ಡ ದಿವಸ ಬಿಟ್ಟು ಬರ್ರಿ"

"ಬರೀವಿ, ಬರ್ತೀವಿ... ಹೆಚ್ಚು ಕಮ್ಮಿಯಾದ್ರು ನಾವ್ ಕೊಟ್ಟು ತಗೋತೀವಿ"

ಅವರು ಹೊರಟು ಹೋದರು. ಸಂಜೆಯ ಸಮಯ ಒಬ್ಬೊಬ್ಬರಾಗಿ ಕುಂಬಾರರೆಲ್ಲ ಮೌನವಾಗಿ ಸೊಯರೂನ ಅಂಗಳದಲ್ಲಿ ಸೇರಿದರು. ಇದೊಂದು ದೊಡ್ಡ ನೆರಳು ಹಿಂದಿನ ಹಿರಿಯರೆಲ್ಲ ಕಾಪಾಡಿಕೊಂಡು ಬಂದ ದೊಡ್ಡ ಆಸ್ತಿ. ಮಕ್ಕಳು ಮರಿಗಳಿಗೆ ಬೇಕಾದ ಮಾವಿನ ಮರ ಅದನ್ನು ಮಾರಕೂಡದು ಎಂದು ಪ್ರತಿಯೊಬ್ಬನಿಗೂ ಅನ್ನಿಸುತ್ತಿತ್ತು. ಮಾವಿನ ಹಣ್ಣಿನ ಸುಗ್ಗಿಯಲ್ಲಿ ಅಲ್ಲೊಂದು ದೊಡ್ಡ ಉತ್ಸವ ನಡೆಯುತ್ತಿತ್ತು. ಇದು ಕುಂಬಾರರ ಮೂಲಧನ. ಈ ಮರದಿಂದಾಗಿ ಕುಂಬಾರ ಕುಲ ಒಂದಾಗಿ ನಿಂತಿದೆ. ಅದನ್ನು ಮಾರಬಾರದೆಂಬ ಒಳ ತುಡಿತ ಎಲ್ಲರಲ್ಲೂ ಇತ್ತು. ಆದರೆ ಅವರ ಈ ಕಷ್ಟ ಕಾಲದಲ್ಲಿ ಒಂದೊಂದು ಕಾಸೂ ಹುಣ್ಣಿಮೆಯ ಚಂದ್ರನಂತೆ ಅವರ ಕಣ್ಣೆದುರು ಹೊಳೆಯುವಂತಾಗಿತ್ತು.

ಮೊದಲು ಕುಂಬಾರರು ಇಂಥ ಮಾತುಕತೆಯ ಸಂದರ್ಭದಲ್ಲಿ ತಮ್ಮ ಬಲಾಬಲ ತೋರಿಸಲು ಏನಾದರೊಂದು ಕ್ಯಾತೆ ತೆಗೆದು ಒಬ್ಬರ ಮೇಲೊಬ್ಬರು ಹರಿಹಾಯುತ್ತಿದ್ದರು.

ಆದರೆ ಈ ಹೊತ್ತು ಮಾತ್ರ ಅವರೆಲ್ಲ ಬಾಯಿ ಮುಚ್ಚಿಕೊಂಡು ತೆಪ್ಪಗೆ ಕೂತಿದ್ದರು. ಯಾರಾದರೊಬ್ಬ ತಮ್ಮ ಪರವಾಗಿ ಮಾತನಾಡಿ ವಿಷಯ ಇತ್ಯರ್ಥ ಮಾಡುವುದು ಸೂಕ್ತ ಎಂದು ಅವರಿಗೆ ಅನಿಸುತ್ತಿತ್ತು. ತನ್ನ ಮಾತಿನಿಂದ ಎಲ್ಲ ಹಾಳಾಯಿತು ಎಂಬ ದೋಷ ತನ್ನ ಮೇಲೆ ಬರಬಾರದೆಂದು ಪ್ರತಿಯೊಬ್ಬರೂ ಬಯಸುತ್ತಿದ್ದರು. ಅವರು ಮಾತಾಡಿದ್ದಕ್ಕೆ ತಾನು ಹೌದು ಎಂದು ತಲೆಹಾಕುವುದಷ್ಟೇ ತನ್ನ ಕರ್ತವ್ಯವೆಂದು ಅವರು ಭಾವಿಸಿದ್ದರು.

ಎಲ್ಲರೂ ಮೌನವಾಗಿ ಕೂತಿದ್ದರು. ರಾಮಚಂದ್ರನು ಎಲ್ಲರ ಒಪ್ಪಿಗೆಯಿದೆಯೆಂದು ಭಾವಿಸಿ ವಿಷಯ ಪ್ರಸ್ತಾಪಿಸಿದ. ಹಿಂದೆ ಹದಿನೈದು ಅಂತಾರೆ ಅಂತ ಕೇಳ್ತಿದ್ದೀನಿ. ನಾವು ಈಗ ಕೊಡುವುದಾದರೆ ಇಪ್ಪತ್ತೈದಕ್ಕಿಂತ ಕಡಮೆ ಕೊಡಾಂಗಿಲ್ಲ."

"ಹೌದು... ಇಪ್ಪತ್ತೈದು ಹೇಳಾಕ ಬೇಕು" ಪುರುಶ್ಯಾ ತನ್ನ ಅಭಿಪ್ರಾಯ ಮಂಡಿಸಿದ.

ಘನಶಾಮನು ಮಾತು ಮೆಲುಕು ಹಾಕಿದಂತೆ 'ಕಡಮಿ ಅಂದ್ರೂ ಇಪ್ಪತ್ನಾಲು ಸಿಗಾಕ ಬೇಕು. ಅದಕ್ಕ ಕಡಮಿ ಆಗಾಂಗಿಲ್ಲ' ಘನಶ್ಯಾಮನ ಸಾದಾ ಗಣಿತ ಅಷ್ಟೇ ಇತ್ತು. ಇಪ್ಪತ್ನಾಲ್ಕು ಬಂದರೆ ಇರುವ ಎಂಟು ಕುಟುಂಬಗಳಿಗೆ ಹಂಚಿದರೆ ಒಂದೊಂದು ಕುಟುಂಬಕ್ಕೆ ಸರಿಯಾಗಿ ಮೂರು ಮೂರು ಸಾವಿರ ಸಿಗುತ್ತದೆಯೆಂಬ ಸರಳ ಲೆಕ್ಕಾಚಾರ ಅದರಲ್ಲಿ ಅಡಗಿತ್ತು.

ರಾಘೋಬನು ಎಲ್ಲರಿಗೂ ಮತ್ತೊಮ್ಮೆ ಕೇಳಿದ 'ಮರ ಮಾರೂದಲ್ಲ?'

ಒಂದು ಮೂಲೆಯಿಂದ ಒಂದು ತಣ್ಣಗಿನ ಮಾತು ಕೇಳಿ ಬಂತು. "ಅದರ ನೆರಳ ಭ್ಹಾಳ ಬೀಳತೈತಿ. ಗಡಗಿ ಒಣಗೂದಿಲ್ಲ. ಇಡೀ ವರ್ಷ ನೆರಳಿರತೈತಿ. ಗಡಗಿ ಒಣಗಿಸಾಕ ಹೊರಗ ಜಗಾ ಹುಡುಕಬೇಕಾಗತೈತಿ." ಸೀತವ್ವನೂ ಬಂದು ಪಕ್ಕದಲ್ಲಿ ನಿಂತು ಕೊಂಡಿದ್ದಳು. ಅವರ ಈ ಮಾತುಗಳನ್ನು ಕೇಳಿ ಅವಳಿಗೆ ನಗಬೇಕೊ ಅಳಬೇಕೊ ತಿಳಿಯದಾಯಿತು. ಆದರೆ ಬಾಯಿ ಮುಚ್ಚಿಕೊಂಡು ಸುಮ್ಮನೆ ನಿಂತಿದ್ದಳು. ಬೇರೆಯವರು ಯಾರೂ ಏನೂ ಮಾತನಾಡಲಿಲ್ಲ.

ಹೆಚ್ಚು ಚರ್ಚಿಸದೆ ಎಲ್ಲರೂ ಆ ನಿರ್ಣಯ ಒಪ್ಪಿಕೊಂಡರು. ಎಲ್ಲರ ಮನಸ್ಸಿನಲ್ಲೂ ಮರ ಮಾರುವುದಕ್ಕೆ ಒಪ್ಪಿಗೆಯಿತ್ತು. ಬರಲಿರುವ ಅಂಬಿಗರೊಂದಿಗೆ ಮುಂದಿನ ಮಾತುಕತೆಯ ಜವಾಬ್ದಾರಿ ಯಶವಂತ ಮತ್ತು ಪುರುಶ್ಯಾನ ಹೆಗಲ ಮೇಲೆ ಹಾಕಿ ಒಬ್ಬೊಬ್ಬರೇ ಅಲ್ಲಿಂದ ಹೊರಟು ಹೋದರು.

ಒಂದು ದಿನ ಹತ್ತು ಹತ್ತು ಅಂಬಿಗರ ತಂಡ ದಪ್ಪ ಹಗ್ಗ ತೆಗೆದುಕೊಂಡು ಬಂದರು. ಅವರಲ್ಲಿ ಇಬ್ಬರು ಮರ ಕಡಿಯುವುದರಲ್ಲಿ ನಿಷ್ಣಾತರಾಗಿದ್ದರು. ಅವರು ಮೊದಲು ಹಗ್ಗ ಹಿಡಿದು ಮರದ ತುದಿಯವರೆಗೂ ಏರಿ ಪೂರ್ತಿ ಮರದ ಅಂದಾಜು ತೆಗೆದುಕೊಂಡರು. ಅವರು ಈಗ ಆಕಾಶದಲ್ಲಿ ನಿಂತಂತೆ ಕಾಣುತ್ತಿದ್ದರು. ಕೆಳಗಿನಿಂದ ನೋಡುವವರಿಗೆ ತಲೆಸುತ್ತು ಬಂದಂತಾಗುತ್ತಿತ್ತು. ಆ ಮರ ಕಡಿಯುವ ಕೆಲಸ ಸುಲಭವಾಗಿರಲಿಲ್ಲ. ಅದೊಂದು ದೊಡ್ಡ ಮರ ಆಗಿತ್ತು. ಅದರ ಟೊಂಗೆ ಟಿಸಿಲುಗಳು ಸುತ್ತಲಿನ ಮನೆಯ ಮೇಲೆ ಚಾಚಿದ್ದವು. ಮೊದಲು ಗುಡಿಸಲುಗಳನ್ನು ಕಾಪಾಡಿ ಆ ಟೊಂಗೆ ಟಿಸಿಲುಗಳನ್ನು ಸವರಿ ಕೊಂಬೆಗಳನ್ನು ಕಡಿದ ನಂತರವೇ ಮರಕ್ಕೆ ಕೈ ಹಾಕಬೇಕಿತ್ತು.

ಪೂರ್ತಿ ದಿನ ಇಬ್ಬರು ಮರದ ಟಿಸಿಲು ಟಿಸಿಲುಗಳನ್ನು ಸವರಿ ಹಾಕಿದರು.

ಎರಡನೆಯ ದಿನ ಒಂದೊಂದು ಕೊಂಬೆ ಕಡಿದು ಹಗ್ಗ ಹಾಕಿ ನಿಧಾನವಾಗಿ ಕೆಳಗಿಳಿಸ ತೊಡಗಿದರು. ಮರದ ಟೊಂಗೆಗಳನ್ನು ಕಡಿದಾಗ ಆಕಾಶ ನಿಚ್ಚಳವಾಗಿ ಕಾಣತೊಡಗಿತು. ಸೂರ್ಯ ಅಂಗಳದಲ್ಲಿ ಬಂದು ನಿಂತುಕೊಂಡಂತೆ ಬೆಳಕು ಹಬ್ಬಿತ್ತು. ಇಷ್ಟು ದಿನ ತುಂಬಿಕೊಂಡಂತೆ ಕಾಣುವ ಮನೆಯ ಮಾಡು ಈ ಬೆಳಕಿನಲ್ಲಿ ಜೀರ್ಣವಾದಂತೆ, ಬಾಗಿ ನಿಂತಂತೆ, ಬಳುಕಿ ಬೀಳುವಂತೆ ಕಾಣತೊಡಗಿತು. ಕುಂಬಾರರು ಅಸ್ವಸ್ಥರಂತೆ ಒಳಗೆ ಹೊರಗೆ ಶತಪಥ ಹಾಕುತ್ತಿದ್ದರು. ಅವರಿಗೀಗ ಮರ ಇದ್ದ ಹಾಗೆ ಇಟ್ಟು ಮೊದಲಿದ್ದಂತೆ ನೆರಳಿನಲ್ಲಿ ಇದ್ದು ಬಿಡೋಣವೆಂದನಿಸುತಿತ್ತು. ಆ ತೆರೆದ ಆಕಾಶ. ಸುತ್ತ ಚೆಲ್ಲಿದ ಬೆಳಕು ನೋಡಿ ಕುಂಬಾರರೆಲ್ಲ ತಮ್ಮ ಆಸ್ತಿಯಾಗಿದ್ದ ನೆರಳು ಬಗ್ಗೆ ಹಳಹಳಿಸುತ್ತಿದ್ದರು.

ಮರದ ಮೊದಲ ಕೊಂಬೆ ನೆಲಕ್ಕೆ ಬೀಳುವುದರಲ್ಲಿತ್ತು. ಅಷ್ಟರಲ್ಲಿ ಧರ್ಮು ಅಲ್ಲಿ ಪ್ರತ್ಯಕ್ಷನಾದ. ಬಂದವನೇ "ಏಯ್ ತಾಂಡೇಲಾ... ನೀ ಮರಕ್ಕ ಕೈಹಚ್ಚೂ ಮುಂದ ಮರಕ್ಕೆ ಪೂಜಿ ಮಾಡೀಯೇನು?"

"ಹೌದು... ಮೊದಲು ಮರಕ್ಕೆ ಕೈಮುಗಿದೇ ಮರ ಏರಿದ್ದೇನೆ"

"ಹಾಂಗಿದ್ರೆ ಮರಕ್ಕೆ ಹಚ್ಚಿದ ಗಂಧ ಹೂವು ಎಲ್ಲಿ ಹೋತು?"

"ಹಾಗೆ ಪೂಜೆಗೀಜೆ ಮಾಡಿಲ್ಲ... ಕೈ ಮುಗಿದು ಮೇಲೆ ಏರಿದ್ದೇನೆ"

"ಅದೆಲ್ಲಾ ನಡಿಯಾಂಗಿಲ್ಲ ಈ ಜಗಾ ರೈತ ಮಂದೀದು. ಮರ ಸರಕಾರದ್ದು. ಈ ಜಗಾ ಕುಂಬಾರ ಮಂದೀಗ ಕುಂದರಾಕ್ ಕೊಟ್ಟ ಮಣೆ ಇದು. ಅದೆಲ್ಲ ಆಗಾಂಗಿಲ್ಲ. ನಾನು ಹೋಗಿ ರೈತ ಮಂದೀಗ ಹೇಳಿ ಬರತೀನಿ, ಸರಕಾರಕ್ಕೂ ಹೇಳತೀನಿ. ಇಲ್ಲಿಂದ ಏನೂ ಅಲಗಾಡಸಾಕ ಆಗಾಂಗಿಲ್ಲ."

"ಆದರ ನಿಮ್ಮ ಸೊಯರು ಭಗತನಿಗೆ ಇಪ್ಪತ್ನಾಲು ಸಾವಿರ ಕೊಟ್ಟಿದ್ದೇವಲ್ಲ"

"ನಾವ್ ಇಪ್ಪತ್ತೈದು ಸಾವಿರ ಕೇಳಿದ್ವಿ, ಅವರು ಇಪ್ಪತ್ನಾಲ್ಕು ಸಾವಿರ ತಂದಾರ. ನನಗ ಗೊತ್ತಾಗೇತಿ ಇದರಾಗ ಪುರುಶ್ಯಾ ಮತ್ತ ಯಶವಂತ ಕಮೀಷನ್ ಹೊಡದಾರಂತ."

"ಹಾಗೇನಿಲ್ರಿ" ಅಂಬಿಗ ನುಡಿದ.

"ಹಂಗದ್ರೇನು? ನಾನು ರೇಂಜರ್‌ನ ಕಡಿಗ ಹೋಕ್ಕೀನಿ" ಅಲ್ಲಿ ನಿಂತ ರಾಮಚಂದ್ರ ಮುಂದೆ ಬಂದ "ಹಡಶಿ ಮಗನ, ರೈತಮಂದಿ ಮತ್ತ ಸರಕಾರದ ಬೆದರಿಕೆ ಹಾಕ್ತಿಯೇನಲೇ? ಹಿಂದಿನ ನೂರು ವರ್ಷದಿಂದ ಕುಂಬಾರ ಮಂದಿ ಇಲ್ಲದಾರ. ರಿಕಾರ್ಡಿನಲ್ಲಿ, ನಕಾಶಾದಾಗ ನಮ್ಮ ಹೆಸರು ಬಂದೈತಿ. ಹೋಗ್... ಕರ್‍ಕೊಂಡ್ ಬಾ ನಾ ನೋಡತೀನಿ ಅವರೇನು ಮಾಡತಾರಂತ. ನಿನಗ ಸರಾಯಿ ಕುಡಿಯೂ ತಲಬ್ ಬಂದ್ರ ಅವನ ಹತ್ರ ಐದು ಹತ್ತು ರೂಪಾಯಿ ಇಸ್‌ಕೊ. ಹಿಂಗ ಘುಕ್ಕಟೆ ಧಮ್‌ಕಿ ಹಾಕಬ್ಯಾಡಾ."

ಅಲ್ಲಿದ್ದ ಹಿರಿಯ ಅಂಬಿಗ ಧರ್ಮುವನ್ನು ಬದಿಗೆ ಕರೆದುಕೊಂಡು ಹೋಗಿ ಮರೆಯಲ್ಲಿ ನಿಂತು ಹತ್ತರ ಎರಡು ನೋಟುಗಳನ್ನು ಅವನ ಕೈಯಲ್ಲಿಟ್ಟ, ಅವನು ಹೊರಟು ಹೋದ. ಹೋಗುವಾಗ "ಈ ನಿಮ್ಮ ದೋಣ್ಯಾಗ ನೋಡ್ರಿ ರಾಶಿ ರಾಶಿ ಮೀನ ಬೀಳ್ತಾವ. ಬಾಂಗಡೆ, ಈಸ್ವಣ, ಕರ್ಲಿ... ಕುಂಬಾರರ ನೆನಪ ಮಾಡ್ರಿ, ಮರ್‍ತ ಬಿಡಬ್ಯಾಡಿ. ಇಲ್ಲೂ ಕಳಿಸಿಕೊಡ್ರಿ, ಈ ಕುಂಬಾರ ಮಂದಿ ದೇವರನ್ನು ತಯಾರ್ ಮಾಡ್ತಾರ. ಆ ರೈತ ಮಂದಿ ಹಂಗ ಎತ್ತಿನ

ಕುತ್ತಿಗೆ ಮ್ಯಾಲ ಗಳೇವಿಟ್ಟು ಬೆನ್ನು ಸೀಳಿ ಹೋಗೂ ಹಂಗ ಬಡಿಯೂದಿಲ್ಲ ಎತ್ತುಗಳನ್ನ."

ಮಾರನೆಯ ದಿನ ಅಂಬಿಗರು ಗಿಡದ ಕಾಂಡ ಬೇರು ಸಹಿತ ಅಡ್ಡ ಹಾಕಿದರು. ನೂರಾರು ವರ್ಷಗಳಿಂದ ಭೂಮಿಯ ಮಣ್ಣಿನಲ್ಲಿದ್ದ ಸತ್ವಯುತ ನೀರನ್ನೆಳೆದುಕೊಂಡು ಎಲೆ, ಹೂವುಗಳಿಗೆ ರೂಪ ನೀಡುವ, ತನ್ನ ಹಣ್ಣುಗಳಿಂದ ಆ ಬಾಲ ವೃದ್ಧರಿಗೆ ಖುಷಿ ನೀಡುವ ಆ ದೇವ ಋಷಿ ಈಗ ಭುವಿಯ ಮೇಲೆ ಕತ್ತು ಕೊಯ್ದು ಉರುಳಿಸಿದಂತೆ ಸಾಷ್ಟಾಂಗ ಬಿದ್ದುಕೊಂಡಿದ್ದ. ಧರ್ತರಿಯ ತಳ ಹಿಡಿದು ಆಕಾಶದೆತ್ತರಕ್ಕೆ ವ್ಯಾಪಿಸಿ ನಿನ್ನೆ ನಿಂತುಕೊಂಡಿತ್ತು. ಇಂದು ಅದರ ಕತ್ತರಿಸಿದ ಕಳೇವರ ನೆಲಕ್ಕಂಟಕೊಂಡಿತ್ತು. ಅದರ ಬೇರಿನ ಕಡೆಯಿಂದ ಚಿಕ್ಕ ಚಿಕ್ಕ ಹನಿಗಳು ಉದುರುತ್ತಿದ್ದವು... ಯಾರ ಹೆಸರಿನಲ್ಲಿ ಅಳುತ್ತಿತ್ತೊ ಯಾರಿಗೆ ಶಾಪ ಹಾಕುತ್ತಿತ್ತೊ ಬಲ್ಲವರಾರು?

ಆ ದಿನ ಕುಂಬಾರರೆಲ್ಲ ತಮಗೆ ಬಂದ ಹಣವನ್ನು ಹಂಚಿಕೊಂಡರು. ಮನೆಗೆ ಮೂರು ಮೂರು ಸಾವಿರ ಸಿಕ್ಕಿತು. ಮನೆಯಲ್ಲಿ ಎರಡು ಮೂರು ಸಹೋದರರಿದ್ದರೆ ಅವರಿಗೂ ಹಂಚಿ ಹೋಯಿತು. ಆದರೆ ಯಾರ ಮುಖದಲ್ಲೂ ಗೆಲುವಿನ ಕಳೆಯಿರಲಿಲ್ಲ. ಧರ್ಮು ಮಾತ್ರ ಎಂಟು ದಿನ ಹಬ್ಬ ಮಾಡಿದ. ಹಣ ಅವನ ಹೆಂಡತಿಗೇ ಕೊಟ್ಟಿದ್ದರು. ಹೆಂಡಕ್ಕೆ ಹಣ ಕೊಡು ಎಂದು ಹೆಂಡತಿಗೆ ಬಯ್ಯುತ್ತಿದ್ದ. ಹೆಂಡತಿಯ ಕೈಯಲ್ಲಿ ಯಾಕೆ ಹಣ ಕೊಟ್ಟಿದ್ದೀರಿ ಎಂದು ಕೊಟ್ಟವರಿಗೆ ಬಾಯ್ತುಂಬ ಬಯ್ಗಳು ಹಾಕುತ್ತಿದ್ದ. ಅವನ ಸಹೋದರ ಮಾತ್ರ ಅತ್ತಿಗೆಯ ಪರವಾಗಿ ನಿಂತ. "ವೈನಿ, ನೀವು ಅವ್ನಿಗೆ ರೊಕ್ಕ ಕೊಡಬ್ಯಾಡ್ರಿ, ಕೇಳಿದ್ರೆ ಅದರಲ್ಲಿ ನನ್ನ ಪಾಲೂ ಐತಂತ ಹೇಳಿಬಿಡ್ರಿ" ಎಂದು ಹೇಳಿದ್ದ.

ಸೀತವ್ವನ ಮುಖದಲ್ಲಿ ನೆಮ್ಮದಿಯ ಕಳೆ ಮೂಡಿತ್ತು. ಸೊಸೆಗೆ ಒಂದು ಹೊಸ ಸೀರೆ ತರಬೇಕು. ಅವಳು ಉಡುವ ಸೀರೆ ನೋಡಿ ಸೀತವ್ವಳಿಗೆ ನಾಚಿಯೆನಿಸುತ್ತಿತ್ತು. ಮೊಮ್ಮಗನಿಗೂ ಒಂದು ಚಡ್ಡಿ, ಅಂಗಿ ಹೊಲಿಸಬೇಕು. ಹರಕು ಹಾಕಿಕೊಂಡು ಅವನು ಶಾಲೆಗೆ ಹೋಗುತ್ತಿರುವುದು ಅವಳಿಂದ ನೋಡುವುದಾಗುತ್ತಿರಲಿಲ್ಲ. ಮಳೆಗಾಲಕ್ಕೆ ಒಂದು ಚೀಲ ಅಕ್ಕಿ ತಂದಿಡಬೇಕು. ಇಂಥ ಲೆಕ್ಕಾಚಾರದಲ್ಲಿ ಅವಳು ಮುಳುಗಿದ್ದಳು.

* * *

**ರಾ**ತ್ರಿಯ ಹತ್ತು ಗಂಟೆ ಆಗುತ್ತಲಿತ್ತು. ರಾಘೋಬಾ ಹೊರಕೋಣೆಯಲ್ಲಿ ಕುಳಿತು ಅವನು ಮಡಕೆ ತಟ್ಟುತ್ತಿದ್ದ. ಮಡಕೆ ದೊಡ್ಡದಿತ್ತು. ಅತ್ತಿತ್ತ ಹೊರಳಿಸುತ್ತ ಅವನು ತಟ್ಟುತ್ತಿದ್ದ. ಮುಂದೆ ಇದ್ದ ಹೊಳೆಯುವ ದೀಪದ ಬೆಳಕಿನಲ್ಲಿ ಅವನು ಮಕರದಲ್ಲಿ ಕೂಡಿಸಿದ ದೇವರಂತೆ ಕಾಣುತ್ತಿದ್ದ. ಕೈಯಲ್ಲಿದ ಪೆಟನೆ, ಒಳಬದಿಯಲ್ಲಿ ಸರಿಯಾಗಿ ಹಿಡಿದ ಕಲ್ಲು ತೂಕ ತಪ್ಪದಂತೆ ಹಿಡಿದು ಅವನು ಮಡಕೆ ನಿಧಾನವಾಗಿ ತಟ್ಟುತ್ತಿದ್ದ. ಆಗಾಗ್ಗೆ ಮಣ್ಣಿಗೆ ಹೊಂದುವಂತೆ ಜಿಗುಟು ಮಣ್ಣು ಹಚ್ಚಿಕೊಳ್ಳುತ್ತಿದ್ದ. ಮಣ್ಣು ಒಣಗಿ ಒರಟಾದಂತೆ ಕಂಡರೆ ಪಕ್ಕದಲ್ಲಿ ಇಟ್ಟುಕೊಂಡ ಅನ್ನದ ನೀರಿನಲ್ಲಿ ಕೈ ಅದ್ದಿ ಹಸಿ ಮಾಡಿಕೊಳ್ಳುತ್ತಿದ್ದ. ಆಗ ಮಣ್ಣು ಪೆಟಣೆಯ ಹೊಡೆತಕ್ಕೆ ಹೊಂದಿಕೊಳ್ಳುತ್ತಿತ್ತು. ಅದೇ ಹೊತ್ತಿಗೆ ಗೋಪಾಳ ಒಳಗೆ ಬಂದ. ಅಲ್ಲಿದ್ದ ಒಂದು ಮಣೆ ತೆಗೆದುಕೊಂಡು ಕುಳಿತುಕೊಂಡ. ಅವನ ಕೈಗಳೂ ಮಣ್ಣಿನಿಂದ ಒದ್ದೆಯಾಗಿದ್ದವು. ಅವನೂ ಮಡಕೆ ಮಾಡುತ್ತಿರುವಾಗಲೇ ಮಧ್ಯೆ ಎದ್ದು ಬಂದಂತಿತ್ತು.

"ದತ್ತಾತ್ರಯನ ಕೈಯಲ್ಲಿ ಶಂಖ, ಚಕ್ರ, ಗದಾ, ಪದ್ಮಗಳಿರುವಂತೆ ಕುಂಬಾರರ ಕೈಯಾಗೂ ನಾಲ್ಕು ಅಸ್ತ್ರಗಳು ಅವ ಅಂತ ಗೊತ್ತೈತೇನೊ ರಾಘೋಬಾ. ತಿಗರಿಯನ್ನು ಸುದರ್ಶನ ಚಕ್ರದಂತೆ ತಿರುಗಿಸಿ ಕುಂಬಾರ ಮಣ್ಣಿನ ಮುದ್ದಿಗ ಆಕಾರ ಕೊಡತಾನ. ನಾವು ಮಣ್ಣು ಬಡಿದು ಹದ ಮಾಡೂ ಸುತ್ತಿಗೆ ಅನ್ನೂದ ಗದೆಯಿದ್ದಂಗ. ಕೈಯಾಗ ಪೆಟಣೆ ಹಿಡಿದು ನಾಜೂಕಿನಿಂದ ಹದವಾಗಿ ತಟ್ಟಿ ಮಡಕೆಗೆ ಆಕಾರ ಕೊಡತೀವಲ್ಲ ಅದೇ ಪದ್ಮ ಅಂದರ ಕಮಲ. ಮಡಕೆ ಮಾಡುವಾಗ ಒಳಗಡೆ ಬೋಳು ಕಲ್ಲು ಹಿಡಕೋತೀವಲ್ಲ ಅದ ಶಂಖ–ಇದ್ದಂಗ."

"ಹೌಂದಪ್ಪ ಗೋಪಾಳಣ್ಣ. ನೀ ಹೇಳೂದು ಖರೇ ಐತಿ ಜಗತ್ತಿನಾಗ ಇದ ಮೊದಲ ಧಂದಿ. ಬ್ರಹ್ಮದೇವನು ಪ್ರತಿಮೆಯನ್ನು ನಿರ್ಮಿಸುವಾಗ ಮೊದಲು ಕುಂಬಾರರನ್ನು ಗೌರವದಿಂದ ಕುಂಭ ಸ್ವಾಗತ ಮಾಡಿ ಕರದ್ನಂತೆ. ಮೊದಲು ಎಲ್ಲಾ ಗುಡಿಗೂ ಕುಂಬಾರರು ಮಾಡಿದ ಮಣ್ಣಿನ ಗೋಪುರಾನೇ ಇಡತಿದ್ರು, ಆಳೆತ್ತರ ಸುಂದರವಾದ ಕಳಶ ನಮ್ಮ ಹಿರ್‍ಯಾರು ಮಾಡತಿದ್ರು. ಕುಪ್ಪಜ್ಜ ನಮ್ಮ ಹಿರ್‍ಯಾರ ಎಷ್ಟು ಛಂದ ಕಥಿ ಹೇಳತಿದ್ದ. ಸತ್ತಾಗಷ್ಟೇ ಅಲ್ಲ ಎಲ್ಲಾ ಒಳ್ಳೆ ಕೆಲಸಕ್ಕೂ ಕುಂಬಾರರು ಮಾಡಿದ ಗಡಿಗೆಗಳನ್ನು ಲಗ್ನಕ್ಕ, ಅಷ್ಟ ಬಂಧನಕ್ಕ, ಮನೆ ಪ್ರವೇಶದ ಶಾಂತಿ ಮಾಡಾಕ ಎಲ್ಲಾದಕ್ಕೂ ನಮ್ಮ ಮಡಕೆಗಳು ಬೇಕಾಗತಿದ್ವು, ನಮ್ಮ ಹಿರ್‍ಯಾರು ಎಂತೆಂಥಾ ಮಡಕಿ ಮಾಡತಿದ್ರು, ದೊಡ್ಡ ಮಡಕಿ, ಸಣ್ಣ ಮಡಕಿ, ಹಂಡೆ, ಹಣತಿ, ಅಡ್ಡ ಹಂಡೆ, ಭಟ್ಟಿ ಹಂಡೆ, ಮರಗಿ, ಗುಮಟೆ, ಕೊಡ, ತಟ್ಟೆ, ಚರಿಗೆ ಹೂಜೆ ಬೋಗುಣಿ ಅಗಲ ಬಾಯಿಯ ಬ್ಯಾರಿ ಬ್ಯಾರಿ ಆಕಾರದ ಮಡಕೆ, ಹಿಂಗ ಎಲ್ಲಾ ಕೆಲಸಕ್ಕೂ ಮಣ್ಣಿನ ಮಡಕೆ ಬೇಕಾಗ್‌ತ್ತಿದ್ವು."

"ನನ ಮಗಳಿಗೆ ಕಣಸಗಿರಿಯಿಂದ ಒಂದ ನೆಂಟಸ್ತನ ಬಂದ್ಯೆತಿ. ಹರಿ ಮುಳವೇಕಾರ ಅಂತ ಅದಾನಲ್ಲ ಅವನ ಮಗಾ. ನಿನ್ನ ಮಾವನ ಮನಿ ಅಲ್ಲೇ ಐತಲ್ಲ? ಆ ಮಂದಿ ಹ್ಯಾಂಗ, ಹುಡುಗ ಹ್ಯಾಂಗದಾನ" ಅಂತ ತಿಳ್ಕೋಬೇಕಿತ್ತು.

"ನೀ ನನ್ನ ಮಾವನ ಮನಿ ಅಂತಿ. ಎಷ್ಟು ವರ್ಸಾಂತು ಕಣಸಗಿರಿಗೆ ಹೋಗಿ. ನಮ್ಮ ಹೆಣ್ಣ ಮಕ್ಕಳು ಓಡಾಡೂ ಊರು. ಗಂಡಸರಿಗೆ ಕುಂಡಿ ಕೆಳಗೆ ಹಾಕಿದ ಗೋಣಿ ಚೀಲ ಬಿಡಂಗಿಲ್ಲ. ಮಡಕಿ ಮೆತ್ತು, ಮಡಕೆ ಸುಡು, ಹೆಣ್ಣ ಮಕ್ಕಳ ತಲೀಮ್ಯಾಗ ಮಕರಿ ಇಟ್ಟ ಮ್ಯಾಗ ನಮಗ ಸ್ವಲ್ಪ ಸವಡು. ನನಗ ಅವರ ಗುರುತು ಇಲ್ಲ. ಅಪರೂಪೆಗೆ ಕೇಳಿ ನೋಡು. ಆಕಿಗ ಗೊತ್ತಿರತೈತಿ."

ಅಪರೂಪೆ ನಡುಮನೆಗೆ ಬಂದು ನಿಂತು ಕೊಂಡಿದ್ದಳು. ಅವಳು ಎಂಟು ವರ್ಷದ ನಂತರ ಬಸಿರಾಗಿದ್ದಳು. ಅವಳು ಹಾಲು ತುಪ್ಪದಲ್ಲಿ ಉಂಡು ಬಂದಂತೆ ದಪ್ಪಗಾಗಿದ್ದಳು. ಮೊದಲಿನ ಕಪ್ಪು ಕಾಡಿಗೆಯಂತಹ ಬಣ್ಣ ಕರಗಿ ಬೆಳ್ಳಗಾಗಿ ಲವಲವಿಕೆಯಿಂದ ಕೂಡಿದ್ದಳು... ಅವಳು ಮುಂದೆ ಬಂದಳು. ಅವಳನ್ನು ಕೇಳಿದಾಗ "ಅವನ ತಾಯಿ ಬಂಗಾರದಂಥ ಸ್ವಭಾವದಾಕಿ. ಕೇಳಿದ್ರೆ, ಇಲ್ಲಾ ಅಂದಾಕಿಯಲ್ಲ. ಮಧ್ಯರಾತ್ರ್ಯಾಗ ನೆಂಟರು ಗಿಂಟರು ಯಾರ ಬಂದ್ರೂ ಉಪವಾಸ ಹಾಕುವಾಕಿ ಅಲ್ಲ. ತಂದೆ ಹರಿದಾದ–ಸಾದಾ ಮನುಷ್ಯಾ. ಒಂದ್ ಮಾತ್ ಹಾಂಗ ಹಿಂಗ ಹೇಳಾವನಲ್ಲ. ತಾನಾತು ತನ್ನ ಕೆಲ್ಸಾ ಆತು"

"ಆದರ ಹುಡುಗಾ ಹ್ಯಾಂಗದಾನ?"

"ಅಂವಾ ಎರಡನೆ ಹೇಂತಿ ಮಗಾ ದಿನೂ ಇರಬೇಕ. ನನಗ ಹುಡುಗರ ಗುರುತು ಅಷ್ಟಿಲ್ಲ. ಆದ್ರೆ ಅವರ ಮಕ್ಕಳೆಲ್ಲ ಒಳೇವ್ರು ಹುಶಾರ್ ಹುಡುಗರು. ಕಾರವಾರ ಸಂತಿಗೆ ಅವನ ಎರಡು ಹೆಡಿಗೆ ಗಡಿಗೆ ಬಂದೇ ಬರತಾವ."

ಗೋಪಾಳನಿಗೆ ಕೊಂಚ ಆಶ್ಚರ್ಯವೆನಿಸಿತು. ಸ್ವಲ್ಪ ಖಾರವಾಗಿಯೇ ಮಾತಾಡುವ ಈ ಹೆಣ್ಣು ಮಗಳು ಇಂದು ಎಷ್ಟು ಮುದ್ದಾಗಿ ಮಾತಾಡುತ್ತಿದ್ದಳು. ಅವಳು ಮಾತಾಡಿದ್ದು ನೋಡಿ ದೃಷ್ಟಿ ತೆಗೆಯಬೇಕು ಅನಿಸಿತು.

ರಾಘೋಬಾ ನಡುವೆ ಬಾಯಿ ಹಾಕಿದ "ಕುಂಬಾರ ಒಳ್ಳೆಯವನೊ- ಕೆಟ್ಟವನೋ ಹ್ಯಾಂಗಿದ್ರೇನು. ಅವನ ಕೈಕಾಲು ಗಟ್ಟಿಯಿದ್ರಾತು. ಒಳ್ಳೆಯಂವಾ ಅಂದ್ರ ಅವನೇನು ಬಂಗಾರ ದುಡಿತಾನೇನು? ಕಡೀಗ ಕೈಯಾಗ ಪೆಟಣೆ ಮತ್ತು ಬೋಳು ಕಲ್ಲೇ ಅಲ್ಲವಾ?"

"ಹಾಂಗಲ್ಲಪ್ಪ... ಕುಂಬಾರ ಧಂದ್ಯಾಗ ಈಗ ಮಜಾ ಉಳಿದಿಲ್ಲಪ್ಪ ರಾಘೋಬಾ... ಒಂದೀಟ ಚಾಲಾಕಿತನ ಇದ್ರ ಏನಾರ ಮಾಡಿ ಹೊಟ್ಟಿ ತುಂಬ್ಕೋತಾನ."

ಅಪರೂಪೆ ಹೇಳಿದಳು. "ಹಂಗ ಅವರು ಹುಶಾರದಾರ. ಉಪಾಸ ಬೀಳು ಮಂದಿಯಲ್ಲ. ವ್ಯಾಳ್ಯಾ ಬಂದರೆ ಏನಾದರೂ ಮಾಡಿ ಹೊಟ್ಟೆ ಹಾರ್ಕೋತಾರ. ನೀ ಅದರ ಚಿಂತಿ ಬಿಡು" ಕೆಲವೇ ದಿನಗಳಲ್ಲಿ ಶಕುಂತಲೆಯ ಮದುವೆ ಕಣಸಗಿರಿಯ ಹುಡುಗನೊಂದಿಗೆ ನಿರ್ಧಾರವಾಯಿತು. ಒಂದು ದಿನ ನಾಲ್ಕೈದು ಕುಂಬಾರರು ಹೋಗಿ ತೆಂಗಿನ ಕಾಯಿ ಒಡೆದು ನಿಶ್ಚಿತಾರ್ಥದ ಶಾಸ್ತ್ರ ಮುಗಿಸಿ ಬಂದರು. ಕೊಡು-ಕೊಳ್ಳುವ, ಮಾನಸನ್ಮಾನದ ಯಾವ ವ್ಯವಹಾರವೂ ಇರಲಿಲ್ಲ. ಮದುಮಗಳ ತಂದೆ ಅಂಗಳದಲ್ಲಿ ಮಂಟಪ ಹಾಕಿ ಮದುವೆ ಮಾಡಿ ಕೊಡುವುದು. ದಿಬ್ಬಣಕ್ಕೆ ಊಟ ಹಾಕುವುದು. ಅಷ್ಟೆ.

ಆದರೂ ಗೋಪಾಳನು ಶ್ರೀಮಂತ ಪೂಜೆಗೆ ಕೊಡಲು ಮದುಮಗನಿಗೊಂದು ಪ್ಯಾಂಟ ವಸ್ತ್ರ ಮದುಮಗನ ತಾಯಿಗೆ ಕೊಡಲು ಒಂದು ಸೀರೆ ತಂದಿದ್ದ.

ಮಾವಿನಮರ ಮಾರಿದ ಮೂರು ಸಾವಿರ ರೂಪಾಯಿ ಬಂದಿತ್ತು. ಗೋಪಾಳನ ಮದುವೆಯಾದ ತಮ್ಮ ವಿಶ್ರಾಮ ಅವನೊಂದಿಗೆ ಅದೇ ಮನೆಯಲ್ಲಿ ಇರುತ್ತಿದ್ದ. ಅವನಿಗೆ "ಆ ಹಣ ಏನು ಮಾಡೋಣ" ಅಂತ ಕೇಳಿದಾಗ" ಮೊದಲು ನೀ ಲಗ್ನದ ಖರ್ಚು ನೋಡಿಕೊ. ಲಗ್ನಾನೇ ಸರಿಯಾಗಿ ಮಾಡು" ಎಂದ.

ಆದರೆ ಅಷ್ಟೇ ಹಣದಲ್ಲಿ ಮದುವೆ ಮಾಡುವುದು ಸಾಧ್ಯವಿರಲಿಲ್ಲ. ಸ್ವಲ್ಪ ಸಾಲ ಮಾಡುವುದು ಅನಿವಾರ್ಯವಾಗಿತ್ತು. ಒಂದೆಂದರೆ ಕುಂಬಾರರನ್ನು ಜನ ನಂಬುತ್ತಿದ್ದರು. ಮಾಜಾಳಿ ಪೇಟೆಯ ವೈಶ್ಯರು ಕುಂಬಾರರ ಯೋಗ್ಯತೆಯನ್ನು ನೋಡಿ ಸಾಲ ಕೊಡುತ್ತಿದ್ದರು. ಆದರೆ ಆ ಹಣ ಹಿಂತಿರುಗಿಸುವಾಗ ಮಾತ್ರ ಕುಂಬಾರರು ದಮ್ಮು ತೆಗೆಯಬೇಕಾಗುತಿತ್ತು. ಕುಂಬಾರರು ಯಾರ ಸಾಲವನ್ನೂ ಮುಳುಗಿಸುತ್ತಿರಲಿಲ್ಲ. ಕುಂಬಾರ ಹೆಣ್ಣು ಮಕ್ಕಳಂತೂ ಸಾಲ ತೀರಿಸುವುದರಲ್ಲಿ ಮೊದಲ ಸ್ಥಾನದಲ್ಲಿರುತ್ತಿದ್ದರು.

ಸೀತವ್ವನಂತೂ ಕಳೆದ ಎಂಟು ದಿನಗಳಿಂದ ಗೋಪಾಳನ ಮನೆಯಲ್ಲಿ ಮದುವೆಯ ಸಿದ್ಧತೆಯಲ್ಲಿ ತೊಡಗಿದ್ದಳು. ಮದುವೆಯ ಮುನ್ನ ಹುಡುಗಿಯ ಮನೆಯಲ್ಲಿ ಮಾಡುವ ವಿಧಿವಿಧಾನ, ಯಾವ ಶಾಸ್ತ್ರ ಯಾವಾಗ ಮಾಡಬೇಕು. ಅದಕ್ಕೆ ಬೇಕಾಗುವ ಸಾಮಾನು

ಸರಂಜಾಮು ಮುಂತಾದ ವಿಷಯ ಅವಳು ಹೇಳಿಕೊಡುತ್ತಿದ್ದಳು. ಊಟ-ಉಪಹಾರಕ್ಕೆ ಬೇಕಾಗುವ ಸಾಮಾನುಗಳ ಯಾದಿಯನ್ನೇ ಅವಳು ಗೋಪಾಳನಿಗೆ ಮುಂಚಿತವಾಗಿ ಕೊಟ್ಟಿದ್ದಳು. ತಂದ ಸಾಮಾನುಗಳನ್ನು ಜೋಪಾನವಾಗಿ ಇಡುತ್ತಿದ್ದಳು. ಬೇಕಾದಾಗ ಬೇಕಾದಷ್ಟೇ ಕೊಡುತ್ತಿದ್ದಳು. ಗೋಪಾಳನ ಹೆಂಡತಿ ಗುಲಾಬಿ ಏನಾದರೂ ತಪ್ಪು ಮಾಡಿದರೆ ಅವಳು ಬಿಸಿ ಮಾಡುತ್ತಿದ್ದಳು. ಸೀತವ್ವ ಅಂದರೆ ಹೀಗೇ. ಅದು ಮದುವೆ ಮನೆಯಾಗಿರಲಿ, ಸಾವಿನ ಮನೆಯಾಗಿರಲಿ, ಹೆರಿಗೆ ಮನೆಯಾಗಿರಲಿ ಸೀತವ್ವ ಅಲ್ಲಿಗೆ ಹೋಗಿ ಆ ಮನೆಯ ಉಸ್ತುವಾರಿಯನ್ನೆಲ್ಲ ತನ್ನ ಅಧೀನ ತೆಗೆದುಕೊಂಡು ತನ್ನ ಮನೆಯೆಂದೇ ಭಾವಿಸಿ ಆ ಮನೆಯವರಿಗೆ ಸಹಾಯ ಮಾಡುತ್ತಿದ್ದಳು. ಅವಳು ಹೊಕ್ಕ ಮನೆಯ ಅವಳದಾಗುತ್ತಿತ್ತು. ಹಿಂದಿನ ವೈರವೇನಾದರೂ ಇದ್ದರೂ ಅದನ್ನೆಲ್ಲ ಮರೆತು ಅವರೊಂದಿಗೆ ಬೆರೆತು ಟೊಂಕ ಕಟ್ಟಿ ಅವರ ಸಹಾಯಕ್ಕೆ ನಿಲ್ಲುತ್ತಿದ್ದಳು. ಒಂದು ವರ್ಷದ ಹಿಂದೆ ಗಂಡಸರು, ಮುತ್ತೈದೆಯರು ವಿಧವೆಯರು ಮಾಡುವ ಮಣ್ಣಿನ ಪಾತ್ರೆಗಳನ್ನು ಇತರರು ಮಾಡುತ್ತಾರೆಂದು ಇದೇ ಸೀತವ್ವ ರಾದ್ಧಾಂತವೆಬ್ಬಿಸಿದ್ದಳು. ಆದರೆ ಆ ಕಹಿಕ್ಷಣ ಅವಳು ಎದೆಯಲ್ಲಿಟ್ಟುಕೊಂಡಿರಲಿಲ್ಲ. ಈಗ ಅದರ ನೆನಪೂ ಆಕೆಗಿರಲಿಲ್ಲ.

ಮದುವೆಗೆ ನಾಲ್ಕು ದಿನ ಇದ್ದಾಗಲೇ ಅಂಗಳದಲ್ಲಿ ಕಂಬ ಹುಗಿದು ಮಂಟಪ ಹಾಕಿದ್ದರು. ಹೆಣ್ಣು ಮಕ್ಕಳೆಲ್ಲ ಮದುವೆಗೆ ಎರಡು ದಿನ ಇರುವಾಗ ಬಂದು ಐದ್ಯೆದು ಬೀಸುವ ಕಲ್ಲು ಹಾಕಿ ಹಿಟ್ಟು ಮಾಡಿಟ್ಟಿದ್ದರು. ಬೀಸುವಾಗ ಅವರೆಲ್ಲ ಒಂದಾಗಿ ಬೀಸುವ ಹಾಡು ಹಾಡುತ್ತಿದ್ದರು. ವಿಶ್ರಾಮನ ಹೆಂಡತಿ ಶ್ರೀಮಂತಿಯ ಗಂಟಲ ಮಧುರವಾಗಿತ್ತು. ಉಚ್ಚ ಸ್ವರದಲ್ಲಿ ಅವಳು ಸಲೀಸಾಗಿ ಹಾಡುತ್ತಿದ್ದಳು. ಅವಳು ಜನಪದ ಹಾಡುಗಳನ್ನು ತುಂಬ ಚೆನ್ನಾಗಿ ಹಾಡುತ್ತಿದ್ದಳು. ಅವಳ ದನಿಗೆ ಇತರರು ದನಿಗೂಡಿಸುತ್ತಿದ್ದಳು.

ಮದುವೆಯ ಮುಂಚಿನ ದಿನ ರೈತರ ಕೇರಿಗೆ ಹೋಗಿ ಮಂಟಪಕ್ಕೆ ಬೇಕಾಗುವ ವಸ್ತುಗಳನ್ನು ತಂದರು. ಹೂವು-ಹಣ್ಣು ಸಿಂಗಾರ, ಚಾಪೆ ಇತ್ಯಾದಿ ತಂದರು. ಮಂಟಪವನ್ನು ಮಾವಿನ ತಳಿರು ತೋರಣದಿಂದ ಶೃಂಗರಿಸಿದರು. ಅಲ್ಲಲ್ಲಿ ಹೂ ಮಾಲೆ ತೂಗುಬಿಟ್ಟರು. ಮಾವಿನ ಟೊಂಗೆಗಳ ಗುಚ್ಛ ಕಟ್ಟಿ ಅಲ್ಲಲ್ಲಿ ತೂಗು ಹಾಕಿದರು. ಜನರು ಕುಳಿತುಕೊಳ್ಳಲು ಚಾಪೆಗಳನ್ನು ಹಾಸಿದರು. ತೋರಣದ ಕಮಾನು ಮಾಡಿ ಅದಕ್ಕೆ ಅಲ್ಲಲ್ಲಿ ಹೂವು ಸಿಕ್ಕಿಸಿದರು. ಅದೀಗ ದೇವ ಮಂಟಪದಂತೆ ಕಾಣುತ್ತಿತ್ತು. ದೇವಾಲಯದ ಶೋಭೆ ಅದಕ್ಕೆ ಬಂದಿತ್ತು. ಅನಂತರ ಅವರು ಆವಿಗೆಯ ಬಳಿಯೇ ಅಡಿಗೆಗಾಗಿ ಚಿಕ್ಕ ಮಂಟಪವನ್ನು ಕಟ್ಟಿದರು. ಅಲ್ಲಿ ಎರಡು ಮಣ್ಣಿನ ಹಂಡೆಗಳನ್ನು ನೀರಿನಿಂದ ತುಂಬಿಟ್ಟರು. ರೈತರ ಕೇರಿಗೆ ಹೋಗಿ ಕೆಲವು ನೀರು ತುಂಬುವ ಹಿತ್ತಾಳೆ ಪಾತ್ರೆ, ಅಡಿಗೆಯ ಪಾತ್ರೆ, ಬಡಿಸುವ ಪಾತ್ರೆ, ತಟ್ಟೆ-ಬಟ್ಟಲು ತಂದಿಟ್ಟರು. ಅಡಿಗೆಗೆ, ಬಡಿಸುವ ಎಲ್ಲ ಸಾಮಗ್ರಿ ಶೇಖರಿಸಲಾಯಿತು.

ಮುಂಚಿನ ದಿನ ಮಧ್ಯಾಹ್ನ ಅರಿಷಿಣ ಮುಹೂರ್ತವಾಯಿತು. ಅರಿಷಿಣ ಶಾಸ್ತ್ರಕ್ಕೆ ಗೋಪಾಳ ಮತ್ತು ಗುಲಾಬಿ ತಮ್ಮ ಮಗಳೊಂದಿಗೆ ಕುಳಿತಿದ್ದರು. ಪುರೋಹಿತರು ದೊಡ್ಡ ದೊಡ್ಡಕೆ ಮಂತ್ರಗಳನ್ನು ಹೇಳುತ್ತ ಮಧ್ಯೆ ಮಧ್ಯೆ ಏನೇನೊ ಫರ್ಮಾನು ಹೊರಡಿಸು

ತ್ತಿದ್ದರು. ಒಂದು ಬಾರಿ ಗೋಪಾಳನ ಕೈಯಲ್ಲಿ ಪುರೋಹಿತರು ಒಂದು ಹೂವಿಟ್ಟು ತಪ್ಪಾಗಿ ಜನಿವಾರಕ್ಕೆ ಸಿಕ್ಕಿಸಿಕೋ ಎಂದರು.

ಪಕ್ಕದಲ್ಲಿ ಕೆಲವು ಗಂಡಸರು ಕೂತಿದ್ದರು. ಅವರಲ್ಲಿ ಒಬ್ಬ ಹೇಳಿದ "ನಮಗೆಲ್ಲಿದ್ರಿ ಜನಿವಾರ. ಕುಂಬಾರ ಮಂದೀಗೆ. ನಮ್ಮ ಮುಂಜಿ ನೀವ್ ಮಾಡೂದಿಲ್ಲಲ್ಲ."

"ಮುಂಜಿ ಮಾಡೋಕ್ಕೆ ಗೋತ್ರ ಇರಬೇಕಲ್ಲ? ನಿಮ್ಮ ಗೋತ್ರ ಯಾವುದು? ಗೋತ್ರ ಇಲ್ಲದ ದೇವರು ಶಂಕರ ಮಹಾದೇವನ ಮುಂಜಿಯನ್ನೂ ನಾವ್ ಮಾಡಲಿಲ್ಲ. ಅವನು ಅರಣ್ಯವಾಸಿ. ನೀವು ಮಾಡಿದ ಗಡಿಗೆ ಸ್ಮಶಾನದಲ್ಲಿ ಒಡೆಯುತ್ತಾರೆ. ರೈತ ಮಣ್ಣಿನಲ್ಲಿ ಕಾಳಿನಲ್ಲಿ ಚಿಗುರು ತೆಗೆಯುತ್ತಾನೆ. ನೀವು ಮಣ್ಣು ಸುಟ್ಟು ಪಾತ್ರೆ ಮಾಡ್ತೀರಿ."

ಗೋಪಾಳ ಮಧ್ಯೆ ಜಿಸಿಯಾಗಿ "ನೀವ್ ಈ ಶುಭ ಗಳಿಗ್ಯಾಗ ಮಾತಾಡೂದೇನು... ಕೆಟ್ಟ ಮಾತು"

ಬಳಿಕ ಹೆಣ್ಣು ಮಕ್ಕಳೆಲ್ಲ ಸೇರಿ ಮದುಮಗಳಿಗೆ ಅರಿಷಿಣ ಮೈಗೆಲ್ಲ ಪೂಸಿದರು. ಒಂದು ಬಡಿಗೆಗೆ ತಾಮ್ರದ ಸಟ್ಟುಗ ಕಟ್ಟಿದ್ದರು. ಐದು ಮುತ್ತೈದೆಯರು ಹಾಡು ಹೇಳುತ್ತ ಅರಿಷಿಣ ಕಲಿಸಿ ಇಟ್ಟ ಪಾತ್ರೆಯಲ್ಲಿ ಅದ್ದಿ ಮದುಮಗಳ ಮೈಗೆ ಪೂಸುತ್ತಿದ್ದರು.

ಅನಂತರ ಪುರೋಹಿತರು ಮದುಮಗಳು ಯಜಮಾನ ಮತ್ತು ಯಜಮಾನಿಯರನ್ನು ಕರೆದುಕೊಂಡು ಅಡಿಗೆ ಮಂಟಪಕ್ಕೆ ಕರೆದೊಯ್ದು ಅಲ್ಲಿ ಮೊದಲೆ ಹಾಕಿಟ್ಟ ಒಲೆಯ ಪೂಜೆ ಮಾಡಿದರು. ಅನಂತರ ಐವರು ಮುತ್ತೈದೆಯರು ಒಲೆಯ ಮೇಲಿಟ್ಟ ಪಾತ್ರೆಯಲ್ಲಿ ಐದು ಬಗೆಯ ಧಾನ್ಯಗಳನ್ನು ಹಾಕಿದಾಗ ಮದುಮಗಳು ಒಲೆ ಹೊತ್ತಿಸುವ ಶಾಸ್ತ್ರ ಮಾಡಿದಳು. ಇನ್ನೊಂದು ಒಲೆಯ ಮೇಲೆ ದೊಡ್ಡ ತವಾ ಇಟ್ಟು, ಒಲೆಗೆ ಬೆಂಕಿ ಹಾಕಿ– ತವೆಯ ಮೇಲೆ ಮೆಣಸಿನಕಾಯಿ, ಕೊತಂಬರಿ, ಅರಿಷಿಣ, ಮೆಣಸಿನಕಾಳು, ಮೆಂತೆಕಾಳು ಹುರಿದರು.

ವಾಡೆಯ ಗಂಡಸರು–ಹೆಂಗಸರು ಶಾಸ್ತ್ರದ ಸಂಭ್ರಮದಲ್ಲಿ ಅತ್ತ ಇತ್ತ ಓಡಾಡು ತ್ತಿದ್ದರು. ಮಕ್ಕಳು ಮಂಟಪದಲ್ಲಿ ಜಿಗಿಯುತ್ತಿದ್ದರು. ಕುಣಿಯುತ್ತಿದ್ದರು. ಹಿಗ್ಗಿನಿಂದ ಆಟ ಆಡುತ್ತಿದ್ದರು. ಎಲ್ಲರ ಮುಖದಲ್ಲಿ ಉಲ್ಲಾಸದ ಕಳೆಯಿತ್ತು. ಅದೊಂದು ಊರಿನ ತೀರ್ಥ ಕ್ಷೇತ್ರವಾಗಿ ಮರುದಿನ ಜಾತ್ರೆ ನೆರೆಯುವಂತಹ ವಾತಾವರಣ ನಿರ್ಮಾಣವಾಗಿತ್ತು. ಒಂದು ಕಡೆ ಹರ್ಷದ ಸಂಭ್ರಮ. ಒಂದು ಕಡೆ ಬಡತನದ ಬವಣೆ, ಅದರಲ್ಲಿ ಕುಂಬಾರರ ಕೊರಳಿಗೆ ಬಿದ್ದ ದೇವ ಸ್ವಪ್ನ. ಇಂಥ ಸಂಭ್ರಮದ ಸ್ವಪ್ನಗಳು ಆಗಾಗ್ಗೆ ಬೀಳುತ್ತಿದ್ದವು. ಅವರು ತಮ್ಮ ಬಡತನವನ್ನು ಲೆಕ್ಕಿಸದೆ ಇಂಥ ಸಂಭ್ರಮಗಳಲ್ಲಿ ಪಾಲ್ಗೊಳ್ಳುತ್ತ ಬಂದಿದ್ದರು. ಹಣದ ಬಲದಿಂದಲ್ಲ ಆದರೆ ಸಂಭ್ರಮದ ಬಲದಿಂದ.

ಹನ್ನೊಂದು ಘಂಟೆ ಐವತ್ತೆಂಟು ನಿಮಿಷಕ್ಕೆ ಮುಹೂರ್ತವಿತ್ತು. ಆದರೆ ಮದುಮಗನ ಕಡೆಯ ದಿಬ್ಬಣ ಬರಲು ತಡವಾಯಿತು. ಅವರು ತುಕ್ಕು ಹಿಡಿದಂತಹ ಒಂದು ಸಾಮಾನು ಸಾಗಿಸುವ ಟೆಂಪೋದಲ್ಲಿ ಬಂದರು. ರಸ್ತೆಯಲ್ಲಿ ವಾಹನ ನಿಲ್ಲಿಸಿ ಹೊಲದಲ್ಲಿ ನಡೆದು ವಾಡೆಗೆ ಬಂದು ತಲುಪುವುದರಲ್ಲಿ ಇನ್ನಷ್ಟು ವೇಳೆ ಹಿಡಿಯಿತು. ಅದರಲ್ಲಿರುವ ಒಂದು ಬಸಿರು ಹೆಣ್ಣು ಮಗಳು ದಾರಿಯಲ್ಲಿ ಮೂರ್ಛೆ ಬಂದು ಬಿದ್ದುದರಿಂದ ಇನ್ನಷ್ಟು ತಡವಾಯಿತು.

ಭಟ್ಟರು ಬಂದು ಮದುವೆ ನಡೆಯುವ ಸ್ಥಳದಲ್ಲಿ ಸ್ವಸ್ತಿಕ ಚಿಹ್ನೆ ಚಿತ್ರಿಸಿ ಎಲ್ಲ

ಸರಂಜಾಮುಗಳನ್ನು ಜೋಡಿಸಿ ಸುಮ್ಮನೆ ಕೂತಿದ್ದರು. ನೀವು ಮದುಮಗ, ಮತ್ತು ಮದು ಮಗಳನ್ನು ತಂದು ನಿಲ್ಲಿಸಿದರೆ ಸಾಕು ನಾನು ಮಂಗಲಾಷ್ಟಕ ಹೇಳಿ ಮದುವೆಯ ಶಾಸ್ತ್ರ ಮುಗಿಸಿ ಬಿಡುತ್ತೇನೆ ಎಂದು ಭಟ್ಟರು ಹೇಳಿದ್ದರು.

ಮಾವಿನ ಮರ ಕಡಿದಂದಿನಿಂದ ಕೇರಿಯಲ್ಲಿ ಬೆಳಕು ತುಂಬ ಬೀಳುತ್ತಿತ್ತು. ಜನ ಅಲ್ಲಲ್ಲಿ ಬಿಸಿಲಿನಲ್ಲಿ ನಿಂತುಕೊಂಡಿದ್ದಾರೆ. ಮೊದಲಿನಂತೆ ಕಿವಿಯಲ್ಲಿ ಪಿಸುಗುಟ್ಟುವುದು ಸಾಧ್ಯವಿಲ್ಲ ಎಂಬ ಕೊರಗು ಅವರನ್ನು ಕಾಡುತ್ತಿತ್ತು. ಮರ ಕಡಿದ ನಂತರ ಇಲ್ಲಿ ನಡೆಯುವ ಮೊದಲ ಲಗ್ನವಾಗಿತ್ತು. ಅಷ್ಟರಲ್ಲಿ ದಿಬ್ಬಣದ ವಾದ್ಯದವರ ಧ್ವನಿ ಕೇಳಿ ಬಂದು ಎಲ್ಲರಲ್ಲಿ ಒಂದು ಬಗೆಯ ಉತ್ಸಾಹ ಮನೆ ಮಾಡಿತು.

ದಿಬ್ಬಣ ಒಳಗೆ ಬರುವಾಗ ಕೈಗೆ ಗಡಿಯಾರ ಕಟ್ಟಿಕೊಂಡವನೊಬ್ಬ ಬಂದು ಅವಸರ ಮಾಡುತ್ತ 'ಹೊತ್ತಾಯ್ತು... ಭ್ಹಾಳ ಹೊತ್ತಾತು' ಎನ್ನುತ್ತಿದ್ದಂತೆ ಮತ್ತೊಬ್ಬ ಅವನಿಗೆ 'ನಿನ್ನ ಗಡಿಯಾರ ಮುಂದ ಓಡತೈತಿ ಅದಕ್ಕ ಒಂದೀಟು ನೀರ ಕುಡಿಸು" ಎಂದು ಸ್ವಲ್ಪ ಬಿಸಿ ಮಾಡಿದ.

ಮದುವೆಗೆ ಒಟ್ಟು ಸುಮಾರು ನೂರ ಇಪ್ಪತ್ತೈದು ಜನರಿದ್ದರು. ದಿಬ್ಬಣದಲ್ಲಿ ಬಂದ ಸುಮಾರು ನಲವತ್ತು, ವಾಡೆಯ ಮೇಲಿನ ಜನ ಐವತ್ತು ಮಿಕ್ಕವರು ಗೋಪಾಳನ ನೆಂಟರಿಷ್ಟರು. ರೈತರೂ ನಾಲ್ಕೈದು ಜನ ಬಂದಿದ್ದರು. ಅವರನ್ನು ಗೌರವದಿಂದ ಒಳಗೆ ಕರೆದೊಯ್ದು ಚಾಪೆಯ ಮೇಲೆ ಕೂಡಿಸಿ ಊಟ ಮಾಡಿಯೇ ಹೋಗಿ ಎಂದು ಕೈಮುಗಿದು ವಿನಂತಿಸಿದ ಗೋಪಾಳ.

ಭಟ್ಟರು ಮದುವೆ ಒಂದೂವರೆ ಗಂಟೆಯಲ್ಲಿ ಮುಗಿಸಿದರು. ಅವರಿಗೆ ಕುಂಬಾರರ ಬಡತನ ನೋಡಿಯೇ ಸುಸ್ತಾಗಿತ್ತು. ಬಂಗಾರದ ಒಡವೆ ತಾ ಎಂದರೆ ತಾಮ್ರದ ವಸ್ತು ತರುತ್ತಿದ್ದರು. ತುಪ್ಪ ತಾ ಎಂದರೆ ಕೊಬ್ಬರಿಯೆಣ್ಣೆ, ಎಳ್ಳೆಣ್ಣೆ ತರುತ್ತಿದ್ದರು. ದಕ್ಷಿಣೆ ಇಡು ಅಂದರೆ ನಾಲ್ಕಾಣೆ, ಎಂಟಾಟೆ ಇಟ್ಟು ಕೈ ಜೋಡಿಸಿ "ಇದೇ ದಕ್ಷಿಣೆ ಅಂತ ತಿಳ್ಕೋಬೇಕು" ಎಂದ ವಿನಯದಿಂದ ಕೈ ಜೋಡಿಸಿ ಹೇಳುತ್ತಿದ್ದರು.

ಮದುಮಗ ಮತ್ತು ಮದುಮಗಳು ನಿಜಕ್ಕೂ ಚಂದ ಕಾಣುತ್ತಿದ್ದರು. ಇಬ್ಬರೂ ಬೆಳ್ಳಗಿದ್ದ ಕೊಂಚ ಕುಬ್ಜರೇ, ಹದಿನಾರು ವರ್ಷದ ಹುಡುಗಿ ಇಪ್ಪತ್ತೆರಡು ವರ್ಷದ ಹುಡುಗ. ಮದುವೆಯ ಗಾಳಿ ಬೀಸುತ್ತಿದ್ದಂತೆ ಅವರ ಕೆನ್ನೆ ಕೆಂಪೇರಿ ಹುರುಪುಗೊಂಡಿತು. ಕುಂಬಾರರ ಮದುವೆಯಲ್ಲಿ ಮೊಟ್ಟ ಮೊದಲ ಬಾರಿಗೆ ಮದುಮಗಳು ದುಂಡಗೆ (ಗೋಲ) ಸೀರೆ ಉಟ್ಟಿದ್ದಳು. ತಿಳಿ ಗುಲಾಬಿ ಪತ್ತಲ ಮತ್ತು ದಟ್ಟ ಹಸಿರು ಬಣ್ಣದ ರವಿಕೆ. ಅದರಿಂದಾಗಿ ಉಡಿ ತುಂಬಿದ ಮಹಾಮಾಯಾ ದೇವಿಯೇ ಮದುವೆ ಮಂಟಪಕ್ಕೆ ಬಂದಿಳಿದಂತೆ ಕಾಣುತ್ತಿತ್ತು. ಈ ಬಗೆಯ ಶೋಭೆ ಪ್ರತಿಯೊಂದು ಮದುವೆಯಲ್ಲೂ ಕಾಣುತ್ತಿತ್ತು. ಆ ಸೊಬಗು ಕೆಲಕಾಲ ಇರುತ್ತಿತ್ತು. ಅನಂತರ ಕೆಲವೇ ದಿನಗಳಲ್ಲಿ ಆ ಸೊಬಗು ಬಾಡಿ ಹೋಗುತ್ತಿತ್ತು. ತಲೆಯ ಮೇಲೆ ಮಣ್ಣಿನ ಬುಟ್ಟಿ ಹೊತ್ತಾಗ, ಆ ಮಣ್ಣು ತಂದು ಬಡಿಯುವಾಗ ತಲೆಗೂದಲಲ್ಲಿ ಸೇರಿ ತಲೆಯೆಲ್ಲ ಧೂಳಿಮಯವಾಗುತಿತ್ತು. ಮೈಯೆಲ್ಲ ಕೆರೆತವಾಗುತಿತ್ತು. ಈ ಕ್ಷಣದಲ್ಲಿ ಅದೆಲ್ಲ ಕುಂಬಾರರಿಗೆ ಮರೆತು ಹೋಗಿದ್ದು ಒಳ್ಳೆಯದಾಯಿತು.

ಇಷ್ಟೆಲ್ಲ ಹೆಂಗಸರು ಮಂಟಪದಲ್ಲಿ ಸೇರಿದ್ದರೂ ಒಬ್ಬರ ಮೈಮೇಲೂ ಒಂದಿಷ್ಟು

ಬಂಗಾರದ ಒಡವೆಗಳಿರಲಿಲ್ಲ. ಮದುಮಗಳ ಕತ್ತಿನಲ್ಲಿಯೂ ಮಂಗಳಸೂತ್ರದಲ್ಲಿ ಎರಡು ಮಣಿ ಮತ್ತು ಒಂದು ಬಂಗಾರದ ಪದಕ ಮಾತ್ರ ಇತ್ತು. ಅದು ಮೂರು ಗ್ರಾಮಿಗಿಂತ ಹೆಚ್ಚು ತೂಗುತ್ತಿರಲಿಲ್ಲ. ಅದಷ್ಟೇ ಮಾಡುವುದರಲ್ಲಿ ಗೋಪಾಳನಿಗೆ ಸಾಕು ಬೇಕಾಗಿತ್ತು.

ಮದುವೆಯ ಊಟದಲ್ಲಿ ವಿಶೇಷವೇನೂ ಇರಲಿಲ್ಲ. ಬೀಸುಕಲ್ಲಿನಲ್ಲಿ ಹಿಟ್ಟು ಮಾಡಿ ಆ ಹಿಟ್ಟಿನಲ್ಲಿ ಬೆಲ್ಲ, ತೆಂಗಿನ ತುರಿ, ಶೇಂಗಾ ಬೀಜ ಹಾಕಿ ಮಾಡಿದ ಸಿಹಿ; ನೀರ ಹಲಸು, ನುಗ್ಗೆಕಾಯಿ, ಬಟಾಣಿ ಹಾಕಿ ಮಾಡಿದ ತಿಳಿ ಪಲ್ಲೆ; ಹಲಸಿನ ಕಾಯಿ ಹಾಕಿ ಮಾಡಿದ ಒಣಪಲ್ಲೆ; ಬೇಯಿಸಿದ ತೊಗರಿ ಬೇಳೆ ಬೀಸಿ ಅದರಲ್ಲಿ ಹುಣಸೆಹಣ್ಣು, ಹಸಿ ಮೆಣಸಿನ ಕಾಯಿ ಹಾಕಿ, ಇಂಗು ಬೆಳ್ಳೊಳ್ಳಿ ಹಾಕಿ ಮಾಡಿದ ಸಾಂಬಾರು.

ಬೆಳಗ್ಗಿನಿಂದ ಹೊರಗಿನ–ಒಳಗಿನ ಕೆಲಸ ಮಾಡಲು ಜನರಲ್ಲಿ ಪೈಪೋಟಿ ನಡೆದಂತಿತ್ತು. ಗಂಡಸರು ತೆಂಗಿನ ಕಾಯಿ ಒಡೆದು ಕೊಡುತ್ತಿದ್ದರು. ಹೆಣ್ಣು ಮಕ್ಕಳು ಕಾಯಿ ಹೆರೆಯುತ್ತಿದ್ದರು. ಹೆಂಗಸರು ಅಡಿಗೆ ಮಾಡುತ್ತಿದ್ದರು. ಗಂಡಸರು ಒಲೆಯ ಮೇಲಿನ ದೊಡ್ಡ ದೊಡ್ಡ ಪಾತ್ರೆ ಇಳಿಸಲು, ಅನ್ನ ಬಗ್ಗಿಸಲು ಸಹಾಯ ಮಾಡುತ್ತಿದ್ದರು. ಹೆಂಗಸರು ಮಂಟಪದಲ್ಲಿ ನೀರು ಸಿಂಪಡಿಸಿ ಊಟಕ್ಕೆ ಅಣಿ ಮಾಡುತ್ತಿದ್ದರೆ ಗಂಡಸರು ಬಡಿಸುವ ಕಾರ್ಯದಲ್ಲಿ ನೆರವಾಗುತ್ತಿದ್ದರು.

ಶೀಲಾ ಮತ್ತು ಸಖಾರಾಮ ಗೋವೆಯಿಂದ ಮದುವೆಗಾಗಿಯೇ ಬಂದಿದ್ದರು. ಶೀಲಾ ನಾಟಕದಲ್ಲಿ ತುಂಬ ಚೆನ್ನಾಗಿ ಅಭಿನಯಿಸುತ್ತಿದ್ದಾಗ, ಸಖಾರಾಮನೊಂದಿಗೆ ಪ್ರೇಮ ವಿವಾಹವಾಗಿ ಗೋವೆಗೆ ಹೋಗಿ ನೆಲೆ ನಿಂತರೂ ಕುಂಬಾರರ ಸಾದಾ ಹೆಣ್ಣು ಮಕ್ಕಳಂತೆ ಎಲ್ಲರ ಜೊತೆಗೆ ನಗು ನಗುತ್ತ ಕೆಲಸ ಮಾಡುತ್ತಿರುವುದನ್ನು ನೋಡಿ ಅನೇಕರಿಗೆ ಆಶ್ಚರ್ಯವಾಗುತಿತ್ತು. ಅವಳು ಬಡಿಸುತ್ತಿದ್ದಳು, ಕಸಗುಡಿಸುತ್ತಿದ್ದಳು, ಊಟದ ಎಲೆ ಬಳಿಯುತ್ತಿದ್ದಳು. ಅದನ್ನೆಲ್ಲ ನೋಡಿ ಖುಷಿಗೊಂಡ ಹೆಣ್ಣು ಮಕ್ಕಳು ಅವಳನ್ನು ಅಪ್ಪಿ ನೆಟಿಗೆ ಮುರಿಯುತ್ತಿದ್ದರು. ಸುಮಾರು ಒಂದು ವರ್ಷವಾಗಿತ್ತು. ಅವಳು ಗೋವೆಗೆ ಹೋಗಿ ಸಾಂಖವಾಳೆಯ ಒಂದು ಕಂಪನಿಯಲ್ಲಿ ಪ್ಯಾಕಿಂಗ್ ಗರ್ಲ್ ಅಂತ ಕೆಲಸಕ್ಕೆ ಸೇರಿ ಕೊಂಡಿದ್ದಳು. ಅವಳು ಆರೇ ತಿಂಗಳಲ್ಲಿ ಪ್ಯಾಕಿಂಗ್ ಸುಪರ್‌ವೈಜರ್ ಹುದ್ದೆಗೇರಿದ್ದಳು. ಸಖಾರಾಮ ಒಂದು ಗ್ಯಾರೇಜಿನಲ್ಲಿ ಮೋಟರು ದುರುಸ್ತಿ ಮಾಡುವ ಕೆಲಸ ಕಲಿಯುತ್ತಿದ್ದ.

ಮದುಮಗಳನ್ನು ಟೆಂಪೋ ವಾಹನದ ಹತ್ತಿರ ಒಯ್ದು ಬಿಟ್ಟುಕೊಡಲು ವಾಡೆಯ ಜನರೆಲ್ಲ ಒಂದಾಗಿ ಬಂದಿದ್ದರು. ಎಲ್ಲರೂ ಹೊಲದಲ್ಲಿ ನಡೆದು, ಹಳ್ಳ ದಾಟಿ ರಸ್ತೆಯತ್ತ ಸಾಗಿದ್ದರು. ಮದುಮಗಳು ಅಳುತ್ತ ಮುಂದೆ ನಡೆದಿದ್ದಳು. ಅವಳ ಹಿಂದೆ ನಡೆಯುವವರ ಕಣ್ಣಾಲಿಗಳಿಂದ ನೀರು ಹನಿಯುತಿತ್ತು. ನಕ್ಷತ್ರದಂತಹ ಹುಡುಗಿ, ನಕ್ಕರೆ ಝುಲ್ಲೆಂದು ಬೆಳಕು ಪಸರಿಸಿದಂತೆ, ಊರು ತೆರವು ಮಾಡಿ ಹೋಗುತ್ತಿರುವಂತೆ ಭಾಸವಾಗುತಿತ್ತು.

ವಾಡೆಯಲ್ಲಿ ಸೀತವ್ವ ಒಬ್ಬಳೇ ಇದ್ದಳು. ಗೋಪಾಳನ ಮನೆಯ ಬಾಗಿಲಲ್ಲಿ ಕುಳಿತಿದ್ದಳ್. ಅವಳ ಸೊಸೆ 'ಹೊಳೆ ಮಟ ಮುಟ್ಟಿಸಿ ಬರ್ತೇನಿ' ಎಂದು ಹೇಳಿ ಹೋಗಿದ್ದಳು. ವಾಡೆಯ ಜನರೆಲ್ಲ ಮದುಮಗಳನ್ನು ಮುಟ್ಟಿಸಲು ಹೋಗಿದ್ದರಿಂದ ವಾಡೆ ಬಿಕೋ ಎನಿಸುತ್ತಿತ್ತು. ಸೀತವ್ವ ಕೊಂಚ ಅಂಜಿಕೆಯಿಂದ ಕೂತಿದ್ದಳು. ಕುಂಬಾರರ ಧಂದೆ

ಇಳಿಮುಖವಾಗಿತ್ತು. ಯುವಕರು ಊರು ಬಿಟ್ಟು ಹೋಗುವ ಮಾತು ಆಡುತ್ತಿದ್ದರು. ಕೆರೆಗೆ ಒಡ್ಡು ಹಾಕಿದರಂತೂ ಎಲ್ಲರೂ ಚೆಲ್ಲಾಪಿಲ್ಲಿಯಾಗಿ ಹೋಗುತ್ತಾರೆ.

* * *

ಹಸಿವಿನ ಒದ್ದಾಟದಲ್ಲಿ ಇನ್ನೊಂದು ಮಳೆಗಾಲ ಕುಂಬಾರರ ತಲೆಯ ಮೇಲಿಂದ ಹಾಯ್ದು ಹೋಗಿತ್ತು. ಆದರೂ ಅವರು ಹೇಗೆ ಹೇಗೊ ಬದುಕಿದ್ದರು. ಈ ದಿನಗಳಲ್ಲಿ ರೈತರಲ್ಲಿ ಉಳುವ, ಬಿತ್ತುವ ಕೆಲಸಕ್ಕೆ ಹೋಗಲಾರಂಭಿಸಿದ್ದರು. ಪುರುಶ್ಯಾನಿಗೆ ಮಾತ್ರ ಮಾಳಮಡ್ಡೆಯ ಭೂತಾಚರಣೆಯ ಕೆಲಸ ಮಹತ್ವದ್ದಾಗಿತ್ತು. ಅವನು ಆ ಕೆಲಸದಲ್ಲಿ ಮಗ್ನನಾಗಿದ್ದ.

ಮುಡಗೇರಿ ಊರಿನ ಮಾಳಮಡ್ಡೆ ಹೊಲದಲ್ಲಿ ಒಕ್ಕುವ ಕೆಲಸಕ್ಕಾರಂಭಿಸುವ ಮೊದಲು ಆ ಪರಿಸರದಲ್ಲಿದ್ದ ದೆವ್ವ ಭೂತಗಳಿಗೆಲ್ಲ ಪೂಜೆ-ಪುರಸ್ಕಾರ ನಡೆಯುತಿತ್ತು. ಈ ಪುರಸ್ಕಾರದ ಶಾಸ್ತ್ರ ನೆರವೇರದ ಹೊರತು ಒಕ್ಕುವ ಕೆಲಸಕ್ಕೆ ಕೈಹಾಕುವಂತಿರಲಿಲ್ಲ. ಒಂದು ಹಿಡಿ ಬತ್ತವನ್ನು ಮನೆಗೊಯ್ಯುವಂತಿರಲಿಲ್ಲ. ಬತ್ತದ ತೆನೆ ಕಟ್ಟುವಾಗ ಚಾಪೆಯ ಮಲೆ ಉದುರಿದ ಬತ್ತವನ್ನೂ ಒಂದು ರಾಶಿ ಮಾಡಿ ಇಡುತ್ತಿದ್ದರು. ಸುತ್ತಲ ಪರಿಸರದಲ್ಲಿ ಇಲ್ಲಿ ಮಾತ್ರ ದೆವ್ವ ಭೂತಗಳಿಗೆ ಪ್ರಥಮ ಪೂಜೆ ನಡೆಯುತಿತ್ತು. ಬೇರೆ ಕಡೆಗೆ ಇಂಥ ಪೂಜೆ ಪುರಸ್ಕಾರಗಳು ನಡೆದರೂ ಅದರ ನಿಶ್ಚಿತ ದಿನವೆಂಬುದು ಇರಲಿಲ್ಲ. ರೈತರು ತಮ್ಮ ಅನುಕೂಲಕ್ಕೆ ತಕ್ಕಂತೆ ವರ್ಷದ ಪೂಜೆ ಮಾಡುತ್ತಿದ್ದರು. ಆದರೆ ಮಾಳಮಡ್ಡೆಯಲ್ಲಿ ಮಾತ್ರ ವರ್ಷದ ನಿಶ್ಚಿತ ದಿನದಂದೇ ಪೂಜೆ ನಡೆಯಬೇಕಾಗಿತ್ತು. ತುಲಸಿ ಪೂಜೆಯ ಮರುದಿನ ಈ ಪೂಜೆ ನಡೆಯುತಿತ್ತು. ಊರಿನ ಮುಖ್ಯಸ್ಥ ಈ ಪೂಜೆಯ ಯಾಜಮಾನ್ಯ ವಹಿಸುತಿದ್ದ.

ಈ ಹೊಲ ಬೆಟ್ಟದಂಚಿನಲ್ಲಿ ಬೆಟ್ಟದಲ್ಲಿ ಸೇರಿಕೊಂಡಂತಿತ್ತು. ಊರ ಜನರು ಬೆಟ್ಟದಿಂದ ಕಟ್ಟಿಗೆ ತರಲು, ದನಕರುಗಳನ್ನು ಮೇಯಿಸಲು ಮಾಳಮಡ್ಡೆಯ ಪಕ್ಕದ ಬಾಂದಿನ ಮೇಲಿನಿಂದ ಹೋಗಬೇಕಾಗುತಿತ್ತು. ಈ ಹೊಲದಲ್ಲಿ ಕೊಯ್ಲಿನ ದಿನಗಳಲ್ಲಿ ಕಾಡು ಹಂದಿ, ಕಾಡು ಕೋಣಗಳ ಹಾವಳಿ ವಿಪರೀತವೆಂದು ಹೊಲದಲ್ಲಿ ಎತ್ತರದ ಮಾಡುಕಟ್ಟಿ ಹೊಲ ಕಾಯಲು ಬರುತ್ತಿದ್ದರು. ಸುಮಾರು ಹದಿನೈದು ಇಪ್ಪತ್ತು ರೈತರ ಹೊಲಗಳು ಇಲ್ಲಿದ್ದವು. ಅಲ್ಲಲ್ಲಿ ಮಾಡಿನ ಮನೆಗಳಿರುತ್ತಿದ್ದುವು. ಇಲ್ಲಿ ನಡೆಯುವ ಪೂಜೆ ಪುರಸ್ಕಾರಗಳು ಕೇವಲ ಅಲ್ಲಿ ಬೆಳೆಯುವ ಫಸಲಿಗಷ್ಟೇ ಸೀಮಿತವಾಗಿರಲಿಲ್ಲ. ಅಲ್ಲಿನ ದನಕರುಗಳ, ಹೋಗಿ ಬರುವ ಜನರಿಗೆ ಒಳ್ಳೆಯದಾಗಲಿ ಎಂಬ ಭಾವನೆಯಿಂದಲೇ ನಡೆಯುತಿತ್ತು.

ಈ ಭೂತಾವಳಿಯ ಗೊಂಬೆ ರೈತರು ಕುಂಬಾರರಿಂದಲೇ ಮಾಡಿಸಿಕೊಳ್ಳುತ್ತಿದ್ದರು. ಈ ಕೆಲಸ ವಂಶಪರಂಪರೆಯಿಂದ ಪುರುಶಾನೆ ಮಾಡಬೇಕಿತ್ತು. ಮೊದಲು ಯಾರೇ ಬಂದು ಹೇಳಿದರೂ ಮಾಡುತ್ತಿರಲಿಲ್ಲ. ಆದರೂ ತುಲಸೀ ಹಬ್ಬದ ಮರುದಿನ ಭೂತಾವಳಿ ತೆಗೆದುಕೊಂಡು ಮಾಳಮಡ್ಡೆಗೆ ಹೋಗಲೇಬೇಕಾಗಿತ್ತು. ಕುಂಬಾರರು ಸಮಯಕ್ಕೆ ಸರಿಯಾಗಿ ಮೂರ್ತಿಗೆ ಆಕಾರ ನೀಡುವ ಕಾರ್ಯ ಮಾಡಿಕೊಡುತ್ತಿದ್ದರು. ಊರ ಮುಖ್ಯಸ್ಥ ಬಂದು ಎಡತಾಕುವಂತೆ ಎಂದೂ ಮಾಡಲಿಲ್ಲ.

ಭೂತಾವಳಿಗೆ ಚರವು ಬೇಯಿಸಲು ಏಳು ಮಡಕೆಗಳು, ರೊಟ್ಟಿ ಸುಡಲು ಒಂದು ಕಾವಲಿ, ಅದಲ್ಲದೆ ಎಷ್ಟೋ ಬಗೆಯ ಮುಖವಾಡಗಳು- ಕುದುರೆ, ರಾವತ್, ಬರಮೊ,

ಝಟಕೊ, ಘಾಟಿಂಗಿರೊ, ವಾಟಮಾರೊ, ಪಾಯಕ, ನಾಸ, ವಾಘ, ಮಾನಗೆ, ಜಿವಾಣಿ, ಪಲ್ಲಕ್ಕಿ, ಬೋಯ್, ಕಲಾವಂತ, ಢೊಲಕೆ ಇವೆಲ್ಲವುಗಳ ಮಣ್ಣಿನ ಮುಖವಾಡಗಳು ತಯಾರಾಗಬೇಕಿತ್ತು. ಅವುಗಳೆಲ್ಲವನ್ನು ಆವಿಗೆಯಲ್ಲಿ ಹಾಕಿ ಸುಡಲು ಒಂದು ಪ್ರತ್ಯೇಕ ಭಟ್ಟಿಯೇ ಬೇಕಾಗುತ್ತಿತ್ತು.

ಪೂಜೆಯ ದಿನ ಇವೆಲ್ಲವನ್ನು ಒಂದು ಬುಟ್ಟಿಯಲ್ಲಿ ತುಂಬಿಕೊಂಡು ಪುರುಶ್ಯಾ ಸುಮಾರು ಒಂದು ಗಂಟೆ ನಡೆದು ಸಮಯಕ್ಕೆ ಸರಿಯಾಗಿ ಪೂಜಾ ಸ್ಥಳಕ್ಕೊಯ್ದು ಮುಟ್ಟಿಸುತ್ತಿದ್ದ. ಒಕ್ಕಲು ಆರಂಭವಾದ ಬಳಿಕ ಒಂದು ಖಾಲಿ ಗೋಣಿಚೀಲ ತೆಗೆದುಕೊಂಡು ಒಕ್ಕುವ ಸ್ಥಳಕ್ಕೆ ಪುರುಶ್ಯಾ ಹೋಗುತ್ತಿದ್ದ. ಪ್ರತಿಯೊಬ್ಬ ರೈತ ತನಗೆ ಸರಿಕಂಡಷ್ಟು ಬತ್ತ ಚೀಲದಲ್ಲಿ ಹಾಕುತ್ತಿದ್ದ. ಒಂದೂವರೆ ಖಂಡಗದಷ್ಟು ಬತ್ತ ಅವನು ಪ್ರತಿವರ್ಷ ತರುತ್ತಿದ್ದ.

ಈ ಬಾರಿಯೂ ಆತ ಬುಟ್ಟಿಯಲ್ಲಿ ತುಂಬಿಕೊಂಡು ಮುಖವಾಡಗಳನ್ನು ಹೊತ್ತು ತಂದಿದ್ದ. ಆದರೆ ಹೊಲಕ್ಕೆ ಬಂದು ನೋಡಿದರೆ ಅವನಿಗೆ ಆಶ್ಚರ್ಯ ಕಾದಿತ್ತು. ನಲವತ್ತು ಐವತ್ತು ಎಕರೆಯ ಆ ಮಾಳಮಡ್ಡೆ ಪರಿಸರ ಬಂಜರು ಬಿದ್ದಿತ್ತು. ಭತ್ತವಿಲ್ಲ, ಬೆಳೆಯಿಲ್ಲ, ಒಕ್ಕುವ ಸ್ಥಳವಿಲ್ಲ, ಎಲ್ಲಾ ಬಯಲು–ಬಯಲು. ಅವನು ಸ್ವಲ್ಪ ಹೊತ್ತು ಹಾಗೆಯೇ ನಿಂತ. ತಲೆಯ ಮೇಲೆ ಭಾರವಾಗಿದ್ದ ಬುಟ್ಟಿ ಒಂದು ಕಡೆ ಇಳಿಸಿದ. ತಾನು ತಲೆಯ ಮೇಲೆ ಬುಟ್ಟಿ ತರುವಾಗ ಇಲ್ಲಿ ಎಷ್ಟೊಂದು ಜನ ಸೇರುತ್ತಿದ್ದರು. ಜನರ ಗದ್ದಲವಿರುತಿತ್ತು. ಎಲ್ಲ ರೈತರು ಅಂದು ಇಲ್ಲಿ ಜಮಾಯಿಸುತ್ತಿದ್ದರು. ಆದರೆ ಇಂದು ಅಲ್ಲಿ ಒಂದು ನರಹುಳವೂ ಇರಲಿಲ್ಲ. ಅಲ್ಲಿ ಕಾವಲು ಮಾಡುಗಳು ಕಳೆದ ವರ್ಷ ಹೊದಿಕೆ ಮಾಡದ್ದರಿಂದ ನೆಲ ಕಚ್ಚಿದ್ದವು. ಅಲ್ಲಿಯ ಬಿರುಕು ಬಿಟ್ಟ ಭೂಮಿ, ಬೆಂಕಿಯಂತಹ ಗಾಳಿ, ನಿರ್ಮಾನುಷ ಸ್ಥಳ ನೋಡಿ ಪುರುಶ್ಯಾನ ಮೃದು ಮನಸ್ಸು ಘಾಸಿಗೊಂಡಿತು. ಅವನಿಂದ ಸಹಿಸುವುದಾಗಲಿಲ್ಲ.

ಅದೇ ಹೊತ್ತಿಗೆ ಯಾರೋ ಒಬ್ಬ ಕಾಡಿನ ದಿಶೆಯಿಂದ ಕಟ್ಟಿಗೆಯ ಹೊರೆ ತಲೆಯ ಮೇಲಿಟ್ಟುಕೊಂಡು ಬರುತ್ತಿರುವುದು ಕಾಣಿಸಿತು. ಅವನು ಸಮೀಪಿಸಿದ ನಂತರ ಅವನನ್ನು ಗುರುತಿಸಿ ಪುರುಶ್ಯಾ "ಗಿರಿಧರ ಮಾಮ್, ಹೊಲಗಳೆಲ್ಲ ಬಂಜರು ಬಿದ್ದಾವ್ಯಾಕ? ಈ ಸಲ ಪೂಜಿ ಮಾಡೂದಿಲ್ಲೇನು?" ಎಂದು ಕೇಳಿದ.

"ಏನಪ್ಪ ಪುರುಶ್ಯಾ ನೀ ಮುಖವಾಡಗಳನ್ನು ತಂದೀಯೇನು? ನಿನಗ ನಮ್ಮ ಮಿರಾಶಿ ಹೇಳಿಲ್ಲೇನು? ಎಂಥಾ ಮನುಷ್ಯಾನಪ್ಪ ಅಂವಾ. ಕೈಯಾಗ ರೊಕ್ಕ ಬಿದ್ದ ಮ್ಯಾಗ ಎಲ್ಲಾ ಮರ್ತ ಬಿಟ್ಟಾನಂತ ಕಾಣ್ತದ."

"ಏನಾತ್ರಿ?"

"ಇನ್ಮುಂದೆ ಪೂಜಿ ಮಾಡೂದು ಸಾವಕಾರನ ಕೆಲ್ಸ" ಅವನು ಕಟ್ಟಿಗೆಯ ಹೊರೆ ಲಂಬವಾಗಿ ಆನಿಸುತ್ತ ಹೇಳಿದ. "ನಿನಗೆ ಗೊತ್ತಿಲ್ಲವೆ ಈ ಪೂರಾ ಜಮೀನು ಬೆಂಗಳೂರಿನ ಒಬ್ಬ ಸಾವಕಾರ ಖರೀದಿ ಮಾಡ್ಯಾನಂತ. ಯಾವದೋ ಫ್ಯಾಕ್ಟರಿ ಹಾಕ್ತಾನಂತ ಅಂವಾ. ರೇಲ್ವೆ ಹಳಿಗೂ ಹತ್ತಿರ ಐತಂತ. ಇನ್ನ ಒಂದೆರಡು ತಿಂಗಳಾಗ ಕೆಲಸ ಸುರು ಮಾಡ್ತಾರಂತ."

"ಹೌಂದರಿ. ಇಲ್ಲಿ ಎಲ್ಲೋ ಫ್ಯಾಕ್ಟರಿ ಆಗ್ತದಂತ ಕೇಳಿದ್ದೇನ್ರಿ, ಇಲ್ಲೇ ಆಗ್ತದಂತ ಗೊತ್ತಿರಲಿಲ್ರಿ, ಈಗ ನಾ ಏನ್ ಮಾಡ್ಲಿ... ಇವನ್ನೆಲ್ಲ ತಲೀಗ ಒಡಕೊಳ್ಳಿ?"

"ಅವರು ನಿನಗ ಮೊದಲ ಹೇಳಬೇಕಾಗಿತ್ತು. ಕೈಗೆ ರೊಕ್ಕ ಸಿಕ್ಕ ಮ್ಯಾಲ ಅವರಿಗೆಲ್ಲಾ ಮರ್ತು ಹೋತು. ಕೈತುಂಬ ರೊಕ್ಕ ಮತ್ತ ಮನೆಗೊಬ್ಬಾಂವಗ ನೌಕರಿ."

"ನಿಮ್ಮ ಜಮೀನೂ ಇತ್ತಲ್ಲ ಗಿರಿಧರ ಮಾಮ್"

"ನನ್ನ ಜಮೀನು ಸ್ವಲ್ಪ ಇತ್ತು. ನಮಗ ಈಗ ನೌಕರಿ ಯಾರಿಗ್ ಬೇಕು? ನನ್ನ ಒಬ್ಬ ಮಗ ಪೊಲೀಸ್ ಖಾತ್ಯಾಗ, ಇನ್ನೊಬ್ಬಾಂವಾ ಮಿಲಿಟರ್ಯಾಗದಾನ. ಅವರು ಸರ್ಕಾರಿ ಹ್ವಾರೆ ಬಿಟ್ಟು ಇಲ್ಲ್ಯಾಕ ಬರ್ತಾರ ಫ್ಯಾಕ್ಟರ್ಯಾಗ ದುಡಿಯಾಕ" ಎಂದು ಹೇಳುತ್ತ ಕಟ್ಟಿಗೆ ಹೊರೆ ಎತ್ತಿಕೊಂಡು ನಡೆಯತೊಡಗಿದ.

ಪುರುಶ್ಯಾ ಸ್ವಲ್ಪ ಹೊತ್ತು ತೆಪ್ಪಗೆ ನಿಂತಿದ್ದ. ಮಧ್ಯಾಹ್ನದ ಹೊತ್ತಿನ ನಿಶ್ಯಬ್ಧ ಆವರಿಸಿತ್ತು. ಆ ಭೂಮಿಯ ಬಂಜರು ಹೊಲಕ್ಕಷ್ಟೇ ಸೀಮಿತವಾಗಿರಲಿಲ್ಲ. ಗುಡ್ಡದ ತುದಿಯವರೆಗೂ ಹಬ್ಬಿತ್ತು. ಅದು ಪರಿಸರವನ್ನೇ ತಿಂದು ಹಾಕಿದಂತೆ ಕಾಣುತ್ತಿತ್ತು. ಹೊಲದಲ್ಲಿನ ಹುಲ್ಲು, ಗುಡ್ಡದ ಮೇಲಿನ ಹುಲ್ಲು ಕೊಯ್ಯುತ್ತಿದ್ದರು. ಎಲ್ಲೆಡೆ ಬರಗಾಲ ಬಿದ್ದಂತೆ ಕಾಣುತ್ತಿತ್ತು. ಯಾರೊ ಈ ಭುವಿಗೆ ಶಾಪ ಕೊಟ್ಟು ಹೋದಂತೆ ಅನಿಸುತಿತ್ತು. ಪುರುಶ್ಯಾನಿಗೆ ಈ ಮುಖವಾಡಗಳ ಚಿಂತೆ ಕಾಡುತಿತ್ತು. ಕೊನೆಗೂ ಒಂದು ಉಪಾಯ ಅವನಿಗೆ ಹೊಳೆಯಿತು. ಸಿಟ್ಟಿನಿಂದ ಬುಟ್ಟಿಯೆತ್ತಿ ತಲೆಯ ಮೇಲಿರಿಸಿಕೊಂಡ. ಬುಟ್ಟಿ ಎತ್ತಿಕೊಳ್ಳುವಾಗ ಕೊಂಚ ಒಂದು ಕಡೆ ವಾಲಿದ್ದರಿಂದ ಒಂದು ಗೊಂಬೆ ಕೆಳಗೆ ಬಿದ್ದು ಅದರ ಕತ್ತು ತುಂಡಾಯಿತು. ಅವನ ಸಿಟ್ಟಿನಿಂದ ಆ ಗೊಂಬೆ ಅಲ್ಲಿಯೇ ಬಿಟ್ಟು ಧಪ ಧಪ ಮುಂದೆ ಹೆಜ್ಜೆ ಹಾಕತೊಡಗಿದ. ಬೆಟ್ಟದ ಬಳಿ ಬಂದು ಒಂದು ಗಿಡದಡಿಯಲ್ಲಿ ಬುಟ್ಟಿಯಲ್ಲಿ ಗೊಂಬೆ-ಮುಖವಾಡಗಳನ್ನೆಲ್ಲ ತೆಗೆದಿಟ್ಟು ಖಾಲಿ ಮಾಡಿದ. ಅವರ ಭೂತಾವಳಿ ಅವರ ಕಡೆಗಿರಲಿ. ಅವರು ಪೂಜಿಸಲಿ, ಬಿಡಲಿ, ಸ್ಥಳಕ್ಕೆ, ದೇವರಿಗೆ ಮರೆತ ಮಂದಿ ಎಂಥವರು? ಬೇಜವಾಬ್ದಾರಿ ಮಂದಿ!

ಖಾಲಿ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಬರುವಾಗ ಅವನು ಯೋಚಿಸುತ್ತಿದ್ದ. ಮೊದಲು ಇಲ್ಲಿ ಸಮೃದ್ಧವಾದ ಬೆಳೆ ಬರುತಿತ್ತು. ಹೊಲದಲ್ಲಿ ಒಕ್ಕಲು ಮುಗಿದ ಮೇಲೆ ಸುಗ್ಗಿ ಹಬ್ಬ ನಡೆಯುತ್ತಿತ್ತು. ಜನ ಗುಂಪು ಗುಂಪಾಗಿ ಬರುತ್ತಿದ್ದರು. ಒಕ್ಕಲು ಹಾಕಿದ ಸ್ಥಳ ದೇವರು ಕುಣಿಯುವ ಮಂಡದಂತೆ ಕಾಣುತ್ತಿತ್ತು... ಇನ್ನು ಮುಂದೆ ಇದೆಲ್ಲ ಮುಗಿಯಿತು. ಇನ್ನೆಲ್ಲಿ ಈ ವೈಭವ. ಅವನಿಗೆ ತುಂಬ ಕೆಡುಕೆನಿಸಿತು.

ಸೀತವ್ವನಿಗೀಗ ಅನಾರೋಗ್ಯ ಕಾಡುತ್ತಿತ್ತು. ದೇಹದ ಮೂಳೆ ಮೂಳೆಗಳೆಲ್ಲ ನೋಯುತ್ತಿತ್ತು. ಈಗ ಬೆನ್ನು ಹುರಿಗೂ ಕೊಂಚ ಬಾಗು ಬಂದಿತ್ತು. ಅವಳು ಎದೆ ಸೆಟೆಸಿ ನಿಲ್ಲುವ ಪ್ರಯತ್ನವೆಷ್ಟೋ ಮಾಡಿದ್ದಳು. ಆದರೆ ದೈವ ಅವಳಿಗೆ ಸಹಕಾರ ನೀಡಲಿಲ್ಲ. ಐನ ಪ್ರಾಯದಲ್ಲಿಯೇ ಅವಳ ಗಂಡ ಹೋಗಿಬಿಟ್ಟ, ಒಬ್ಬನೇ ಮಗನಿದ್ದ. ಅವನೂ ಮಣ್ಣಿನಡಿಯಲ್ಲಿ ಸಿಕ್ಕು ಸ್ವರ್ಗ ಸೇರಿದ. ಅವನಿದ್ದರೆ ಅವಳು ಜಗತ್ತನ್ನೇ ಗೆಲ್ಲುತ್ತಿದ್ದಳು. ಅವಳ ಸೊಸೆ ಪಾಪ ಕಣ್ಣೀರು ಹಾಕುತ್ತಾಳೆ. ಸಂಸಾರದ ನೊಗ ಎಳೆಯುತ್ತಾಳೆ. ಬದುಕಿಗಾಗಿ ಧಡಪಡಿಸುತ್ತಾಳೆ. ಆಗಾಗ್ಗೆ ಮೈಮೇಲೇರಿ ಬರುತ್ತಾಳೆ, ಸಿಡುಕುತ್ತಾಳೆ. ಆದರೂ ಮನೆ ಬಿಟ್ಟು ಅಲ್ಲಾಡಲಿಲ್ಲ. ಸ್ಥಿರವಾಗಿ ನಿಂತಿದ್ದಾಳೆ. ಕುಂಬಾರ ವಿಧವೆಯರ ಬದುಕು ಬಲು ಕಠಿಣ, ಅಗಲ ಬಾಯಿಯ ಪಾತ್ರೆ, ತವೆ, ಹಣತೆ ಮಾಡಿಟ್ಟರೂ ಆವಿಗೆಯಲ್ಲಿಡುವಾಗ ಯಾರದಾದರೂ ಕಾಲು

ಹಿಡಿಯಬೇಕಾಗುತ್ತದೆ. ಅಗಲ ಬಾಯಿಯ ಪಾತ್ರೆ. ಹಣತೆ ಮುತ್ತೈದೆಯರೇ ಮಾಡ ತೊಡಗಿದಾಗ ಒಮ್ಮೆ ಅವಳು ಊರವರೊಡನೆ ಜಗಳವಾಡಿದ್ದಳು. ಅವಳು ಸಿಟ್ಟಿನಿಂದ ಮಾಳಿಗೆಯ ಮೇಲಿದ್ದ ತಿಗರಿಯನ್ನು ಕೆಳಗಿಳಿಸಿ ಹಟದಿಂದ ಕೆಲವು ಪಾತ್ರೆಗಳನ್ನೂ ಮಾಡಿದ್ದಳು. ಆದರೆ ಆಕೆಯಿಂದ ಮುಂದೆ ಆ ಧಂದೆ ನಡೆಸಲಾಗಲಿಲ್ಲ. ಸೊಸೆಯೂ ಅಂಜಿದಳು. ಅವಳ ಸಹಕಾರ ಸೀತವ್ವನಿಗೆ ಸಿಗಲಿಲ್ಲ.

ಅವಳ ಮೊಮ್ಮಗನಿಗೆ ಹದಿನಾಲ್ಕು ವರ್ಷ. ಆರನೆಯ ಇಯತ್ತೆಯಲ್ಲಿ ಅನುತ್ತೀರ್ಣ ನಾದುದರಿಂದ ಮನೆಯಲ್ಲಿಯೇ ಇದ್ದಾನೆ. ಕುಂಬಾರ ಧಂದೆಗೆ ಹಾಕೋಣವೆಂದರೆ ಈ ಧಂದೆ ಎಷ್ಟು ದಿನ ನಡೆಯುತ್ತದೆಯೋ ಏನೊ. ಅವಳು ತನ್ನ ಮೊಮ್ಮಗನನ್ನು ಯಾವುದಾದರೊಂದು ದಾರಿಗೆ ಹಚ್ಚಿಯೇ ಸಾಯಬೇಕೆಂದು ನಿರ್ಧರಿಸಿದ್ದಾಳೆ. ಸಖಾರಾಮ ಊರಿಗೆ ಬಂದರೆ ಅವನ ಹೆಂಡತಿಗೆ 'ಈ ಹುಡುಗನನ್ನು ನೀವು ಕರೆದುಕೊಂಡು ಹೋಗಿ ಯಾವುದಾದರೊಂದು ಕೆಲಸಕ್ಕೆ ಹಚ್ಚಿ' ಎಂದು ಕೇಳಿಕೊಳ್ಳಬೇಕು ಎಂದು ಆಲೋಚಿಸಿದ್ದಾಳೆ. ತಂದೆಯಿಲ್ಲದ ಮಗು ಅದು.

ಅವಳು ಈಗಲೂ ಮನಸ್ಸಿನಿಂದ ಗಟ್ಟಿಯಾಗಿದ್ದಾಳೆ. ಏನಾದರೂ ತಪ್ಪಾದರೆ ಮುಖದ ಮೇಲೆ ಹೊಡೆದಂತೆ ಹೇಳಿ ಬಿಡುತ್ತಾಳೆ. ಕೆಲವೊಮ್ಮೆ ಬೆದರಿಸುತ್ತಾಳೆ. ಹಿಂದೊಮ್ಮೆ ಭೂಮಾಲಿಕನ ಖುಶಾಲಿ ಮತ್ತು ಅವಳ ಎರಡು ಧಾಂಡಿಗ ಮಕ್ಕಳು ಕುಂಬಾರ ಕೇರಿಯಲ್ಲಿ ನುಗ್ಗಲು ನೋಡುತ್ತಿದ್ದಾಗ ಸೀತವ್ವ ಬಾಯಿ ದೊಡ್ಡದು ಮಾಡಿ ಕೂಗು ಹಾಕಿದ್ದರಿಂದ ಅವರೆಲ್ಲ ಹಿಂದೆ ಸರಿದಿದ್ದರು. ಕುಂಬಾರ ಕೇರಿಯ ಉತ್ತರಕ್ಕೆ ಸ್ವಲ್ಪ ಎತ್ತರದಲ್ಲಿ ಕುಂಬಾರರಿಗೆ ಸೇರಿದ ಸ್ವಲ್ಪ ಜಮೀನು ಇದೆ. ಉತ್ತರ ದಿಶೆಯ ಸುಮಾರು ಮೂರು ಗುಂಟೆ ನೆಲದಲ್ಲಿ ಒಂದು ಹುಳಿಯ ಮರ, ಒಂದು ಅತ್ತಿಮರ, ಒಂದು ತಲೆ ಬೋಳಾದಂತೆ ಕಾಣುವ ಮಾವಿನ ಮರ ಇದೆ. ಆ ತ್ರಿಕೋನದಂತಹ ಭೂಮಿ ಖುಶಾಲಿಯ ಜಮೀನಿನತ್ತ ನುಗ್ಗಿದೆ. ರೈತರು ಆಗಾಗ್ಗೆ ಬಂದು ಹುಳಿಮರದ ಹಣ್ಣು, ಉಪ್ಪಿನಕಾಯಿಗೆಂದು ಮಾವಿನ ಮಿಡಿ ಕೆಡವಿಕೊಂಡು ಹೋಗುತ್ತಾರೆ. ಕುಂಬಾರರು ನೋಡಿದರೂ ನೋಡದಂತಿರುತ್ತಿದ್ದರು. ಸುಮಾರು ಹತ್ತು ವರ್ಷದ ಹಿಂದೆ ಮಕ್ಕಳಿಲ್ಲದ ಒಕ್ಕಲಿಗ ಭಿಕು ಸತ್ತಾಗ ಆ ಜನ ಬಂದು ಮಾವಿನ ಮರದ ಒಂದು ದೊಡ್ಡ ರೆಂಬೆ ಕಡಿದೊಯ್ದಾಗಲೂ ಅವಳು ಚಕಾರ ಎತ್ತಲಿಲ್ಲ.

ಆದರೆ ಈ ದಿನ ಖುಶಾಲಿ ಮತ್ತು ಅವಳ ಮಕ್ಕಳು ಮೂರು ಹೊರೆ ಗೂಟ, ಒಂದು ಹೊರೆ ಮುಳ್ಳಿನಗಿಡ ತಂದು ಹಾಕಿ ಬೇಲಿ ಕಟ್ಟಲು ಪ್ರಯತ್ನಿಸುತ್ತಿದ್ದರು. ಗೂಟ ಹುಗಿಯಲು ಹೊಂಡ ತೆಗೆಯಲಾರಂಭಿಸಿದಾಗ ಯಶವಂತ, ರಾಮಚಂದ್ರ, ರಾಘೋಬಾ ಮುವರೂ ಹೋಗಿ 'ಏನು ಮಾಡಿದ್ದೀರಿ?' ಎಂದು ಕೇಳಿದಾಗ 'ಈ ಸ್ಥಳ ನಮ್ಮ ಜಮೀನಿಗೆ ಸೇರಿದ್ದು, ನಮ್ಮದು. ನಾವು ಬೇಲಿ ಹಾಕ್ತೀವಿ, ನೀವ್ಯಾರು ಕೇಳುವವರು?' ಎಂದು ಹೇಳಿ ತುಂಬ ಸೊಕ್ಕಿನಿಂದ ಗೂಟ ಹುಗಿಯ ತೊಡಗಿದರು.

ಸೀತವ್ವನೂ ಅಲ್ಲಿಗೆ ಹೋಗಿದ್ದಳು. ಅವಳು ಹೇಳಿದಳು. ಪೂರಾ ಕೇರಿ ನಾವು ಕಟ್ಟೀವಿ. ಅಂದರ ನಮ್ಮ ಹಿರ್‍ಯಾರು ಕಟ್ಯಾರ. ನಾವ್ ಕುಂಬಾರವಾಡೆಗೆ ಬೇಲಿ ಹಾಕೂದಿಲ್ಲಂತ ಅದು

ನಿಮ್ಮದ್ಹಂಗ ಕಾಣತೈತಿ. ನಿಮ್ಮ ಹೊಲದ ಆಜೂಬಾಜೂ ಈ ಜಾಗಾ ಐತಂದ್ರ ಅದು ನಿಮ್ಮದಾಗೂದಿಲ್ಲ. ಒಂದು ಗೂಟ ಹುಗಿವಂಗಿಲ್ಲ, ಕಿತ್ತಾಕ್ತೀವಿ.

"ಸೀತವ್ವ ನೀ ಸುಮ್ಮ ಬಡಬಡಿಸ್‌ಬ್ಯಾಡಾ. ನಮ್ಮ ಒಳ್ಳೆತನಕ್ಕ ನೀವ್ ಇಲ್ಲಿ ಅದೀರಿ. ನಮ್ಮ ಹಿರ್‍ಯಾರು ಮೆಹರ್‌ಬಾನಿ ನಿಮ್ಮಮ್ಯಾಗ ಮಾಡ್ಯಾರಂತ. ನಾವ್ ನಾಳಿ ಕೋರ್ಟಿಗೆ ಹ್ವಾದ್ರ ನೀವ್ ಕೇರಿ ಖಾಲಿ ಮಾಡಿ ಹೋಗ್‌ಬೇಕಾಗತದ."

"ನೀ ಯಾರಿಗ್ ಹೇಳ್ತಿ ಖುಶಾಲಿ. ಇಲ್ಲಿ ಮೂರು ವರ್ಸ ಹೊಲ ಮಾಡಿದ್ರ ಊಳಾವನದ ಹೊಲ ಆಗ್ತದ. ನೀವ ಬ್ಯಾರೆವರ ಮಂದಿ ಹೊಲಾ ನುಂಗೀರಿ. ಮತ್ತ ನಾವ್ ನೂರು-ಎರಡು ನೂರು ವರ್ಸದಿಂದ ಇಲ್ಲದೀವಿ. ಸರಕಾರ ಮಕ್ಕೊಂಡಿಲ್ಲ. ಚಾವಡಿಗೆ ಹೋಗಿ ನಕಾಸೆ ನೋಡ್ಕೊಂಬಾ ಹೋಗು."

ಆದರೂ ಅವರು ಗೂಟ ಹುಗಿಯುವುದನ್ನು ನಿಲ್ಲಿಸಲಿಲ್ಲ. ಸೀತವ್ವ ದೊಡ್ಡದೊಡ್ಡಕೆ ಕೂಗಿ ಕೇರಿಯಲ್ಲಿದ್ದ ಮಂದಿಗೆಲ್ಲ ಕರೆದಳು. ಗಂಡಸರು, ಹೆಂಗಸರು ಓಡೋಡಿ ಬಂದರು. ಅವಳು ಹೇಳಿದಳು 'ಕಿತ್ತ್ಹಾಕ್ರಿ ಗೂಟ ನೋಡೂಣು' ಕೆಲವರು ಮುಂದೆ ನುಗ್ಗಿದರು.

ಆದರೆ ಖುಶಾಲಿಯ ಇಬ್ಬರು ಮಕ್ಕಳು ಕೈಯಲ್ಲಿ ಕತ್ತಿ ಹಿಡಿದು ಎದೆ ಮುಂದೆ ಮಾಡಿ 'ಯಾರ್ ಮುಂದ ಬರ್ತೀರಿ ನೋಡ್‌ತೀವಿ... ಮುಂದೆ ಬಂದ್ರೆ ಕಡಿದು ಹಾಕ್‌ತೀವಿ" ಎಂದರು.

ಆ ಮಾತುಗಳಿಗೆ ಸೀತವ್ವ ಕೊಂಚ ಹಿಂದೆ ಸರಿದಳು. ಆದರೆ ಅವಳು ಚಾಮುಂಡೇಶ್ವರಿ ರೂಪ ತಳೆದು 'ಗಂಡಸರು, ಹೆಂಗಸರು ಎಲ್ಲಾ ಈಗ ಮನೀಗ ಹೋಗ್ರಿ. ಎಲ್ಲಾರೂ ಒಂದೊಂದು ಹೊಸ ಗಡಿಗಿ ಹಿಡಕೊಂಡು ಬರ್‍ರಿ... ತಂದು ನೆಲದಾಗ ಒಡೀರಿ. ಬಾಯಾಗ ಹೇಳ್ರಿ ನಿಮ್ಮ ಹೆಣದ ಮ್ಯಾಗ ಒಡಿತೀವಿ' ಅಂತ. ಆ ಮ್ಯಾಗ ಅವರು ತಿನ್ನಲಿ ಈ ಜಗಾ, ಹ್ಯಾಂಗ ದಕ್ಕತದೊ ನಾನೂ ನೋಡ್‌ತೀನಿ, ಬರ್ಕತ್ತಾಗೂದಿಲ್ಲ"

ನಿಜಕ್ಕೂ ಕೆಲವು ಗಂಡಸರು, ಹೆಂಗಸರು ಮನೆಗೆ ಓಡಿ ಹೋಗಿ ಒಂದೊಂದು ಹೊಸ ಗಡಿಗೆ ಹಿಡಕೊಂಡು ಬಂದರು. ಆಗ ಖುಶಾಲಿ ಮರುಮಾತಾಡದೆ ತನ್ನ ಇಬ್ಬರು ಮಕ್ಕಳನ್ನು ಕರೆದುಕೊಂಡು ಹೊರಟು ಬಿಟ್ಟ. ಕೇರಿಯ ಹೊರಗೆ ಹೊಲದ ಮೇರೆಯ ಮೇಲೆ ನಿಂತು ಒಂದೇ ಸವನೆ ಬಯ್ಗಳ ಸುರಿಮಳೆ ಮಾಡಿದರು. ಸೀತವ್ವನ ಕುಲ ಉದ್ಧಾರ ಮಾಡಿದರು. ಕುಂಬಾರರಿಗೆ ಹಿಡಿಶಾಪ ಹಾಕಿದರು. ಆದರೆ ಯಾವ ಕುಂಬಾರನೂ ಬಾಯಿ ಬಿಡಲಿಲ್ಲ. ಘನಶ್ಯಾಮನ ಹೆಂಡತಿ ರುಕ್ಮಿಣಿಗೆ ತಡೆಯಲಾಗದೆ ಹೇಳಿದಳು. "ನೀನು ನಿನ್ನ ಹೊಲದಾಗ ನಿಂತು ಕೆಟ್ಟ ಕೆಟ್ಟ ಬಯ್ತಾ ಇದ್ದಿ. ನಿನ್ನ ಹೊಲದಾಗ ಈಗ ತೆನಿ ಬಿಡೂ ಹೊತ್ತು. ನಾಳೆ ಗಟ್ಟಿ ಬತ್ತ ಅಲ್ಲ ಪೋಲುಬತ್ತ ತಿನ್ನು."

ಸೀತವ್ವ ಕೊನೆಗೆ "ಈಗಾದರೂ ಕುಂಬಾರ ಮಂದಿ ಎಚ್ಚರಾಗಾಕ್ ಬೇಕು. ದುಸ್ಮಾನರ ಮುಂದ ಅತ್ತರೆ ಅಂವಾ ಇನ್ನಷ್ಟು ಬಡೀತಾನ. ಇನ್ನ ಬರ್‍ಲಿ ಯಾವ ರೈತ ವಾಡ್ಯಾಗ ಕಾಲಿಡ್ತಾನ ನೋಡೂಣು" ಎಂದಳು.

ಆದರೆ ಈ ಪ್ರಕರಣ ಮುಂದೆ ಬೆಳೆಯಲಿಲ್ಲ. ಕಾರಣ ಖುಶಾಲಿ ಮಾಡಿದ ಕೆಲಸ ಇತರ ರೈತರಿಗೆ ಒಪ್ಪಿಗೆಯಾಗಲಿಲ್ಲ. ಅವರು ಖುಶಾಲಿ ಮತ್ತು ಅವನ ಮಕ್ಕಳನ್ನೇ ದೂರಿದರು.

ಒಂದು ದಿನ ಕುಂಬಾರರೆಲ್ಲ ಸೇರಿ ಅಲ್ಲಿರುವ ಗೂಟಗಳನ್ನು ಒಟ್ಟು ಮಾಡಿ ಹೊರೆ ಕಟ್ಟಿ

ಖುಶಾಲಿಯ ಹೊಲದಂಚಿನಲ್ಲಿ ರಾಶಿ ಹಾಕಿದರು. ಓದಲು ಪುಣೆಗೆ ಓಡಿ ಹೋದ ಯಶವಂತನ ಮಗ ಸದಾನಂದ ಐದೂವರೆ ವರ್ಷಗಳ ನಂತರ ಮರಳಿ ಬಂದಿದ್ದ. ಮೊದಲೇ ತೆಳ್ಳಗೆ ಬೆಳ್ಳಗೆ ಎತ್ತರವಾಗಿದ್ದ ಹುಡುಗ ಈಗ ಇನ್ನೂ ಎತ್ತರವಾಗಿ ಗೌರವರ್ಣ ತಳೆದು ಚಂದಾಗಿ ಕಾಣುತ್ತಿದ್ದ. ಅವನ ಕಣ್ಣುಗಳಲ್ಲಿ ಒಂದು ಬಗೆಯ ಹೊಳಪು ತುಂಬಿತ್ತು. ಈಗ ಅವನ ಕೈಯಲ್ಲಿ ಬಿ.ಎ. ಪರೀಕ್ಷೆ ಮೊದಲ ವರ್ಗದಲ್ಲಿ ಪಾಸಾದ ಸರ್ಟಿಫಿಕೇಟ್ 'ಇತ್ತು. ಹೋಗಬೇಕಾದರೆ ಸಿಟ್ಟಿನಿಂದ ಅಂಗಳದಲ್ಲಿದ್ದ ಗಡಿಗೆ ಒಡೆದು ಹಾಕಿ ಹೋಗಿದ್ದ ಹುಡುಗ ಈಗ ಪದವೀಧರನಾಗಿ ಬಂದಿದ್ದಾನೆ.

ಅವನ ತಂದೆ ತಿಗರಿಯ ಮೇಲೆ ಕುಳಿತು ಗಡಿಗೆ ಹುರಿಗೊಳಿಸುತ್ತಿರುವಾಗಲೇ ಅವನ ಮಗ ಬಂದು ಮುಂದೆ ನಿಂತುಕೊಂಡ. ಮೇಲಿನಿಂದ ಕೆಳಗಿನವರೆಗೆ ದೃಷ್ಟಿ ಓಡಿಸಿದ ತಂದೆಯ ಕಣ್ಣಲ್ಲಿ ಧಾರಾಕಾರ ನೀರು ಸುರಿಯತೊಡಗಿತು. "ಮಗಾ, ತಂದಿ ತಾಯಿ ತಮ್ಮ ಮಕ್ಕಳ ಒಳ್ಳೇದಾಗ್ಲಿ ಅಂತ ಆಶಿ ಮಾಡ್ತಾರ. ಆದರ ನಾವ್ ಅಡಾಣಿ ಮಂದಿ ನಮಗ ಯಾವದು ಒಳ್ಳೇದು ಯಾವದು ಕೆಟ್ಟದ್ದು ಅಂತ ತಿಳಿಯಾಂಗಿಲ್ಲ" ಅವನು ಜೋರಾಗಿ ಹೆಂಡತಿಯನ್ನು ಕರೆದು "ಇಲ್ಲಿ ದೌಡು ಬಾ ನಮ್ಮಗ ಸದಾನಂದ ಬಂದಾನ ನೋಡು" ಎಂದು ಹುರುಪಿನಿಂದ ಹೇಳಿದ.

ಕಿವಿಯ ಮೇಲೆ ಶಬ್ದ ಬಿದ್ದೊಡನೆ ಅವಳು ಹೊರಗೆ ಬಂದು ಮಗನನ್ನು ತಬ್ಬಿಕೊಂಡಳು. ಮೈ ಮುಖಕ್ಕೆಲ್ಲ ಮುತ್ತು ಕೊಟ್ಟಳು. ಅವಳ ಕಣ್ಣಿನಿಂದ ಆನಂದ ಭಾಷ್ಪಗಳು ಉದುರಿದವು. ಅವಳಿನ್ನು ಮಗನನ್ನು ಮಡಿಲಲ್ಲಿ ಕೂಡಿಸಿಕೊಂಡು ಮುದ್ದಿನಿಂದ ತಲೆ ನೇವರಿಸುತ್ತಾಳೇನೋ ಅನಿಸುತಿತ್ತು. ಶಿವರಾಮ ಮಾಮನ ಮಗ ಆತ್ಮಾರಾಮ ಊರಿಗೆ ಬಂದಾಗೆಲ್ಲ "ಒಂದ್ ಸಲ ಮನೀಗ ಬಂದು ಹೋಗು ಅಂತ ಹೇಳು ಅಂತ ಹೇಳಿ ಕಳಿಸ್ತಿದ್ದೆ. ನೀ ಬರಲಿಲ್ಲ. ನಮ್ಮ ನೆನಪು ಆಗಲಿಲ್ಲೇನಪ್ಪ?"

"ನೆನಪಾಗದೇನವ್ವ? ಆದ್ರ ನೋಕರಿ ಮಾಡಿ ಸಾಲೀಗ ಹೋಗತಿದ್ದೆನಲ್ಲವ್ವ, ಬಿಟ್ಟಿ ಬರಾಕ್ ಆಗ್ತಿರಲಿಲ್ಲ. ಒಂದು ಸಾರಿ ಓದ ಮುಗಿಸೇ ಮರ್ಯಾದೆಯಿಂದ ನಿಮ್ಮ ಹತ್ರ ಬರ್‌ಬೇಕೂಂತ ಇದ್ದೆ.

"ಛಲೋದಾಗ್ಲಿಯಪ್ಪ ಛಲೋದಾಗ್ಲಿ. ತಂದಿ ತಾಯಿ ಹೆಸರ ಮೆಲ್ತಂದಿ"

ಸದಾನಂದ ಊರಿಗೆ ಬಂದಿದ್ದಾನೆಂದು ತಿಳಿದ ಕೂಡಲೇ ಕೇರಿಯ ಮಂದಿಯೆಲ್ಲ ನೋಡಲು ಬಂದರು. ಅವರಿಗೆಲ್ಲ ಎಷ್ಟು ಖುಷಿ, ಎಷ್ಟು ಆಶ್ಚರ್ಯ, ಎಂಥ ಪ್ರೀತಿ. ಇನ್ನೇನು ಅವರು ಅವನನ್ನು ಹೆಗಲ ಮೇಲೆ ಕೂಡಿಸಿಕೊಂಡು ವಾಡೆಯಲ್ಲಿ ಮೆರವಣಿಗೆ ಮಾಡುತ್ತಾರೇನೊ ಅನ್ನಿಸುತ್ತಿತ್ತು.

ಮರುದಿನ ಅವನು ರೈತ ಗೋವಿಂದ ನಾಯಕನ ಮನೆಗೆ ಹೋದ. ಅವನು ಗೋವಿಂದ ನಾಯಕನ ಮಗ ಆತ್ಮಾರಾಮನ ಜೊತೆಯಲ್ಲಿಯೇ ಇದ್ದು ಪುಣೆಯಲ್ಲಿ ಓದಿದ್ದ. ಒಂದು ಬಾರಿ ಅವನು ಊರಿಗೆ ಬಂದಾಗ 'ನಾನು ಮ್ಯಾಟ್ರಿಕ್ ಪರೀಕ್ಷೆ ಕಟ್ಟಿದ್ದೀನಿ ಆತ್ಮಾರಾಮಣ್ಣ' ಎಂದು ಹೇಳಿದಾಗ ಅವನು ಚೆನ್ನಾಗಿ ಪರೀಕ್ಷೆಯಲ್ಲಿ ಪಾಸಾದ್ರೆ ಪುಣೆಗೆ ಬಂದು ಬಿಡು... ಮುಂದೆ ಏನಾದ್ರೂ ಮಾಡೋಣ' ಎಂದು ಭರವಸೆ ಕೊಟ್ಟಿದ್ದ. ಆದಷ್ಟೇ ಆಧಾರ.

ಐದೂವರೆ ವರ್ಷಗಳ ಹಿಂದೆ ಅವನ ಮನೆ ಬಿಟ್ಟು ಓಡಿ ಹೋದಾಗ ಅವನು ಸದಾಶಿವಗಡದಲ್ಲಿರುವ ಖಾನಾಪುರಕರ್ ಮಾಸ್ತರರ ಮನೆಯಲ್ಲಿ ಎರಡು ದಿನ ತಂಗಿದ್ದ. ತಾನು ಓದಲು ಪುಣೆಗೆ ಹೊರಟಿದ್ದೇನೆ ಎಂದು ಮಾಸ್ತರರಿಗೆ ಹೇಳಿದಾಗ ಅವರು ಆಶೀರ್ವಾದ ಮಾಡುತ್ತ 'ಹೋಗು ನೀನು ಎಲ್ಲಾದರೂ ಹೋಗು. ಸಾಕಷ್ಟು ಓದು. ಸೀಮೆ ದಾಟುವವನಿಗೇ ವಿಜಯ ಸಿಗುತ್ತದಂತೆ. ಹೊಟ್ಟೆ ಪಾಡಿಗಾಗಿ ಒಂದು ನೌಕರಿ ಹಿಡಿ. ಕಾಲೇಜಿಗೆ ಹೋಗು, ತುಂಬ ತುಂಬ ಓದು, ಬರೆ. ಪ್ರತಿ ವರ್ಷ ಮೊದಲ ವರ್ಗದಲ್ಲಿ ಪಾಸಾಗಬೇಕು. ಗ್ರಾಜ್ಯುಯೇಟ್ ಆಗಿ ಮನೆಗೆ ಬಾ... ಆದರ ಈಗ ಎಲ್ಲಿ ಹೋಗ್ತಿ? ಯಾರಲ್ಲಿ ಇರ್ತಿ?"

"ಪುಣ್ಯಾಗ ಚಿಕ್ಕ ಮುಡಗೇರಿಯ ಗೋವಿಂದ ಮಾಮನ ಮಗಾ ಆತ್ಮಾರಾಮ ಅಲ್ಲದಾನ... ಬಾ ಅಂತ ಹೇಳ್ಯಾನ"

"ಹಾಗೆ ಬಾಯಲ್ಲಿ ಹೇಳೋದು ಬೇರೆ– ಅಲ್ಲಿ ಹೋದ ಮೇಲೆ ನೋಡಿಕೊಳ್ಳೋದು ಬೇರೆ. ಶಹರದಲ್ಲಿ ಜನ ಗುರುತು ಪರಿಚಯ ಇಲ್ಲದಂತಿರುತ್ತಾರೆ."

"ಇಲ್ರಿ" ಅಂವಾ ಒಳ್ಳೆಯಂವಾ. ಗೋವಿಂದ ಮಾಮನೂ ಒಳ್ಳೆ ಮನಶ್ಯಾ. ನನ್ನಪ್ಪ ಅವರ ಮನೀಗ ಹ್ವಾದ್ರ, ಪತ್ರಾವಳ್ಯಾಗ ಅನ್ನ ಹಾಕಿ ಕೊಟ್ಟು ಕಳಿಸ್ತಿದ್ದ. ಅವರ ಮೂರು ಮಕ್ಕಳು ಭ್ಹಾಳ ಕಲ್ತಾರ."

ಮರುದಿನ ಅವನು ತಾನು ಓದಿದ ಶಾಲೆಗೆ ಹೋಗಿ ಮುಂದಿನ ಓದಿಗೆ ಬೇಕಾದ ದಾಖಲೆ, ಪ್ರಮಾಣ ಪತ್ರ ಇತ್ಯಾದಿ ಸಂಗ್ರಹಿಸಿದ. ಗೋವಿಂದ ನಾಯಕರ ಮನೆಗೆ ಹೋಗಿ ಆತ್ಮಾರಾಮನ ಪುಣೆಯ ವಿಳಾಸ ಬರೆದುಕೊಂಡ. ಪುಣೆಗೆ ಹೊರಟು ನಿಂತಾಗ ಖಾನಾಪುರಕರ ಮಾಸ್ತರರು ಅವನ ಕೈಯಲ್ಲಿ ನಾಲ್ಕು ನೂರು ರೂಪಾಯಿ ಇಟ್ಟರು. ಅವರು ಹೇಳಿದರು. "ಆಲದ ಮರದ ಬೀಜ ತೀರ ಚಿಕ್ಕದು. ಆ ಬೀಜವೇ ಚಿಗಿತು ದೊಡ್ಡ ಆಲದ ಮರವಾಗುತ್ತದೆ, ನೂರಾರು ಬೀಳಲುಗಳು ಬಿಡುತ್ತವೆ. ಆಕಾಶ ಮುಟ್ಟುತ್ತವೆ. ಹಾಗೇ ಇದೊಂದು ಬೀಜ ಎಂದು ಭಾವಿಸು. ಈ ಬೀಜದಿಂದ ಬೆಳೆ ಬೆಳೆಸು ಅದಕ್ಕೆ ಕೃಷಿ ಮಾಡು"

ಅವನು ಮಾಸ್ತರರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೇಳಿದ "ಸರ್... ನಾನು ಹ್ಯಾಂಗಾದ್ರು ಮಾಡಿ ಕಲೀತೀನಿ. ನಾನು ಹ್ವಾದ ಮ್ಯಾಲ ನನ್ನ ತಂದಿ ತಾಯಿಗೆ ಸ್ವಲ್ಪ ತಿಳಿಸಿ ಹೇಳ್ರಿ, ನಿಮ್ಮ ಆಶೀರ್ವಾದ ನನ ಮ್ಯಾಲಿರಲಿ."

ಆತ್ಮಾರಾಮ ಪುಣೆಯ ಕ್ಯಾಂಪ್ ಪ್ರದೇಶದಲ್ಲಿ ಇರುತ್ತಿದ್ದ. ಅವನು ಮಿಲಿಟರಿ ಅಕೌಂಟ್ಸ್‌ನಲ್ಲಿ ಕೆಲಸಕ್ಕಿದ್ದ. ಅವನ ವಿಳಾಸ ಎಲ್ಲಾದರೂ ಕಳೆದು ಹೋದೀತೆಂದು ಸದಾನಂದ ಕಂಠಪಾಠ ಮಾಡಿದ್ದ.

ಸದಾನಂದ ಕಾರವಾರದಿಂದ ಬಸ್ಸಿನಲ್ಲಿ ಪಯಣಿಸಿದ. ಪುಣೆಯ ಬಸ್ ನಿಲ್ದಾಣದಲ್ಲಿ ಬಂದಿಳಿದ. ಆ ಜನ ಸಾಗರದಲ್ಲಿ ಅವನು ಕಳೆದು ಹೋದಂತಾದ. ಎಲ್ಲಿ ನೋಡಿದರೂ ಜನ ಜಾತ್ರೆ. ಅವರಲ್ಲಿ ಯಾರೂ ತನ್ನವರಿರಲಿಲ್ಲ. ಜಗತ್ತಿನಲ್ಲಿ ಇಷ್ಟೆಲ್ಲ ಜನ ಅಪರಿಚಿತರಿರುತ್ತಾರೆಂಬುದು ಅವನಿಗೆ ಗೊತ್ತೇ ಇರಲಿಲ್ಲ. ಅವನಿಗನಿಸಿತು ತಾನು ತನ್ನ ಹೆಸರು ಪರಿಚಯವನ್ನೇ ಕಳೆದುಕೊಂಡು ಕೂತಿದ್ದೇನೆ. ಕಳೆದು ಹೋದದನ್ನು ಮತ್ತೆ ಸಂಗ್ರಹಿಸುವುದು ಕಠಿಣವೆಂಬಂತೆ ಕಂಡಿತು.

ಅವನು ಗಾಬರಿಗೊಂಡವನಂತಾಗಿ ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ಇಂಥ ಊರಿನಲ್ಲಿ ದಾರಿ ಹುಡುಕುವುದು ಹೇಗೆ? ಅವನು ಅಲ್ಲಿಯೇ ಬೆಂಚಿನ ಮೇಲೆ ಕುಳಿತುಕೊಂಡ. ಅವನಿಗರಿವಿಲ್ಲದಂತೆ ತನ್ನ ಊರಿನ ಮಾವಿನ ಮರದ ನೆರಳಿಗೆ ಹೋದ. ಆವಿಗೆಯ ಮುಂದೆ ಪೇರಿಸಿದ ಗಡಿಗೆಗಳ ರಾಶಿ... ಸೀತವ್ವ ರಚಿಸಿದ ಹಣತೆಗಳು, ...ನಾನು ಬರುವಾಗ ಅಂಗಳ ದಲ್ಲಿದ್ದ ಗಡಿಗೆಗಳನ್ನು ಒಡೆದುಹಾಕಿ ಬರಬಾರದಿತ್ತು. ಅದು ಅವರ ಹೊಟ್ಟೆ ಪಾಡಿನ ವಸ್ತು. ಇಲ್ಲಂತೂ ನಾಳೆಯ ತುತ್ತಿನ ಆಶೆಯೂ ಇಲ್ಲ... ಆಕಸ್ಮಿಕ ಅವನ ಕಿವಿಗಳಲ್ಲಿ ಅಪರೂಪದ ಸ್ವರಗಳು ರಿಂಗಣಿಸತೊಡಗಿದವು. ರಾತ್ರೆಯ ತಂಪು ಶಾಂತ ಸಮಯ. ಮೇಲೆ ಪಸರಿಸಿದ ಮಾವಿನ ಮರ. ಮನೆ ಮನೆಯಿಂದ ಹೊರಡುವ ಪೆಟಣೆಯ ತಾಲಬದ್ಧ ಸದ್ದು. ಆ ತಾಲದ ಆನಂದ ಸವಿಯುತ್ತ ಕೊಂಚ ಹೊತ್ತು ಗುಂಗಾಗಿ ನಿಂತ.... ಪೆಟಣೆಯ ತಾಲದಲ್ಲಿ ಯಾರೊ ಒಬ್ಬ ಭಜನೆ ಮಾಡುತ್ತಿದ್ದಾನೆ... ವಿಠೋಬಾ... ವಿಠೋಬಾ... ವಿಠೋಬಾ ರಖುಮಾಯಿ.

ಶನಿವಾರ ಸಂಜೆ ಅವನು ಆತ್ಮಾರಾಮನ ಕೋಣೆ ತಲುಪಿದ್ದ. ಆತ್ಮಾರಾಮನೊಂದಿಗೆ ಅದೇ ಕೋಣೆಯಲ್ಲಿದ್ದು ಅಡಿಗೆ ಮಾಡಿ ಉಣ್ಣುತ್ತಿದ್ದ ಸ್ನೇಹಿತರು ಆಗ ಅಲ್ಲಿಯೇ ಇದ್ದರು. ಸದಾನಂದನನ್ನು ನೋಡಿ ಆತ್ಮಾರಾಮ ಮೆಲ್ಲಗೆ ಹೇಳಿದ "ಬಂದ್ಯಾ ಬಾ... ಊರಲ್ಲಿ ಎಲ್ಲಾರೂ ಆರಾಮದಾರಲ್ಲ? ನನಗ ತಿಳಿಸದೆ ಬಂದ್‌ಬಿಟ್ಟೆಲ್ಲ"

ಆತ್ಮಾರಾಮನ ಈ ಪರಕೀಯತೆಯ ಮಾತು ಅವನ ಹೃದಯಕ್ಕೆ ಚುಚ್ಚಿದವು. ಅವನ ಎದೆ ಧಡ್ ಧಡ್ ಎಂದು ಸದ್ದು ಮಾಡಿತು.

ಎರಡು ಕೋಣೆಯ ಅದು ಪುಟ್ಟಮನೆ. ಅವರು ಮೂವರೂ ಹಾಫ್ ಪ್ಯಾಂಟನಲ್ಲಿದ್ದರು. ಹಗ್ಗದಲ್ಲಿ ಅಸ್ತವ್ಯಸ್ತ ಬಟ್ಟೆ ಬಿದ್ದಿದ್ದವು. ತೊಳೆದ, ತೊಳೆಯದಿರುವ ಪಾತ್ರೆಗಳ ರಾಶಿ, ಹಳೆಯ ಒಂದು ಹಿತ್ತಾಳೆಯ ಸ್ಟೋವ್. ಮದುವೆಯಾಗುವ ಮೊದಲು ಆಲಸಿ, ಬೆಫಿಕೀರ್ ಆದ ಮನುಷ್ಯ ಹೇಗಿರುತ್ತಾನೆನ್ನುವುದರ ಪ್ರತಿಬಿಂಬ ಇಲ್ಲಿ ಕಾಣುತಿತ್ತು. ಆತ್ಮಾರಾಮ ತನ್ನ ಊರಿನ ಒಬ್ಬ ರೈತನ ಮಗ, ಊರಲ್ಲಿ ಡೌಲಿನಿಂದ ಓಡಾಡುತ್ತಿದ್ದ. ಅವನು ಇಲ್ಲಿ ಕೊಂಚ ಆಲಸ್ಯ ಅಂಟಕೊಂಡಿರುವುದರಿಂದ ಸ್ವಲ್ಪ ಆತಂಕದಿಂದಿದ್ದ.

ಸದಾನಂದನ ಅಂಗಿಯ ನೂಲು ಹೊರಬಂದಿತ್ತು. ಬಟ್ಟೆ ಹೊಲಸಾಗಿತ್ತು. ಕೈಯಲ್ಲೊಂದು ಬಟ್ಟೆಯ ಕೈ ಚೀಲವಿತ್ತು. ಬೆವರಿನಿಂದ ತಲೆ ಗೂದಲು, ಧರಿಸಿದ ಬಟ್ಟೆ ಅಂಟು ಅಂಟಾಗಿತ್ತು. ಆದರೆ ಅವನು ಮೂಲತಃ ಬೆಳ್ಳಗಿದ್ದ, ನಗು ಮುಖದವನಾಗಿದ್ದ. ಹದಿನೇಳು ವರ್ಷ ಪ್ರಾಯದ ಯೌವನ, ಮತ್ತು ಕೌಮಾರ್ಯದ ಲವಲವಿಕೆ ಅವನಲ್ಲಿತ್ತು.

ಕೆಲವು ಕ್ಷಣಗಳಲ್ಲಿ ಅವರು ಮೂವರು ತುಂಬು ಮನಸ್ಸಿನ ಸ್ವಾಗತ ನೀಡಿದರು. "ಇಲ್ನೋಡ್ರಿ ಪಾಂಡೆ, ಸಾವಂತ ಇಂವಾ ನಮ್ಮೂರಿನಂವಾ. ಇವನ ಹೆಸರು ಸದಾನಂದ. ಇವನು ಮ್ಯಾಟ್ರಿಕ್ ಪಾಸಾಗಿದ್ದಾನೆ.

"ಹೌದು... ನಾನು ಮೊದಲ ವರ್ಗದಲ್ಲಿ ಪಾಸಾಗಿದ್ದೇನೆ. ಮುಂದ ಕಲೀಬೇಕಂತದೀನಿ."

ಅವರು ಯಾರೂ ಮಾತಾಡಲಿಲ್ಲ. ಆದರೆ ಅವರಲ್ಲಿ ಒಬ್ಬ ಅವನಿಗೆ ಬಚ್ಚಲಿನಲ್ಲಿ ಬಕೆಟ್‌ನಲ್ಲಿ ನೀರು ತುಂಬಿಕೊಟ್ಟ, ಮತ್ತೊಬ್ಬನು ಪಾತ್ರೆಯಲ್ಲಿದ್ದುದನ್ನು ಬಿಸಿ ಮಾಡಲು ಸ್ಟೋವಿನ ಮೇಲಿಟ್ಟ.

ಕಾರವಾರದ ಬಸ್ಸಿನಲ್ಲಿ ಕುಳಿತುಕೊಳ್ಳಲು ಬಂದಾಗ ಅವನು ಕಡಮೆ ಬೆಲೆಯ ಒಂದು ಅಂಗಿ, ಚಡ್ಡಿ, ಒಳ ಚಡ್ಡಿಯೊಂದು ಖರೀದಿಸಿದ್ದ. ಸ್ನಾನ ಮಾಡಿ ಬಂದು ಅವನು ಹೊಸ ಬಟ್ಟೆ ಹಾಕಿಕೊಂಡ. ಅವನ ಆ ಬಟ್ಟೆಯೊಳಗಿನಿಂದಲೇ ಅವನ ಬಡತನ ಎದ್ದು ಕಾಣುತ್ತಿತ್ತು. ಅವನು ಮೊದಲ ಬಾರಿ ಅವರೊಂದಿಗೆ ಕುಳಿತಾಗ ಅವನಿಗೆ ಒಂದು ಬಗೆಯ ಕಸಿವಿಸಿ ಯಾಯಿತು. ದೈನ್ಯದಿಂದ ಅವನ ಮನಸ್ಸು ತುಂಬಿ ಹೋಯಿತು. ಸ್ವಲ್ಪ ಅಳುಕು ಮೂಡಿತು. ನಾನು ಇವರಿಗೆ ಭಾರ ಆಗಲಿಕ್ಕಿಲ್ಲವೆ ಎಂಬ ದುಗುಡ ಅವನಲ್ಲಿ ತಲೆ ಹಾಕಿತು. 'ನಾನಿಲ್ಲಿ, ಏನಾದರೂ ನೌಕರಿ ಮಾಡಿಯೇ ಕಲೀತೀನಿ' ತಾನು ಅವರಿಗೆ ಭಾರವಾಗಲಿಕ್ಕಿಲ್ಲ ಎಂಬ ಭರವಸೆ ಅವರಿಗೆ ಕೊಟ್ಟಿದ್ದೇನೆ ಎಂದು ಅವನಿಗನಿಸಿತು.

ಅವನಿಗೆ ಸುಮಾರು ಒಂದೂವರೆ ತಿಂಗಳು ಎಲ್ಲಿಯೂ ಕೆಲಸ ಸಿಗಲಿಲ್ಲ. ಕನಿಷ್ಟ ಒಂದು ಒಪ್ಪತ್ತಿನ ನೌಕರಿ ಬೇಕಾಗಿತ್ತು. ಅಂಥ ನೌಕರಿ ಸಿಗುವುದು ಕಠಿಣವಿತ್ತು. ಆದರೂ ರೇಲ್ವೆ ಸ್ಟೇಷನ್ ಸಮೀಪ ಇರುವ ಒಂದು ಶಾಲೆಯಲ್ಲಿ ಅವನಿಗೆ ಹನ್ನೊಂದನೆ ಇಯತ್ತೆಗೆ ಪ್ರವೇಶ ದೊರಕಿಸಿಕೊಡಲು ಮೂವರೂ ಸಹಾಯ ಮಾಡಿದರು. ಎಲ್ಲೆಲ್ಲಿಂದಲೋ ಹಳೆಯ ಪುಸ್ತಕಗಳನ್ನು ತಂದು ಕೊಟ್ಟರು. ಆತ್ಮಾರಾಮನು ಪ್ರವೇಶ ಶುಲ್ಕ ತುಂಬಿದ. ಸಾವಂತ ಮತ್ತು ಪಾಂಡೆ ಅವನಿಗೆ ಆಗಾಗ್ಗೆ ಬಸ್ಸಿನ ಟಿಕೇಟಿನ ಹಣ ಕೊಡುತ್ತಿದ್ದರು.

ಅವರೆಲ್ಲ ಬೇಡ ಬೇಡವೆಂದರೂ ಸದಾನಂದ ಅಡಿಗೆಯ ಪಾತ್ರೆಗಳನ್ನೆಲ್ಲ ತಿಕ್ಕುತ್ತಿದ್ದ. ಅವರು ಹೊರಗೆ ಹೋದ ಮೇಲೆ ಅವರ ಬಟ್ಟೆಗಳನ್ನು ತೊಳೆಯುತ್ತಿದ್ದ. ಕಸ ಗುಡಿಸಿ, ಧೂಳು ಜಾಡಿಸಿ ಮನೆ ಸ್ವಚ್ಛ, ಓರಣವಾಗಿ ಇಡುತ್ತಿದ್ದ. ಅದು ಅವರ ಮನಸ್ಸನ್ನು ಗೆದ್ದಿತು.

ಆದರೆ ಅವನನ್ನು ಬೇಕಾರ್ ಇಡುವ ಇಷ್ಟ ಯಾರಿಗೂ ಇರಲಿಲ್ಲ. ಶಾಲೆ ಸಿಕ್ಕಿತ್ತು. ಊಟ ತಿಂಡಿ ಸಿಗುತಿತ್ತು. ಇತರ ಚಿಕ್ಕ ಪುಟ್ಟ ಖರ್ಚು ಇತ್ತು. ಸದಾನಂದ ಒಬ್ಬನೇ ಇದ್ದಾಗ ಒಂದು ದಿನ ಪಾಂಡೆ ನುಡಿದ. "ಖಡಕಿರೋಡ ಕಾಲನಿಯಿಂದ ನಮ್ಮ ಆಫೀಸಿಗೆ ಒಬ್ಬ ವೃದ್ಧ ಇಪ್ಪತ್ನಾಲ್ಕು ಊಟದ ಡಬ್ಬಿ ತಂದುಕೊಡುತ್ತಿದ್ದ. ಈಗ ಅವನಿಗೆ ಆರಾಮ ಇಲ್ವಂತೆ. ಒಂದು ತಿಂಗಳಿಗೆ ಒಂದು ಡಬ್ಬಿಗೆ ಮೂವತ್ತೈದು ರೂಪಾಯಿ. ಅಲ್ಲದೆ ಅವನು ತುಂಬ ಮುದುಕನಾಗಿದ್ದಾನೆ. ಅವನು ಮತ್ತೆ ಕೆಲಸಕ್ಕೆ ಬರುತ್ತಾನಂತ ಹೇಳೋಕ್ಕಾಗಲ್ಲ. ನೀ ಈ ಕೆಲ್ಸ ಮಾಡುವುದಾದರೆ ಹೇಳು. ನಿನ್ಗೆ ಹೇಗಿದ್ದರೂ ಸಂಜೆ ಶಾಲೆ. ಒಂದರಿಂದ ಆರು ಗಂಟೆಯವರೆಗೆ. ನೀನು ಹನ್ನೆರಡುವರೆವರೆಗೆ ಈ ಕೆಲಸದಿಂದ ಬಿಡುಗಡೆಯಾಗುತ್ತೀ. ನಿನ್ನ ಶಾಲೆಯೂ ಹತ್ತಿರದಲ್ಲೇ ಇದೆ"

ಸದಾನಂದ ಒಪ್ಪಿಕೊಂಡ. ಮರುದಿನದಿಂದಲೇ ಡಬ್ಬಿಗಳನ್ನು ಒಯ್ದು ಮುಟ್ಟಿಸತೊಡಗಿದ. ಅವನು ಒಂಬತ್ತನೆಯ ವರ್ಷದಿಂದಲೇ ಕೆರೆಯ ಮಣ್ಣು ತರುವ ಕೆಲಸ ಊರಿನಲ್ಲಿ ಮಾಡುತ್ತಿದ್ದ. ಆದ್ದರಿಂದ ಅವನಿಗೆ ಈ ಕೆಲಸ ಕಠಿಣ ಅನ್ನಿಸಲಿಲ್ಲ. ಅವನು ಬೆಳಿಗ್ಗೆ ಹತ್ತು ಗಂಟೆಗೆ ಖಾಲಿ ಡಬ್ಬಿಗಳನ್ನು ಹಿಡಿದುಕೊಂಡು ಖಡಕಿ ರೋಡ್ ಕಾಲನಿಗೆ ಹೋಗುತ್ತಿದ್ದ. ಡಬ್ಬಿ ಗಳನ್ನು ಸಂಗ್ರಹಿಸುತ್ತಿದ್ದ. ಅವುಗಳನ್ನು ಬುಟ್ಟಿಯಲ್ಲಿ ಜೋಡಿಸಿ ತಲೆಯ ಮೇಲಿಟ್ಟುಕೊಂಡು ಸ್ಟೇಷನ್ನಿನ ಹತ್ತಿರದ ಡಿಫೆನ್ಸ್ ಅಕೌಂಟ್ಸ್ ಆಫಿಸಿಗೆ ತರುತ್ತಿದ್ದ. ಒಂದು, ಒಂದೂ ಕಾಲು ಗಂಟೆಯ ದಾರಿ. ಹನ್ನೆರಡುವರೆ, ಹನ್ನೆರಡು ಮುಕ್ಕಾಲಿಗೆ ಕೆಲಸದಿಂದ ಬಿಡುಗಡೆಯಾಗುತ್ತಿದ್ದ.

ಅನಂತರ ಓಡಿ ಓಡಿ ಶಾಲೆಗೆ ಹೋಗುತ್ತಿದ್ದ. ಪುಸ್ತಕ, ಊಟ ಚೀಲದಲ್ಲಿ ಹಾಕಿ ತರುತ್ತಿದ್ದ.

ಶಾಲೆಗೆ ಮುಟ್ಟುವಾಗ ಬೆವರಿನಿಂದ ಪೂರ್ತಿ ಒದ್ದೆಯಾಗಿರುತ್ತಿದ್ದ, ಸುಸ್ತಾಗುತಿತ್ತು. ಅದರಿಂದ ನಿದ್ದೆ ಬಂದಂತಾಗುತಿತ್ತು.

ಬೆಳಿಗ್ಗೆ ಬುಟ್ಟಿ ತಲೆಯ ಮೇಲಿಟ್ಟುಕೊಂಡು ಹೊರಟಾಗ, ಅಥವಾ ಸಂಜೆ ಖಾಲಿ ಡಬ್ಬಿಗಳನ್ನು ಸಾಗಿಸುವಾಗ ಯಾರಾದರೂ ಶಾಲೆಯ ವಿದ್ಯಾರ್ಥಿಗಳು ದಾರಿಯಲ್ಲಿ ಆಕಸ್ಮಿಕ ಭೆಟ್ಟಿಯಾಗುತ್ತಿದ್ದರು. ಅವನಿಗೆ ಕೊಂಚ ನಾಚಿಕೆಯೆನಿಸುತಿತ್ತು.

ಆತ್ಮಾರಾಮನಿಗೆ ಈ ಗೆಳೆಯರು ಸದಾನಂದನಿಗೆ ಕೆಲಸಕ್ಕೆ ಹಚ್ಚಿದ್ದು ಹೇಳಿರಲಿಲ್ಲ. ಪಾಂಡೆ ಹೊರಗಿನಿಂದ ಹೊರಗೆ ಈ ಕೆಲಸ ಹಚ್ಚಿದ್ದ. ಅವನಿಗೆ ಈ ವಿಷಯ ಗೊತ್ತಾದಾಗ ಅವನು ಪಾಂಡೆಗೆ ಬಿಸಿ ಮಾಡಿದ. ಆದರೆ ಹೀಗೆ ಬಿಸಿ ಮಾಡುವುದರಲ್ಲಿ ಯಾವ ಆತ್ಮೀಯತೆಯೂ ಇಲ್ಲವೆಂಬುದು ಸದಾನಂದನಿಗೆ ಗೊತ್ತಾಯಿತು. ಮುಂದೆ ಒಂದು ದಾಖಲೆಗಾಗಿ ಈ ಅಟಾಟೋಪವಾಗಿತ್ತು. ಹನ್ನೊಂದು ಮತ್ತು ಹನ್ನೆರಡನೆಯ ಇಯತ್ತೆಯಲ್ಲಿದ್ದಾಗ ಅವನು ಡಬ್ಬಿಗಳನ್ನು ಹೊರುತ್ತಿದ್ದ.

ಹಣದ ವಿಷಯದಲ್ಲಿ ಈ ಗೆಳೆಯರು ದೊಡ್ಡ ಮನಸ್ಸಿನವರಾಗಿದ್ದರು. ಎಂದು ಹೇಳಲು ಬರುವುದಿಲ್ಲ. ಆದರೆ ಇತರ ವಿಷಯದಲ್ಲಿ ಅವನಿಗೆ ಅವರ ಸಂಪೂರ್ಣ ಸಹಕಾರ ಸಿಗುತ್ತಿತ್ತು. ಶಾಲೆಯ ಪ್ರಗತಿಯ ಬಗ್ಗೆ ಅಭ್ಯಾಸದ ಬಗ್ಗೆ ಆಗಾಗ್ಗೆ ಕೇಳುತ್ತಲಿದ್ದರು. ಅವನಿಗೆ ಅರ್ಥವಾಗದ್ದನ್ನು ತಿಳಿಸಿ ಹೇಳುತ್ತಿದ್ದರು. ಎಲ್ಲಿಲ್ಲಿಂದಲೋ ಅವನಿಗೆ ಅಗತ್ಯವಾಗಿ ಬೇಕಾದ ಪುಸ್ತಕಗಳನ್ನು ತಂದು ಕೊಡುತ್ತಿದ್ದರು. ರಾತ್ರೆ ಅಭ್ಯಾಸ ಮಾಡಲು ಒಳಕೋಣೆಯನ್ನು ಅವನಿಗೊಬ್ಬನಿಗೇ ಬಿಟ್ಟುಕೊಟ್ಟು 'ಮಲಗುವವರೆಗೆ ಚೆನ್ನಾಗಿ ಅಭ್ಯಾಸ ಮಾಡು' ಎಂದು ಹೇಳುತ್ತಿದ್ದರು. ಬಂದಾಗ ಸಾವಂತನು ತನ್ನಲ್ಲಿದ್ದ ಒಂದು ಜಮಖಾನೆ ಕೊಟ್ಟಿದ್ದ. ಆತ್ಮಾರಾಮನು ಒಂದು ಚಾದರ ಖರೀದಿಸಿ ತಂದುಕೊಟ್ಟಿದ್ದ. ಅವನು ಒಬ್ಬನೇ ರಾತ್ರಿ ಅಧ್ಯಯನ ಮಾಡುತ್ತ ತುಂಬ ತಡವಾಗಿ ಮಲಗುತ್ತಿದ್ದ. ಅವನು ಡಬ್ಬಿ ಮುಟ್ಟಿಸುವ ಕೆಲಸದಿಂದ ಅವನಿಗೆ ದೊರಕುವ ಎಂಟು ನೂರು ರೂಪಾಯಿಗಳನ್ನು ಸದಾನಂದ ಹೇಗೆ ಖರ್ಚು ಮಾಡುತ್ತಾನೆ ಎಂಬ ಬಗ್ಗೆಯೂ ಆ ಮೂವರೂ ಕಣ್ಣಿಡುತ್ತಿದ್ದರು. ಅವನು ತನ್ನ ಊಟಕ್ಕೆಂದು ಕೊಟ್ಟಷ್ಟು ಹಣ ಅವರು ತೆಗೆದುಕೊಳ್ಳುತ್ತಿದ್ದರು.

ಅಡಿಗೆಯ ಕೆಲಸ ಅವನೇ ಮಾಡುತ್ತಿದ್ದ. ಪಾತ್ರೆಗಳನ್ನು ಬೆಳಗುತ್ತಿದ್ದ. ಬೆಳಗ್ಗಿನಿಂದ ಸಂಜೆಯವರೆಗೂ ಒಂದೇ ಸಮ ಓಡಾಟ. ದುಡಿದುಡಿದು ಸಾಕಾಗುತ್ತಿತ್ತು. ಒಂದೊಂದು ಬಾರಿ ಸುಸ್ತಾಗಿ ಕಣ್ಣಿಗೆ ಮಂಪರು ಕವಿಯುತಿತ್ತು. ಬಡತನದಿಂದ ಜೀವ ಕಸಿಪಿಸಿಗೊಳ್ಳುತಿತ್ತು. ಕೆಲವು ಬಾರಿ ನಾಚಿಕೆಯಾಗುತಿತ್ತು. ಒಬ್ಬನೇ ಕೂತಾಗ ಯೋಚಿಸಿ ಕಣ್ಣೀರು ಹಾಕುತಿದ್ದ.

ಹನ್ನೆರಡನೆ ಇಯತ್ತೆಯಲ್ಲಿ ಅವನಿಗೆ ಪ್ರತಿಶತ ಅರವತ್ತೈದು ಅಂಕಗಳು ದೊರೆತವು. ಅವನಿಗೆ ಹೆಸರಾಂತ ಎಸ್.ಪಿ. ಕಾಲೇಜಿನಲ್ಲಿ ಪ್ರವೇಶ ಸಿಕ್ಕಿತು. ಎರಡು ವರ್ಷ ಡಬ್ಬಿ ಹೊತ್ತರೂ ದಾಖಲೆ ಪಡೆಯುವಾಗ ಆತ್ಮಾರಾಮನಿಂದ ಸ್ವಲ್ಪ ಹಣ ಸಾಲ ಪಡೆಯಬೇಕಾಯಿತು.

ಕಾಲೇಜು ಬೆಳಗ್ಗಿನ ಸಮಯ ನಡೆಯುತಿತ್ತು. ಈಗ ಡಬ್ಬಿ ಹೊರುವುದು ಆಗುತ್ತಿರಲಿಲ್ಲ. ಈ ಮಧ್ಯೆ ಅವನು ಮೂರು ತಿಂಗಳು ನಿರುದ್ಯೋಗಿಯಾಗಿದ್ದ. ಹಣ ಕೊಡದೆ ಊಟ

ಮಾಡುವುದು ಅವನಿಂದಾಗುತ್ತಿರಲಿಲ್ಲ. ಇಲ್ಲಿ ಕಾಲೇಜಿಗೆ ಹೋಗಲು ಬಸ್ಸಿಗೆ ಹಣ ಕೊಡಬೇಕಾಗುತ್ತಿತ್ತು. ಹಣವಿಲ್ಲದಾಗ ಅವನು ಕಾಲೇಜಿಗೆ ಓಡುತ್ತ, ನಡೆಯುತ್ತ ಹೋಗುತ್ತಿದ್ದ. ಈ ಕಷ್ಟಗಳನ್ನೆಲ್ಲ ನೋಡಿ ಎಷ್ಟೋ ಬಾರಿ ಅವನಿಗೆ ಕಾಲೇಜು ಬಿಟ್ಟು ಊರಿಗೆ ಹೊರಟು ಬಿಡೋಣ ಎಂದು ಅನ್ನಿಸುತಿತ್ತು. ಗಡಿಗೆ ಮಾಡಿ ಹೊಟ್ಟೆ ತುಂಬಿಕೊಳ್ಳುವುದು. ಆದರೆ ಊರಲ್ಲಿ ಎಲ್ಲರೂ ಹೇಳುತ್ತಿದ್ದರು 'ಈ ಕುಂಬಾರ ದಂಧೆಯಲ್ಲೀಗ ಸುಖವಿಲ್ಲ' ಅಂತ. ಅದರಲ್ಲೂ ಒಂದು ದಿನ ಪಾಂಡೆ ಹೇಳಿದ್ದ. "ಹನ್ನೆರಡನೆ ಇಯತ್ತೆ ಮುಗಿದರೆ ಎಲ್ಲಾದರೂ ಒಂದು ಚಿಕ್ಕ ನೌಕರಿ ಸಿಕ್ಕೀತು" ಅಂತ. ಆ ಮಾತು ಕೇಳಿಯೇ ಅವನು ಅರ್ಧ ಎದೆಗುಂದಿದ್ದ.

ಇಲ್ಲಿಯೂ ಅವನಿಗೆ ಒಂದು ಒಪ್ಪತ್ತಿನ ನೌಕರಿಯೇ ಬೇಕಾಗಿತ್ತು. ಅದು ಹುಡುಕಿ ಹುಡುಕಿ ಸಾಕಾಗಿತ್ತು. ಒಂದು ದಿನ ಅವನು ತನ್ನ ಕಾಲೇಜಿನ ತರುಣ ಉಪನ್ಯಾಸಕ ನೊಬ್ಬನಿಗೆ ತನ್ನ ತೊಂದರೆ ಹೇಳಿಕೊಂಡ. ತನ್ನ ಕಷ್ಟ ಹೇಳಿಕೊಳ್ಳುವಾಗ ಅವನ ಕಂಠ ಗದ್ಗದಿತವಾಯಿತು. ಕಣ್ಣೆವೆಗಳು ಒದ್ದೆಯಾದವು.

ಆ ಉಪನ್ಯಾಸಕ ಹೇಳಿದ 'ಕಷ್ಟಗಳು ಗರ್ಭಿಣಿ ಹೆಂಗಸಿನಂತೆ ಇರುತ್ತವೆ. ಈ ಕಷ್ಟಗಳನ್ನು ಸಹಿಸಿದರೆ ಮಾತ್ರ ಮುಂದೆ ಸುಖದ ದಿನಗಳು ಬರುತ್ತವೆ."

ಮೂರೇ ದಿನಗಳಲ್ಲಿ ಆ ಉಪನ್ಯಾಸಕ ಸದಾನಂದನನ್ನು ಕರೆಸಿಕೊಂಡ. "ಇಲ್ಲಿ ಹತ್ತಿರದಲ್ಲಿ ಸದಾಶಿವ ಪೇಟೆಯಿಂದ 'ಯಶಶ್ರೀ' ಎನ್ನುವ ವಾರ ಪತ್ರಿಕೆ ಹೊರಬರುತ್ತಿದೆ. ನನ್ನ ಚಿಕ್ಕಪ್ಪ ಅಲ್ಲಿ ಸಹ ಸಂಪಾದಕನಾಗಿದ್ದಾನೆ. ಅವರಿಗೊಬ್ಬ ಹೆಲ್ಪರ್ ಬೇಕಾಗಿದ್ದಾನೆ. ಸಾಪ್ತಾಹಿಕ ಪತ್ರಿಕೆಗಳಿಗೆ ಕವರ್ ಹಾಕಿ ವಿಳಾಸದ ಚೀಟಿ ಅಂಟಿಸಲು ಮತ್ತು ಅವನ್ನೊಯ್ದು ಅಂಚೆ ಡಬ್ಬಿಯಲ್ಲಿ ಹಾಕಲು. ಬೇರೆ ಬೇರೆ ಊರಿಗೆ ಹೋಗುವ ಪತ್ರಿಕೆಗಳ ಕಟ್ಟು ಒಯ್ದು ಬಸ್‌ಸ್ಟಾಂಡಿಗೆ ತಲುಪಿಸುವುದಿರುತ್ತದೆ."

"ಯಾವ ವೇಳೆಯಲ್ಲಿ? ಎಷ್ಟು ಹೊತ್ತು ಕೆಲಸ ಇರ್ತದ?"

"ಸಂಜೆಯ ಮೂರು ನಾಲ್ಕು ಗಂಟೆಯಾದ್ರೂ ಕೆಲಸ ಮಾಡಬೇಕಾಗ್‌ಬಹುದು. ಅಲ್ಲಿ ಇನ್ನೂ ಕೆಲಸ ಮಾಡುವ ಮಂದಿ ಇದ್ದಾರೆ. ನಿನ್ನ ತೊಂದರೆ ನಾನು ನನ್ನ ಚಿಕ್ಕಪ್ಪನಿಗೆ ಹೇಳಿದ್ದೇನೆ. ವಾರಕ್ಕೆ ಇನ್ನೂರು ರೂಪಾಯಿ ಕೊಡುತ್ತೇವೆ ಅಂದಿದ್ದಾರೆ."

ಮುಂದಿನ ಮೂರು ವರ್ಷ ಅವನು ಆ ವಾರಪತ್ರಿಕೆಯಲ್ಲಿ ಕೆಲಸ ಮಾಡಿ ಕಾಲೇಜಿನಲ್ಲಿ ಓದುತ್ತಿದ್ದ. ಸದಾಶಿವಪೇಟೆಯಲ್ಲಿ ಶನಿಪಾರಾದ ಹತ್ತಿರ 'ಅನ್ನಬ್ರಹ್ಮ' ಎಂಬ ಒಂದು ಖಾನಾವಳಿಯಿತ್ತು. ಅಲ್ಲಿ ಅರ್ಧ ಊಟ ಮತ್ತು ಪೂರ್ತಿ ಊಟ ಎಂಬ ಮೂರು ಬಗೆಯ ಊಟ ಸಿಗುತಿತ್ತು. ಅಂದು ಅಂದರೆ ತೊಂಬತ್ನಾಲ್ಕು, ತೊಂಬತ್ತೈದನೆಯ ಸಾಲಿನಲ್ಲಿ ಅರ್ಧ ಊಟಕ್ಕೆ ಏಳು ರೂಪಾಯಿ, ಇನ್ನೊಂದು ಊಟಕ್ಕೆ ಹನ್ನೆರಡು ರೂಪಾಯಿ ಮತ್ತು ಫುಲ್ ಊಟಕ್ಕೆ ಹದಿನೆಂಟು ರೂಪಾಯಿ ತೆಗೆದುಕೊಳ್ಳುತ್ತಿದ್ದರು. ಅರ್ಧ ಊಟಕ್ಕೆ ಕೇವಲ ಎರಡು ರೊಟ್ಟಿ ಅಥವಾ ಚಪಾತಿ ಸಾರು, ಅನ್ನ, ಪಲ್ಲೆ ಸಿಗುತಿತ್ತು. ಸದಾನಂದ ಕಾಲೇಜು ಬಿಟ್ಟೊಡನೆ ಅಲ್ಲಿ ಅರ್ಧ ಊಟ ಮಾಡಿ ವಾರಪತ್ರಿಕೆಯ ದುಡಿತಕ್ಕೆ ಹೋಗುತ್ತಿದ್ದ. ಆರು ಗಂಟೆಯವರೆಗೆ ಅಲ್ಲಿ ಕೆಲಸ ಮಾಡಿ ಆರುವರೆ ಏಳು ಗಂಟೆಗೆ ರೂಮಿಗೆ ಬರುತ್ತಿದ್ದ.

ಈಗ ಆ ಮೂವರ ಪ್ರೀತಿಗೆ, ವಿಶ್ವಾಸಕ್ಕೆ ಸದಾನಂದ ಪಾತ್ರನಾಗಿದ್ದ. ಅವರು ಅವನನ್ನು ಸಹೋದರನಂತೆಯೇ ನೋಡಿಕೊಳ್ಳುತ್ತಿದ್ದರು. ಅವನಿಂದ ಅವರು ವಿದ್ಯುತ್ ದೀಪದ, ನೀರಿನ, ಬಾಡಿಗೆಯ ಹಣ ತೆಗೆದುಕೊಳ್ಳುತ್ತಿರಲಿಲ್ಲ. ಊಟದ ಬಾಬ್ತು ಅವನು ಕೊಟ್ಟಷ್ಟು ಹಣ ತೆಗೆದುಕೊಳ್ಳುತ್ತಿದ್ದರು. ಅವನು ಅಡಿಗೆ ಮಾಡುವಾಗ, ಪಾತ್ರೆ ತಿಕ್ಕುವಾಗ ಹೆಚ್ಚು ಸಮಯ ಕಳೆದುಕೊಳ್ಳುತ್ತಿದ್ದರೆ ಅವರು ಅವನಿಗೆ 'ಹೋಗು, ಅಭ್ಯಾಸ ಮಾಡು ಹೋಗು' ಎಂದು ದಬಾಯಿಸುತ್ತಿದ್ದರು. ಹೊರಗೆ ಹೋದಾಗ ಯಾರಾದರೊಬ್ಬರು ಹೊಸ ಶರ್ಟು ತಂದು 'ಸೇಲಿನಲ್ಲಿ ಒಳ್ಳೆ ಅಂಗಿ ಸಿಕ್ಕಿತು' ಎಂದು ಹೇಳಿ ಅವನಿಗೆ ಕೊಡುತ್ತಿದ್ದರು.

ಅವರಲ್ಲಿ ಪ್ರಹ್ಲಾದ ಸಾವಂತ ತುಂಬ ಅಚ್ಚುಕಟ್ಟಿನ, ಶಿಸ್ತಿನ ವ್ಯಕ್ತಿಯಾಗಿದ್ದ. ನಿತ್ಯದ ಕೆಲಸದಲ್ಲಿ, ವ್ಯವಹಾರದಲ್ಲಿ, ಬಟ್ಟೆ ಬರೆ ಧರಿಸುವುದರಲ್ಲಿ ಶಿಸ್ತು-ಸ್ವಚ್ಛತೆ ಕಾಪಾಡುತ್ತಿದ್ದ. ಹಣದ ವ್ಯವಹಾರದಲ್ಲೂ ಕಟ್ಟುನಿಟ್ಟು. ಒಂದು ಪೈಸೆ ಅತ್ತಿತ್ತ ಆಗದಂತೆ ನೋಡಿಕೊಳ್ಳುತ್ತಿದ್ದ. ನರೇಶ ಪಾಂಡೆ ಮಾತ್ರ ಕೊಂಚ ಜಿಪುಣನಾಗಿದ್ದ. ತುಂಬ ಮಾತಾಡುತ್ತಿದ್ದ. ಹಲಬುವುದರಲ್ಲಿ ಆಸಕ್ತಿ ಅವನಿಗೆ. ತನ್ನ ಊರಿನ ಜನರ ದೊಡ್ಡಸ್ತಿಕೆ ಹೇಳುತ್ತಿರುತ್ತಿದ್ದ. ಅಡಿಗೆಯ ಕೆಲಸದಲ್ಲಿ ಕೈ ಹಚ್ಚದಿದ್ದರೂ ಅಡಿಗೆಯ ಸಾಮಾನು ತರುವ ವ್ಯವಹಾರದಲ್ಲಿ ಮಾತ್ರ ಅವನು ತಲೆ ಹಾಕುತ್ತಿರಲಿಲ್ಲ. ಆತ್ಮಾರಾಮ ಸ್ವಲ್ಪ ಮ್ಯಾಚ್ಯುಅರ್ ನಂತೆ ಕಾಣುತ್ತಿದ್ದ. ಅವನ ಮಾತಿಗೆ ಅವರು ಬೆಲೆ ಕೊಡುತ್ತಿದ್ದರು. ನಿಜಕ್ಕೂ ಅವನು ಶುಭ್ರಮನಸ್ಕನಾಗಿದ್ದ. ಅವನ ಮಾತು ಕಡಮೆಯಾದುದರಿಂದ ಅವನ ಮನಸ್ಸಿನಲ್ಲಿ ಏನಿದೆಯೆಂಬುದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಏನಾದರೂ ತಪ್ಪಾದರೆ ಆತ್ಮಾರಾಮ ಸದಾನಂದನ ಮೇಲೆ ಬಿಸಿಯಾಗಿ ಬೆವರು ಇಳಿಸುತ್ತಿದ್ದ. ಆಗ ಸದಾನಂದ ಅಂಜಿ ಥರಥರಿಸುತ್ತ ವಿನೀತನಾಗಿ "ಕ್ಷಮಿಸು, ತಪ್ಪಾಯ್ತು ಆತ್ಮಾರಾಮಣ್ಣ" ಎನ್ನುತ್ತಿದ್ದ. ಅವನು ಹಣ ಕೊಡಲು ಹಿಂಜರಿಯುತ್ತಿದ್ದ ಅಂತಲ್ಲ. ಆದರೆ ಕೊಡುವಾಗ ಎಲ್ಲ ವಿವರ ಪಡೆದು ಕೊಡುತ್ತಿದ್ದ.

ಹೇಗಾದರಿರಲಿ ಈ ಬಡ ಪ್ರಾಮಾಣಿಕ ಹುಡುಗನಿಗೆ, ಓದಲು ಸಹಾಯ ಮಾಡಬೇಕು ಎಂಬ ಒಂದು ಅಲಿಖಿತ ನಿರ್ಧಾರಕ್ಕೆ ಆ ಮೂವರು ಬಂದಿದ್ದರು.

ಮೊನ್ನೆ ಸದಾನಂದ ಊರಿಗೆ ಬಂದಿದ್ದಾಗ ಸೀತವ್ವನಿಗೆ ಅವನು "ನನ್ನ ಚಮಡಿಯ ಜೋಡು ಮಾಡಿ ಹಾಕಿದ್ರೂ ಆ ಮೂರು ಮಂದಿ ಋಣ ತೀರಿಸಾಕ ಆಗಾಂಗಿಲ್ಲ" ಅಂತ ಹೇಳುತ್ತಿದ್ದ.

*  *  *

**ಮೊ**ದಲಿನಂತೆ ಗಡಿಗೆಗಳ ಮಾರಾಟವಾಗುತ್ತಿರಲಿಲ್ಲ. ಆದರೂ ಕುಂಬಾರರು ನಿಧಾನವಾಗಿ ಗಡಿಗೆಗಳನ್ನು ತಯಾರಿಸುತ್ತಿದ್ದರು. ಮೊದಲು ತಿಂಗಳಿಗೆ ಎರಡು ಬಾರಿ ಆವಿಗೆ ಉರಿಸುತ್ತಿದ್ದರು. ಈಗ ತಿಂಗಳಿಗೆ ಒಂದು ಬಾರಿ ಉರಿಸಿದರೆ ಸಾಕು. ಕೇರಿ ಪರೆ ತೆಗೆದೊಗೆಯಲು ಸುರುಳಿ ಹಾಕಿಕೊಂಡು ಬಿದ್ದ ಹಾವಿನಂತಾಗಿದೆ. ಆದರೂ ಹೊಟ್ಟೆ ಹಸಿಯುವುದು ನಿಲ್ಲುತ್ತಿರಲಿಲ್ಲ. ಕುಂಬಾರ ಹಸಿವೆಯಾಗುತ್ತಿದೆಯೆಂದು ಬದುಕುತ್ತಿದ್ದ ಕೈಕಾಲು ಬಡಿಯುತ್ತಿದ್ದ. ಪುರುಶ್ಯಾ ಸಿಡುಕಿನಿಂದ ಆಗಾಗ್ಗೆ 'ನನ್ನ ಊರಾಗ ಅಗಸ ಬೇಕಾರ' ಅಂತ ಹೇಳುವುದು ನಿಜವಾಗುತ್ತಿದೆ.

ಆದರೂ ನಿತ್ಯದ ಚಟದಂತೆ ಕುಂಬಾರರ ಮನೆಗಳಿಂದ ಗಡಿಗೆ ತಟ್ಟುವ ಸದ್ದು ಕೇಳಿ ಬರುತ್ತಿತ್ತು. ಇಂಥ ಸದ್ದು ಕೇಳಿದ ಹೊರತು ಕುಂಬಾರರಿಗೆ ಸಮಾಧಾನವಾಗುತ್ತಿರಲಿಲ್ಲ, ನಿದ್ದೆ ಬರುತ್ತಿರಲಿಲ್ಲ.

ಆದರೆ ಈ ದಿನಗಳಲ್ಲಿ ಶಂಕರ ಮತ್ತು ರಾಮಚಂದ್ರನ ಸದ್ದು ಕಡಮೆಯಾಗಿತ್ತು. ಸುಮಾರು ಒಂದು ತಿಂಗಳನಿಂದ ಅವರು ಗಡಿಗೆತಟ್ಟಿದ ಸದ್ದು ಕೇಳಿ ಬರಲಿಲ್ಲ. ಹಸಿ ಗಡಿಗೆಗಳನ್ನು ಒಣಗಲು ಇಟ್ಟದ್ದೂ ನೋಡಲಿಲ್ಲ. ಪೂರ್ತಿದಿನ ಅಲ್ಲಿ ಕುಳಿತು. ನಿಂತು, ಇನ್ನೊಬ್ಬರ ಮೇಲೆ ಬೇಸರಪಟ್ಟು ದಿನಗಳೆಯುತ್ತಿದ್ದರು. ಮುಸ್ಸಂಜೆಯಾದ ಕೂಡಲೆ ಅವರಿಬ್ಬರು ಎಲ್ಲಿಗೋ ಹೋಗಿ ಅಪರಾತ್ರಿಯಲ್ಲಿ ಬರುತ್ತಾರೆಂದು ಹೇಳುತ್ತಿದ್ದರು.

ನಿಜಕ್ಕೂ ಕೇರಿ ಒಂದು ಬಗೆಯ ದುಗುಡದಲ್ಲಿಯೇ ಇತ್ತು. ಕೇರಿಯ ಮೇಲೆ ಆಪತ್ತೇನಾದರೂ ಬರದಿದ್ದರೆ ಸಾಕು. ಹಾಗೆ ನೋಡಿದರೆ ಮಾವಿನ ಮರ ಕಡಿದಂದಿನಿಂದ ಕೇರಿಯ ಅವನತಿ ಪ್ರಾರಂಭವಾಗಿತ್ತು. ಮೊದಲು ಮರದ ನೆರಳಿನಲ್ಲಿರುತ್ತಿದ್ದುದರಿಂದ ಎಲ್ಲರೂ ಒಂದು ಕಡೆ ಝೂಂಡಾ ಊರಿದಂತೆ ಒಗ್ಗಟ್ಟಾಗಿ ಇದ್ದಂತೆ ಜನರಿಗೆ ಕಾಣುತ್ತಿದ್ದರು. ಈಗ ಮತ್ತೊಂದು ಹೊಸ ಭಯ ಕಾಡುತ್ತಲಿದೆ.

ಒಂದು ದಿನ ಮುಸ್ಸಂಜೆಯ ಹೊತ್ತಿಗೆ ಅವರು ಹೊರಗೆ ಹೋದರು. ಇತ್ತ ಕಡೆ ಆ ಗುಡಿಸಲಿನಲ್ಲಿದ್ದ ಧರ್ಮುನ ಅಜ್ಜಿ ಕೊನೆಯುಸಿರೆಳೆದಳು. ಅವಳು ಕಳೆದ ಎರಡ-ಎರಡೂವರೆ ವರ್ಷ ಕೈಯಲ್ಲಿ ಕೋಲು ಹಿಡಿದು ಬಾಗಿಲಲ್ಲೆ ಬಿದ್ದುಕೊಂಡು ಬಾಯ್‌ಜಾಳ ರಕ್ಷಣೆ ಮಾಡುತ್ತಿದ್ದಳು. ಅವಳ ಉಸಿರು ನಿಂತ ಕೂಡಲೆ ಬಾಯ್‌ಜಾ ಓಡುತ್ತ ಬಂದು 'ಬರ್ರಿ, ನೋಡ್ರಿ...ಮಾತಾಡಿದ್ರೆ ಆಕಿ ಮಾತಾಡೂದಿಲ್ಲ. ಅಲಗಾಡಿಸಿದ್ರ ಅಲ್ಲಾಡೂದಿಲ್ಲ, ಬಾಯಿ 'ಆಂ, ಮಾಡಿ ಮಲಗ್ಯಾಳ' ಎಂದಳು. ಕೇಳಿದವರೆಲ್ಲರೂ ಬಾಯ್‌ಜಾಳ ಗುಡಿಸಲಿಗೆ ನುಗ್ಗಿದರು.

ಆದರೆ ಶಂಕರ ಮತ್ತು ರಾಮಚಂದ್ರ ಕೇರಿಯಲ್ಲಿರಲಿಲ್ಲ. ಹೆಣ ಧರ್ಮುನ ಮನೆಗೆ ತಂದಿಟ್ಟು ಬಹಳ ಹೊತ್ತಿನವರೆಗೆ ಅವರಿಗಾಗಿ ಕಾಯ್ದು ಕುಳಿತರು. ಅವಳು ವರಸೆಯಲ್ಲಿ ರಾಮಚಂದ್ರನಿಗೂ ಅಜ್ಜಿಯಾಗಿದ್ದಳು.

ಅವರು ತುಂಬ ತಡರಾತ್ರಿ ಬಂದರು, ಅರೆ ಎಲ್ಲಿ ಹೋಗಿದ್ರಿ?... ಎಲ್ಲಿಲ್ಲ. ಏನು ತಂದ್ರಿ... ಏನಿಲ್ಲ! ಜನರಲ್ಲಿ ಅವರಿಬ್ಬರ ಬಗ್ಗೆ ಒಂದು ರೀತಿಯ ಸಂಶಯ ಮತ್ತು ಗೊಂದಲ ಉಂಟಾಗಿತ್ತು. ಇವರಿಬ್ಬರೂ ಈ ಅಪರಾತ್ರಿಯವರೆಗೂ ಎಲ್ಲಿಗೆ ಹೋಗುತ್ತಾರೆ. ಏನು ಮಾಡುತ್ತಾರೆ. ಕಳವು ಗಿಳುವು ಮಾಡಲು ಹೋಗುತ್ತಾರೆಯೋ, ದೆವ್ವದಂತೆ ಸುತ್ತಾಡುತ್ತಾರೆಯೇ ಎಂಬುದು ತಿಳಿಯುತ್ತಿರಲಿಲ್ಲ.

ಕುಂಬಾರರು ಎಂದೂ ರಾತ್ರಿಯ ಹೊತ್ತು ಹೆಣ ಮನೆಯಲ್ಲಿಟ್ಟಿಕೊಂಡಿದ್ದಿಲ್ಲ. ಆದರೆ ಈ ಬಾರಿ ಮಾತ್ರ ಹೆಣ ಪೂರ್ತಿ ರಾತ್ರಿ ಮನೆಯಲ್ಲಿಟ್ಟುಕೊಳ್ಳಬೇಕಾಯಿತು. ಕುಂಬಾರರಿಗೆ ದಾರಿ, ಊರು, ಪೇಟೆ, ದವಾಖಾನೆಗಳು ದೂರವಿದ್ದರೂ ಸ್ಮಶಾನ ಮಾತ್ರ ಹತ್ತಿರದಲ್ಲಿತ್ತು. ಐದು ನಿಮಿಷ ನಡೆದು ಹೋದರೆ ಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಸ್ಮಶಾನ. ಇದು ಇಡೀ ಊರಿಗೆ ಸಂಬಂಧಿಸಿದ ಸ್ಮಶಾನ. ವರ್ಷವಿಡೀ ಒಂದಲ್ಲ ಒಂದು ಹೆಣದ ಹೊಗೆ ಕುಂಬಾರರು ತಮ್ಮ ಮನೆಯ ಮುಂದೆ ಕುಳಿತು ನೋಡುತ್ತಿರುತ್ತಿದ್ದರು. ಆದ್ದರಿಂದಲೇ

ಕುಂಬಾರರು ಹೆಚ್ಚಾಗಿ ಮರಣಕ್ಕೆ, ದೆವ್ವಗಳಿಗೆ ಅಂಜುತ್ತಿರಲಿಲ್ಲ. ಹಿಂದೊಮ್ಮೆ ಧರ್ಮರ್ಜುನ ತಮ್ಮ ಶಾಣು ತನ್ನ ಹೆಂಡತಿಯ ದೆವ್ವವೆಲ್ಲಿದೆಯೆಮದು ಹುಡುಕುತ್ತ ಓಡಾಡುತ್ತಿದ್ದ.

ಆ ದಿನ ಅವರು ಬರುವುದರಲ್ಲಿ ಮಧ್ಯರಾತ್ರಿ ದಾಟಿ ಹೋಗಿತ್ತು. ಹೆಣ ಮನೆಯಲ್ಲಿಯೇ ಉಳಿಯಿತು. ಬೆಳಿಗ್ಗೆ ಒಯ್ದು ಸುಟ್ಟು ಬಂದರು.

ಶಂಕರ ಮತ್ತು ರಾಮಚಂದ್ರ ಹಗಲು ಹೊತ್ತಿನಲ್ಲಿ ಏನೂ ಕೆಲಸ ಮಾಡುತ್ತಿರಲಿಲ್ಲ. ಸಂಜೆಯ ಸಮಯ ಎಲ್ಲಿಗೆ ಹೋಗುತ್ತಿದ್ದರೊ ಯಾರಿಗೂ ಹೊತ್ತಿಲ್ಲ. ಆದರೆ ಮೂಟೆ ಕಟ್ಟಿ ಅಕ್ಕಿ ತರುತ್ತಿದ್ದರು. ಒಳ್ಳೊಳ್ಳೆ ಮೀನು ತಂದು ತಿನ್ನುತ್ತಿದ್ದರು. ಮಧ್ಯೆ ಮಧ್ಯೆ ಕಾರವಾರಕ್ಕೆ ಹೋಗಿ ಸಾಮಾನುಗಳನ್ನೆಲ್ಲ ತರುತ್ತಿದ್ದರು. ಅವರು ಸ್ನಾನ ಮಾಡುವಾಗ ಬಚ್ಚಲಿನಿಂದ ಬರುವ ಸಾಬೂನು ಪರಿಮಳವೂ ಮೂಗಿಗೆ ಅಡರುತಿತ್ತು.

ಸುಮಾರು ಎರಡು ತಿಂಗಳು ಹೀಗೆಯೇ ಸಾಗಿತ್ತು. ಸೀತವ್ವನಿಗೆ ಈ ದಿನಗಳಲ್ಲಿ ರಾತ್ರ ಸರಿಯಾಗಿ ನಿದ್ದೆ ಬರುತ್ತಿರಲಿಲ್ಲ. ಮೊಮ್ಮಕ್ಕಳು ಗತಿಯೇನು? ಸೊಸೆ ಮುಂದೆ ಹೇಗೆ ಬದುಕಬೇಕು ತನ್ನ ವೃದ್ಧಾಪ್ಯದಲ್ಲಿ ಹಾಸಿಗೆ ಹಿಡಿದು ಮಲಗದಿದ್ದರೆ ಸಾಕು... ಹೀಗೆ ಒಂದಲ್ಲ ಒಂದು ದಿನ ಮಧ್ಯರಾತ್ರಿಯ ಸಮಯ ಯಾರೊ ಧಪ್... ಧಪ್...ಓಡಿದ ಸದ್ದು ಕೇಳಿ ಬಂತು. ಅದರ ಹಿಂದೆ ಮತ್ತೆ ಓಡುತ್ತಿರುವ ಕಾಲಿನ ಸದ್ದು ಬಾಗಿಲ ಸಂದಿನಿಂದ ಸ್ವಲ್ಪ ಬೆಳಕೂ ಒಳಸರಿಯಿತು. "ಯಾರು... ಯಾರಲ್ಲಿ" ಎಂದು ಕೇಳುತ್ತ ಅವಳು ಹೊರಗೆ ಬಂದಳು. "ತಾರಾ... ಅಂಗಳದಿಂದ ಯಾರೋ ಓಡಿ ಹೋದಂಗಾಯ್ತು ನೋಡು" ಎಂದಳು.

"ನೀ ಸುಮ್ಕ ಬಿದ್ದೀರವ್ವ, ನಿನಗ್ಯಾಕ ಬೇಕು ಊರ ಉಸಾಬರಿ? ನಮ್ಮ ಮನ್ಯಾಗೂ ಯಾರಾದ್ರೂ ನುಗ್ಗಬಹುದು" ಸೊಸೆ ನುಡಿದಳು. ಆದರೂ ಅವಳು ಅಂಗಳದಲ್ಲಿ ಬಂದು ನಿಂತುಕೊಂಡಳು. ರಾಮಚಂದ್ರನ ಮನೆಯ ಕಡೆ ಯಾರೊ ಯಾರಿಗೊ ದಬಾಯಿಸುತ್ತಿದ್ದ. "ಹೊರೆ ಒಗೆದು ಇಲ್ಲಿ ಓಡಿ ಬಂದಿದ್ದೀರಲ್ವೆ ? ನಮಗೆ ನಿಮ್ಮ ಹಿಂದೆ ಓಡುವಂತೆ ಮಾಡ್ತೀರೇನು. ನಿಮಗೆ ಬಿಡೂದಿಲ್ಲ. ಅದೇ ಹೊರೆಗಳನ್ನು ನಿಮ್ಮ ತಲೆಯ ಮೇಲೆ ಇಟ್ಟು ಪೊಲೀಸ್ ಸ್ಟೇಷನ್‌ಗೆ ಕರ್‌ಕೊಂಡ್ ಒಯ್ತೀವಿ"

ಸೀತವ್ವ ರಾಮಚಂದ್ರನ ಮನೆಯ ಹತ್ತಿರ ಹೋದಳು. ಇಬ್ಬರು ಧಾಂಡಿಗ ಖಾಕಿ ತೊಟ್ಟ ಪೊಲೀಸರು ಕೈಯಲ್ಲಿ ಬ್ಯಾಟರಿ ಇನ್ನೊಂದು ಕೈಯಲ್ಲಿ ಲಾಠಿ ಹಿಡಿದು ಸೈತಾನರಂತೆ ನಿಂತಿದ್ದರು. ರಾಮಚಂದ್ರ ಮತ್ತು ಶಂಕರರು ಮುದ್ದೆಯಾಗಿ ಜಗಲಿಯ ಮೇಲೆ ಕೂತಿದ್ದರು. ಬಾಗಿಲಲ್ಲಿ ರಾಮಚಂದ್ರನ ಹೆಂಡತಿ ಸೀಮೆಎಣ್ಣೆ ದೀಪ ಕೈಯಲ್ಲಿ ಹಿಡಿದುಕೊಂಡು ನಿಂತಿದ್ದಳು. ಅವಳು ಅತ್ತುಕರೆದು ಪೊಲೀಸರಿಗೆ ಏನೇನೊ ಹೇಳುತ್ತಿದ್ದಳು.

ಅಷ್ಟರಲ್ಲಿ ಆ ನಿಶ್ಯಬ್ದ ರಾತ್ರಿಯಲ್ಲಿ ಕೇಳಿ ಬರುವ ಮಾತಿನ ಸದ್ದು ಕೇಳಿ ಕೆಲವರು ಹೊರಗೆ ಬಂದು ನಿಂತುಕೊಂಡಿದ್ದರು. ಪೊಲೀಸರು ಅಲ್ಲಿ ಸೇರಿದ ಜನರಿಗೆ ಹೇಳುತ್ತಿದ್ದರು. "ನಾವು ಇಲ್ಲಿಯೆ ಹೊಳೆಯ ಆಚೆ ಒಂದು ಮರದ ಕೆಳಗೆ ಪಹರೆ ಮಾಡುತ್ತ ನಿಂತ್ಕೊಂಡಿದ್ದೀವಿ. ಇವರು ತಲೆಯ ಮೇಲೆ ಸರಾಯಿ ಹೊರೆ ಹೊತ್ತುಕೊಂಡು ಬಂದರು. ನಾವು ತಡೆಯುವುದರಲ್ಲಿ ಸರಾಯಿ ಹೊರೆ ಅಲ್ಲೇ ಒಗೆದು ಓಡಿ ಬಂದಿದ್ದಾರೆ ನೋಡಿ. ನಾವೂ ಇವರ ಬೆನ್ನು ಬಿಡಲಿಲ್ಲ. ಬ್ಯಾಟ್ರಿ ಬೆಳಕಿನಲ್ಲಿ ಓಡಿ ಬಂದು ಈ ಮನೆಯಲ್ಲಿ ಹೊಕ್ಕಿದ್ದು ನೋಡಿದ್ವಿ"

ರಾಮಚಂದ್ರ ಮತ್ತು ಶಂಕರ ಕಳೆದ ಎರಡು ತಿಂಗಳಿನಿಂದ ಗೋವೆಯ ಸೀಮೆಯಿಂದ ಸರಾಯಿ ಹೊರೆ ತಂದು ಸದಾಶಿವಗಡದ ಒಂದು ಸ್ಥಳಕ್ಕೊಯ್ದು ಮುಟ್ಟಿಸುವ ಕೆಲಸ ಮಾಡುತ್ತಿದ್ದರು. ಸೀತವ್ವ ಪೊಲೀಸರ ಕಾಲು ಹಿಡಿದಳು. ಅಲ್ಲಿ ಕೂಡಿದ ಜನರೂ ಪೊಲೀಸರ ಕಾಲಿಗೆ ಬಿದ್ದರು. ಸೀತವ್ವ "ಈವತ್ತಿನ ತನಕ ಪೊಲೀಸರು ಕುಂಬಾರವಾಡೆಗೆ ಬಂದಿದ್ದಿಲ್ಲ. ಕುಂಬಾರರು ಯಾರಿಗೂ ಕೆಟ್ಟದ್ದು ಮಾಡಿಲ್ಲ. ಯಾರ ಮನೆಯ ಹಿತ್ಲಾಗಿನ ಒಂದ್ ಮಿಡಿಗೂ ಕೈ ಹಚ್ಚಲಿಲ್ಲ. ಇದರಿಂದ ಕುಂಬಾರ ಮಂದಿ ಹೆಸರ ಕೆಡತೈತಿ. ಹೊಟ್ಟಿಗಾಗಿ ಇವರಿಬ್ಬರು ಸ್ವಲ್ಪ ಹೇಲ್ ತಿಂದಿರಭೌದು. ಇದೊಂದು ದೊಡ್ಡ ಸುದ್ದಿ ಮಾಡಿ ಮರ್ವಾದಿ ತಗೀವ್ಯಾಡ್ರಿ. ಈಗ ಕುಂಬಾರರ ಧಂದಿ ಬಿದ್ದುಹೋಗ್ಯದ. ಏನ್ ಮಾಡೂದು ಹೇಳ್ರಿ" ಎಂದು ಗೋಗರೆದಳು.

ಆಕಸ್ಮಿಕ ರಾಮಚಂದ್ರನ ಹೆಂಡತಿ ಮಕ್ಕಳು ಅಳತೊಡಗಿದರು. ಆ ಕಡೆಯಿಂದ ಶಂಕರನ ಹೆಂಡತಿಯೂ ಅಳುತ್ತ ಬಂದಳು. ಆಗ ಏನಾಯಿತೊ ಗೊತ್ತಿಲ್ಲ... ಅಲ್ಲಿ ಸೇರಿದ ಜನ ಗೊಳೋ ಅಂತ ಅಳತೊಡಗಿದರು.

ಪೊಲೀಸರು ಅಲ್ಲಿಂದ ಸರಿದು ಬದಿಗೆ ಹೋದರು. ಸೆಟೆದು ನಿಂತು ಕೈಯಲ್ಲಿಯ ಕೋಲು ತಿರುವುತ್ತ ಅವರು ಹೇಳಿದರು. "ನೆನಪಿಡ್ರಿ, ಇನ್ನು ಮುಂದೆ ಯಾರಾದ್ರೂ ಒಬ್ಬರು ಸರಾಯಿ ಹೊರೆ ಸಾಗಿಸುತ್ತಿದ್ದುದು ನೋಡಿದ್ರೆ ಪೂರ್ತಿ ಕುಂಬಾರ ವಾಡೆಯನ್ನೇ ಕಟ್ಟಿಕೊಂಡು ಹೋಗಿ ಒಳಗ ಹಾಕ್ತೀವಿ. ಈವತ್ತು ಅಲ್ಲಿ ಒಗೆದು ಬಂದ ಹೊರೆಗಳು ಬೇವಾರ್ಸಿ ಎಂದು ಪಂಚನಾಮೆ ಮಾಡ್ತೀವಿ. ಇನ್ನು ಹಿಂಗೆ ಮಾಡಿದ್ರೆ ಹುಶಾರ್" ಎಂದು ಅವರು ಧಮಕಿ ಹಾಕಿ ನಡೆದರು. ಕುಂಬಾರ ಕೇರಿಯವರೆಲ್ಲ ಸೇರಿ ಒಂದು ದೊಡ್ಡ ಅಪರಾಧ ಮಾಡಿದವರಂತೆ ಅವರು ತಲೆ ಬಗ್ಗಿಸಿ ತೆಪ್ಪಗೆ ತಮ್ಮ ತಮ್ಮ ಮನೆಗೆ ಹೋದರು.

* * *

**ಆ** ಕೋಣ ಎಲ್ಲಿಂದ ಬಂದಿದೆ ಮತ್ತು ಯಾವಾಗ ಕೇರಿಯಲ್ಲಿ ನುಗ್ಗಿದೆಯೆಂದು ಯಾರಿಗೂ ಗೊತ್ತಿರಲಿಲ್ಲ. ಕೇರಿಯ ಮಧ್ಯೆ ನಿಂತು ತೇಗಿನ ಮೇಲೆ ತೇಗು ತೆಗೆಯುತ್ತಿದ್ದಾಗ ಕೋಣ ಬಂದಿದೆಯೆಂದು ಗೊತ್ತಾಯಿತು. ಕುಂಬಾರರು ಸುತ್ತಮುತ್ತಲಿನ ಎಮ್ಮೆ ಕೋಣ ಆಕಳು ಎತ್ತುಗಳ ಗುರುತು ಹಿಡಿಯುತ್ತಿದ್ದರು. ಆದರೆ ಈ ಸೊಕ್ಕಿನ ಕೋಣ ಕಂಠಮಟ್ಟದ ಕೆಸರಿನಲ್ಲಿ ಉರುಳಾಡಿ ಬಂದಿತ್ತು. ಕ್ಷಣಕ್ಷಣಕ್ಕೂ ಚರ್ಮ, ಕಿವಿ ಕೊಡವಿ ಮುಂದೆ ಬಂದರೆ ಕೋಡುಗಳಿಂದ ಸಿಗಿದು ಹಾಕಿ ಬಿಡ್ತೀನಿ ಎನ್ನುವಂತೆ ಒದರುತ್ತ ನಿಂತಿತ್ತು. ಯಾರಾದರೂ ಕೊಂಚ ಕಿಚಾಯಿಸಿದರೆ ಸಾಕು ಅದು ತಿಂದು ಹಾಕುವಂತೆ ಕಣ್ಣು ಬಿಡುತಿತ್ತು. ಅದೀಗ ಓಡಿಸಿಕೊಂಡು ಬರುತ್ತದೆ ಎಂಬಂತೆ ಕಾಣಿಸುತ್ತಿತ್ತು.

ಮುಂದುಗಡೆಯಿಂದ ಅದರ ತಲೆ ಆಮೆಯ ಮೇಲಿನ ಚಿಪ್ಪಿನಂತೆ ಗಟ್ಟಿಯಾಗಿ ಕಾಣುತಿತ್ತು. ಅದಕ್ಕೆ ಗಿಡ್ಡ ಚೂಪಾದ ಎರಡು ಕೊಂಬುಗಳಿದ್ದವು. ಅದು ಎಷ್ಟು ಕಪ್ಪಗಿತ್ತೆಂದರೆ ಕಾಡಿನ ಕತ್ತಲೆಯನ್ನೆಲ್ಲ ಅದಕ್ಕೆ ಮೆತ್ತಿದ್ದಾರೇನೋ ಎಂದು ಅನಿಸುತಿತ್ತು. ಕಪ್ಪು ಬಣ್ಣ ಮತ್ತು ತಲೆಯ ಮೇಲಿನ ಕೆಂಪು ಕೆಂಪಾದ ಕಣ್ಣು ನೋಡಿದರೆ ಸಾಕು ಎದೆಯ ಬಡಿತವೇ ಕ್ಷಣಕಾಲ ನಿಂತು ಹೋಗುತಿತ್ತು. ಜನ ಗಾಬರಿಯಾಗಿ ಮುಸುಗುಟ್ಟುತ್ತ ಓಡಿ ಹೋಗಿ ತಮ್ಮ

ತಮ್ಮ ಮನೆ ಸೇರಿಕೊಂಡು ಬಾಗಿಲ ಸಂದಿನಿಂದ ಕೋಣವನ್ನು ನೋಡುತ್ತಿದ್ದರು.

ಇದೀಗ ನನ್ನದೇ ದರ್ಬಾರವೆನ್ನುವಂತೆ ಅದು ಕೇರಿಯಲ್ಲೆಲ್ಲ ಕುಣಿದಾಡಿತು. ಶಿವರಾಮನ ಅಂಗಳದಲ್ಲಿ ಹಾಕಿದ ಮಣ್ಣಿನ ರಾಶಿ ಕೋಡಿನಿಂದ ಕೆದರಿ ಹಾಕಿತು. ಕೆಲವರು ಹೊರಗೆ ಒಣಗಲು ಇಟ್ಟ ಗಡಿಗೆಗನ್ನು ಓಡುವಾಗ ಚುರುಚೂರು ಮಾಡಿತು. ಯಾರದೊ ಮನೆಯ ಮಾಡಿನ ಒಂದು ಭಾಗ ಕೆಳಗಿಳಿದು ಕೋಣನ ಕೊಂಬಿಗೆ ಸಿಲುಕಿದಾಗ, ಅದನ್ನು ಬಿಡಿಸಿಕೊಳ್ಳಲಾರದೆ, ಅದನ್ನೆತ್ತಿಕೊಂಡೇ ಕೋಣ ಊರಲ್ಲಿ ಮೆರವಣಿಗೆ ಮಾಡಿತು.

ಅದರ ಬೆನ್ನ ಮೇಲೆ ಯಮರಾಜ ಕೂತುಕೊಂಡು ಅದರ ಮೂಗುದಾರ ಹಿಡಿದು ಅದನ್ನು ಓಡಿಸುತ್ತಿದ್ದಾನೆ ಎಂದು ಅನಿಸುತ್ತಿತ್ತು.

ಹುಚ್ಚಿ ಬಾಯಜೆ ತನ್ನ ಗುಡಿಸಲ ಬಾಗಿಲಲ್ಲಿ ನಿಂತು ಕೊಂಡಿದ್ದಳು. ಎಲ್ಲೊ ಗದ್ದಲ ನಡೆದಿತ್ತು ....ಯಾರು ಇಲ್ಲಿ ಹೂಂಕರಿಸುತ್ತಾರೆ. ಆಕಾಶ ಹರಿದುಹೋದಂತೆ ಅವಳಿಗೆ ಅದೊಂದು ವಿಚಿತ್ರವಾಗಿ ಕಂಡಿತು. ಅದು ತನಗೆ ಹೂಂಕರಿಸಿ ಕರೆಯುತ್ತದೆಯೇ?... ಇಂಥ ಹೂಂಕಾರ ಅವಳು ಕನಸಿನಲ್ಲಿ ಅನೇಕ ಬಾರಿ ಕೇಳಿದ್ದಳು. ತವರುಮನೆಯ ಹಿಂದಿನ ಬೆಟ್ಟದಿಂದ ಇಂಥ ಹೂಂಕಾರ ಕೇಳಿ ಬರುತ್ತಿತ್ತು. ಇಲ್ಲಿ ಕೆರೆಯ ಸುತ್ತಲಿನ ದಟ್ಟ ಗಿಡಗಂಟಿಗಳ ಸಂದಿನಿಂದ... ಅವಳು ಎದ್ದು ಘನಶ್ಯಾಮನ ಮನೆಯ ಹಿಂದಿನಿಂದ ಬಂದು ಅಂಗಳದಲ್ಲಿ ನಿಂತುಕೊಂಡಳು... ಎರಡು ಮಾರು ದೂರದಲ್ಲಿ ಕೋಣ ನಿಂತುಕೊಂಡಿದೆ. ಕೆಂಪು ಕಣ್ಣಿನ ಕಪ್ಪು ಬಣ್ಣದ ಕೋಣ ಆವಿಗೆಯಲ್ಲಿ ಸುಟ್ಟು ಕರಕಲಾದ ಕಪ್ಪು ಬಣ್ಣದ ಗಡಿಗೆಯಂತೆ ಅದರ ತಲೆ ಕಾಣುತ್ತಿತ್ತು. ಅವಳು ಅಂಜಲಿಲ್ಲ ಇದೇನು ನಿನ್ನ ಕಪ್ಪಾದ ಪೊಳ್ಳಾದ ಕೊಂಬುಗಳು... ಮೈಮೇಲೆ ಬಂದು ನೋಡು... ಅಷ್ಟು ಹೇಳುವುದರಲ್ಲಿ ಕೋಣ ಅವಳ ಮೈಮೇಲೆ ಏರಿ ಹೋಯಿತು. ಅವಳನ್ನು ಕೊಂಬಿನಿಂದ ಎತ್ತಿ ಒಗೆಯಿತು. ಅವಳು ದೂರ ಹೋಗಿ ಅಂಗಾತ ಬಿದ್ದುಕೊಂಡಳು. ಕೋಣ ಮತ್ತೆ ಅವಳ ಬಳಿಗೆ ಓಡಿತು. ತನ್ನ ಮುಂದಿನ ಎರಡೂ ಕಾಲು ಅವಳೆದೆಯ ಮೇಲಿಟ್ಟು ಕುಣಿಯತೊಡಗಿತು. ಅವಳ ಒಂದು ಪದರಿನ ಸೀರೆ ಹರಿದು ಪಕ್ಕದಲ್ಲಿ ಬಿದ್ದಿತು. ಮರುಕ್ಷಣ ತನ್ನ ಎರಡೂ ಕೊಂಬುಗಳನ್ನು ಅವಳ ಎದೆಯಲ್ಲಿ ತೂರಿಸಿ ಕುತ್ತಿಗೆಯಿಂದ ಹೊರ ತೆಗೆಯಿತು. ಎದೆಯಿಂದ ಕೊರಳವರೆಗೆ ದೇಹ ಸೀಳಿ ಹೋಯಿತು.

ತನ್ನ ಮನೆಯ ಬಾಗಿಲಲ್ಲಿ ನಿಂತು ನೋಡುತ್ತಿದ್ದ ಘನಶ್ಯಾಮನ ಹೆಂಡತಿ ಗಾಬರಿಯಿಂದ ಕೂಗಿಕೊಂಡಳು. 'ಬರ್ರ‍ಪೊ ಬರ್ರಿ, ಓಡಿ ಬರ್ರಿ, ಬಾಯಜಾಳನ್ನು ಕೊಂದು ಹಾಕ್ಯದ. ಕೈಯಾಗ ಕುಡಗೋಲು ತಗೊಂಡ್ ಓಡಿ ಬರ್ರಿ."

ನಾಲ್ಕೈದು ಕುಂಬಾರರು ಹೆಂಟೆ ಒಡೆಯುವ ಕುಡಲೆ ತೆಗೆದುಕೊಂಡು ಓಡಿ ಬಂದರು. ಕುಡತಿ ತೋರಿಸಿ ಕೋಣವನ್ನು ಓಡಿಸುವ ಪ್ರಯತ್ನ ಮಾಡಿದರು.

ಕೋಣ ನಿಧಾನವಾಗಿ ಹೆಜ್ಜೆಯಿಡುತ್ತ ಕೇರಿಯಿಂದಾಚೆ ಹೋಯಿತು. ಹೊಲದಲ್ಲಿ ನಡೆದು ಮುಂದೆ ಮತ್ತೇರಿದಂತೆ ಜಿಗಿಯುತ್ತ ಓಡ ತೊಡಗಿತು. ಗಂಡಸರು ಬಹಳ ಹೊತ್ತು ವಾಡೆಯಲ್ಲಿ ನಿಂತು ಮೈ ಮೇಲಿನ ಎಚ್ಚರವಿಲ್ಲದೆ ಕೋಣ ಹೋಗುವುದನ್ನೆ ನೋಡುತ್ತಿದ್ದರು. ಅವರಿಗೆ ಥಟ್ಟನೆ ಬಾಯ್‌ಜಾಳ ನೆನಪಾಯಿತು... ಅವರು ಕೇರಿಗೆ ಬಂದರು.

ಬಾಯ್‌ಜಾ ರಕ್ತದ ಹೊಳೆಯಲ್ಲಿ ಬಿದ್ದುಕೊಂಡಿದ್ದಳು. ಹೆಣ್ಣುಮಕ್ಕಳು ಸುತ್ತಲೂ ಸೇರಿದ್ದರು. ಆದರೆ ಯಾರಿಗೂ ಮುಂದೆ ಹೋಗಿ ಅವಳನ್ನು ಮುಟ್ಟುವ ಧೈರ್ಯವಿರಲಿಲ್ಲ. ಒಬ್ಬ ಹೆಂಗಸು ಮುಂದೆ ಸರಿದು ಬಾಯ್‌ಜಾಳ ಪಕ್ಕದಲ್ಲಿ ಬಿದ್ದ ಸೀರೆಯನ್ನು ಎರಡು ಬೆರಳಿನಿಂದ ಹಿಡಿದು ಅವಳ ಸೊಂಟ, ಎದೆಯ ಮೇಲೆ ಹಾಕಿದಳು.

ಬಾಯ್‌ಜಾಳ ಸಾವಿನ ಸುದ್ದಿ ಸದಾನಂದನು ಪೋಲಿಸ್ ಸ್ಟೇಷನ್ನಿಗೆ ತಲುಪಿಸಿದ. ಅವರು ಬಂದು ಆಕೆಯ ಹೆಣವನ್ನೆತ್ತಿಕೊಂಡು ಹೋದರು. ಮರುದಿನ ತಂದು ಘನಶ್ಯಾಮನ ವಶಕ್ಕೊಪ್ಪಿಸಿದರು. ಆದರೆ ಕೊನೆಯವರೆಗೂ ಆ ಕೋಣ ಯಾರದ್ದು, ಎಲ್ಲಿಂದ ಬಂದಿತ್ತು ಎಂದು ತಿಳಿಯಲಿಲ್ಲ. ಅದು ಗೋವೆಯ ಸೀಮೆ ದಾಟಿ ಈ ಕಡೆಗೆ ಬಂದಿರಬೇಕು ಎಂದು ಯಾರೋ ಹೇಳುತ್ತಿದ್ದರು.

ಬಾಯ್‌ಜಾ ತೀರಿಕೊಂಡಾಗ ಅವಳ ಗುಡಿಸಲಿನಲ್ಲಿ ಅನ್ನ ಸಾರು ಮಾಡುವ ಪಾತ್ರೆಗಳು. ಎರಡು ಅಲ್ಯುಮಿನಿಯಂ ತಟ್ಟೆಗಳು, ಒಂದು ಲೋಟಗಳಿದ್ದವು. ಹಗ್ಗದ ಮೇಲೆ ಒಂದು ಹರಿದ ಸೀರೆಯಿತ್ತು ಒಂದು ಗಡಿಗೆಯಲ್ಲಿ ಎರಡು ಮುಷ್ಟಿ ಅಕ್ಕಿಯಿತ್ತು. ಮತ್ತೇನೂ ಇರಲಿಲ್ಲ.

* * *

ಸದಾನಂದ ಬಿ.ಎ.ಪಾಸಾಗಿ ಬಂದ ಬಳಿಕ ಊರಲ್ಲಿ ಕೇವಲ ಎರಡು ತಿಂಗಳಿದ್ದ ಆದರೆ ಪ್ರತಿದಿನ ಖಾನಪುರಕರ್ ಮಾಸ್ತರರ ಮನೆಗೆ, ಅಂಚೆ ಮನೆಗೆ ಹೋಗಿ ಬರುತ್ತಿದ್ದ ಬಾಯ್‌ಜೆ ಸತ್ತಾಗ ಅವನೇ ಆ ಕುಂಬಾರ ಕೇರಿಯ ಆಧಾರವಾಗಿದ್ದ ಪೋಲಿಸರನ್ನು ಕರೆದು ಕೊಂಡು ಬರಲು. ಅವಳ ಹೆಣ ಪೊಲೀಸರಿಂದ ಪಡೆದುಕೊಳ್ಳುವಾಗ ಯಾರ ನೆರವೂ ಬೇಕಾಗಲಿಲ್ಲ. ಪೊಲೀಸರ ಪ್ರಶ್ನೆಗಳಿಗೆ ಅವನೇ ಸರಿಯಾದ ಉತ್ತರಗಳನ್ನು ನೀಡಿದ. ಕುಂಬಾರಕೇರಿಯಲ್ಲಿ ಮೊದಲ ಬಾರಿಗೆ ಇಂಗ್ಲಿಷ ಮಾತಾಡುವುದು ಕೇಳಿ ಬರುತಿತ್ತು.

ಕೇರಿಯ ಜನಕ್ಕೆಲ್ಲ ತಮ್ಮಲ್ಲೊಬ್ಬ ಇಂಗ್ಲಿಷ ಬಲ್ಲವನಿದ್ದಾನೆ ಎಂಬ ಹೆಮ್ಮೆಯಿತ್ತು. ಇನ್ನು ಮುಂದೆ ಯಾವ ಅಂಜಿಕೆಯೂ ಇಲ್ಲ. ಏನು ಬಂದರೂ ಎದುರಿಸಬಹುದು ಇದುವರೆಗೂ ಕುಂಬಾರರೆಲ್ಲ ಅಶಿಕ್ಷಿತರು, ಅಡನಾಡಿಗಳಾಗಿಯೇ ಇದ್ದರು.

ಹಣದ ಕೊರತೆಯಿಂದ ಬಂದ ಬಡತನ ಒಂದು ಸಾಂಕ್ರಾಮಿಕ ರೋಗದಂತೆ ಕುಂಬಾರಕೇರಿಯಲ್ಲಿ ಹರಡಿದ್ದನ್ನು ಸದಾನಂದ ಗಮನಿಸುತ್ತಿದ್ದ. ಗೇಣು ಹೊಟ್ಟೆಗಾಗಿ ಹೋರಾಟ ನಡೆದರೂ ಹೊಟ್ಟೆ ತುಂಬುತ್ತಿರಲಿಲ್ಲ. ಯಾರಿಗಾದರೂ ಒಳ್ಳೆಯದನ್ನು ಹೇಳಿದರೆ ಆತ ಮೈ ಮೇಲೇ ಬರುತ್ತಿದ್ದ "ಅಲ್ಲವ್ವ... ಹುಡುಗನಿಗೆ ಸಾಲಿಗೆ ಯಾಕೆ ಕಳಿಸೊದಿಲ್ಲ" ಅಂತ ಒಂದು ಹೆಂಗಸಿಗೆ ಕೇಳಿದರೆ "ನಿನ್ನ ಪುಸ್ತಕಕ್ಕಿಂತ ನಮಗೆ ನಮ್ಮ ರೊಟ್ಟಿ ಭ್ಯಾಳ ಮಹತ್ವದ್ದು. ನಿನ್ಹ್ಹಂಗ ಅವರಿಗೂ ಮನಿ ಬಿಟ್ಟು ಓಡಿ ಹೋಗಾಕ ಹೇಳು. ಅಂದರ ನಾವೂ ಯಾವ ಚಿಂತೆಯಿಲ್ಲದೆ ಇರಾಕಾಗ್ತದ" ಎನ್ನುತ್ತಿದ್ದರು ಇದು ಸಿಡುಕಿನ ಮಾತು ಎಂದು ಸದಾನಂದನಿಗೂ ಗೊತ್ತಾಗುತಿತ್ತು. ಈಗೀಗ ಕುಂಬಾರರು ಕೊಂಚ ಒರಟು ಆಗುತ್ತಿದ್ದಾರೆ. ಏನಾದರೂ ಹೇಳಿದರೆ ತಕ್ಷಣ ಜಗಳಕ್ಕೆ ಬರುತ್ತಾರೆ. ಯಾವಾಗಲೂ ಹಸಿದ ಹೊಟ್ಟೆಯಲ್ಲಿ ಮಾತಾಡಿದಂತೆ ಮಾತನಾಡುತ್ತಾರೆ. ನಾನೀಗ ಊರಲ್ಲಿ ನಿಂತು ಏನೂ ಮಾಡುವಂಥದ್ದಿಲ್ಲ. ಇಲ್ಲಿ ಏನು ಮಾಡಲು ಆಗುವುದಿಲ್ಲ.

ಒಂದು ದಿನ ಅವನಿಗೆ ಪ್ರಹ್ಲಾದ ಸಾವಂತನ ಪತ್ರ ಬಂತು ಆ ಪತ್ರದಲ್ಲಿ 'ನೀನು ಊರಿಗೆ ಹೋಗುವ ಮೊದಲು ನಾವು ನಿನ್ನ ನೌಕರಿಯ ಬಗ್ಗೆ ಎರಡು ಮೂರು ಕಡೆ ಹೋಗಿದ್ದು ನಿನಗೆ ನೆನಪಿರಬಹುದು. ಹಿಂದುಸ್ತಾನ ಲಿವರ್‌ನವರ ಬಂಡ್ ಗಾರ್ಡನ್ನಿನ ಹತ್ತಿರ ಒಂದು ಡಿಪೊ ಇದೆ. ಅಲ್ಲಿ ಒಬ್ಬ ಸೇಲ್ಸ ಸುಪರ್‌ವೈಜರ್ ಬೇಕಂತೆ. ಮ್ಯಾನೇಜರ್ ನನ್ನ ಪರಿಚಯದವನೇ ಇದ್ದಾನೆ. ಕೆಲಸ ಆಗಬಹುದು'

ತಂದೆ ತಾಯಿಗೆ ಪತ್ರ ಬಂದ ವಿಷಯ, ನೌಕರಿಯ ಬಗ್ಗೆ ಬರೆದುದನ್ನು ಹೇಳಿದರೆ ಅವರು ಮೌನಕ್ಕೆ ಶರಣಾದರು. ಕೆಲ ಸಮಯದ ನಂತರ ತಾಯಿ ಸೀಳುಧ್ವನಿಯಲ್ಲಿ ಹೇಳಿದಳು "ಎಲ್ಲಾದ್ರೂ ಹೋಗಿ ಹೊಟ್ಟೆ ತುಂಬ್ಕೊಬೇಕಲ್ಲಪ್ಪ"

ಈ ವಿಷಯ ಹೇಳಲು ಅವನು ಸೀತವ್ವನ ಬಳಿಗೆ ಹೋದ. ಸೀತವ್ವ ಹೇಳಿದಳು "ಕೇರ್‍ಯಾಗ ನೀನೊಬ್ಬಾಂವಾ ಕಲಿತ ಹುಡುಗ. ಕೇರಿ ಗಾಳಿ ಮ್ಯಾಗ ಹಾಕಿ ನೀ ಬಿಟ್ಟು ಹೊಕ್ಕೀಯೇನು?"

"ನನಗೆ ಊರಾಗ ಇರಬೇಕಂತ ಆಸಿ ಐತಿ ಸೀತವ್ವ, ನಾ ಪುಣ್ಯಾಗಿದ್ದಾಗ ಊರ ನೆನಪಾಗಿ ಅಳ್ತಾ ಕೂಡತಿದ್ದೆ. ಇಲ್ಲಿ ಇದ್ದು ನಾನು ಏನ್ ಮಾಡ್‌ಬೇಕು ಯಾವ್ ನೋಕರಿ ಸಿಗ್ತದ. ಏನ್ ಮಾಡಿದ್ರೂ ಕುಂಬಾರ ಧಂದಿಗ ಒಳ್ಳೆ ಭವಿಷ್ಯ ಇಲ್ಲ. ಈ ಧಂದ್ಯಾಗ ಫಾಯ್ದೆ ಇದ್ರ ಶಹರದಾಗಿನ ದುಡ್ಡಿದ್ದ ಮಂದಿ ಬಂದು ಫಾಕ್ಟರಿ ಹಾಕ್ತಿದ್ರು, ಆಗ ಈ ಧಂದಿ ನಿಮ್ಮ ಕೈಯಾಗ ಇರುತ್ತಿರಲಿಲ್ಲ. ಕುಂಬಾರರ ದುಃಖಕ್ಕೆ ಒಂದೇ ಕಾರಣ–ಅವರ ಕೈಯಾಗ ರೊಕ್ಕ ಇಲ್ಲ. ಏನಾದರೂ ಮಾಡಿ ಕುಂಬಾರರು ದುಡ್ಡು ದುಡಿಯಾಕ ನೋಡ್‌ಬೇಕು. ಅಂದರೆ ಮಾತ್ರ ಹುಡುಗರಿಗೆ ಶಿಕ್ಷಣ ಕೊಡಾಕ ಆಗತೈತಿ. ಪುಸ್ತಕಾ ಕೊಳ್ಳಾಕ ಆಗತೈತಿ. ಬಟ್ಟೆ ಕೊಳ್ಳಾಕ ಆಗತೈತಿ. ಹೊಟ್ಟೆ ತುಂಬ ಉಣ್ಣಾಕ ಸಿಗತೈತಿ".

"ನೀ ದುಡ್ಡೇ ದೊಡ್ಡದು ಅಂತೀಯೇನು?

"ಇದು ಹಿರ್‍ಯಾರಿಂದ ಬಂದ ಧಂದಿಯಲ್ಲ.? ಈ ಧಂದಿ ಹಾಳ್ ಮಾಡಬೇಕು ಅಂತೀಯೇನು"?

"ಕುಂಬಾರ ಧಂದಿ ನಾವ್ಯ ಯಾಕ್ ಮಾಡ್‌ಬೇಕು? ನಾವ್ ಈಗ ಧಂದಿ ಬದಲ ಮಾಡ್‌ಬೇಕು. ಕುಂಬಾರಿಕೆ ಅನ್ನೂದು ಕೇವಲ ಒಂದು ಧಂದಿ. ಜಾತಿ. ಧರ್ಮ ಅಲ್ಲ ಹಿಡಕೊಂಡು ಇರಾಕ್"

"ನೀ ಕಲ್ತೀಯಪ್ಪ. ನೀ ಒದ್ದರೆ ಒದ್ದಲ್ಲಿ ನೀರ್ ಬಂದೀತು. ಆದರ ಬ್ಯಾರಿಯವರಿಗೆ ಅದಷ್ಟು ಸುಲಭ ಅಲ್ಲ. ಇನ್ನೂ ತನಕಾ ಮಣ್ಣಿನ ರಾಶ್ಯಾಗ ಕುಂಬಾರ ಮಂದಿ ರೊಟ್ಟಿ ಕಾಣತೈತಿ."

"ಜಗತ್ತು ಈಗ ತೆರೆದು ನಿಂತದ. ನಾವು ಹಂಗ ಬದಲಾಗ ಬೇಕಲ್ಲ. ಕೆಳಗಿನ ಜಾತಿ ಮಂದಿಗ ಎಲ್ಲಾ ಕಡೀಗೂ ಕಾದಿಟ್ಟ ಜಾಗ ಇರ್‍ತಾವಂತ ನಿನಗ ಗೊತ್ತೈತೇನು? ಶಿಕ್ಷಣಕ್ಕೆ, ನೌಕರಿಗೆ, ಶಾಸಕರಾಗಾಕ ಕಾದಿಟ್ಟ ಜಾಗಗಳಿರ್‍ತಾವ. ಆದರ ನಮುಗ ಮಾತ್ರ ಏನೂ ಇಲ್ಲ. ನಾವು ನಮ್ಮ ಕಾಲಮ್ಯಾಗ ನಿಂತ್ಕೊಬೇಕು. ಸ್ವಾತಂತ್ರ್ಯ ಬಂದು ಐವತ್ತ ವರ್ಷ ಆತು. ನಮುಗ ಇನ್ನೂ ವಿದ್ಯುತ್ ದೀಪ ಇಲ್ಲ, ರಸ್ತೆಯಿಲ್ಲ. ಹೊಳೆಗೆ ಸರಿಯಾದ ಸಂಕವಿಲ್ಲ. ನನ್ನಂಥಾವ ಕಲಿಬೇಕಂದ್ರ ಊಟದ ಡಬ್ಬಿ ತಲಿಮ್ಯಾಗಿಟ್ಟಕೊಂಡು ಒಯ್ದು ಕೊಟ್ಟು ಕಲೀಬೇಕು. ಮತ್ತ ಈ ನಮ್ಮ ಮಂದಿಗೆ ನಿಮ್ಮ ಮಕ್ಕಳಿಗೆ ಕಲಿಸಿರಿ ಅಂತ ಹೇಳಿದರ ಮೈಮ್ಯಾಗ ಬರ್‍ತಾರ."

"ಹೊಟ್ಟಿಮುಂದ. ಹಸಿವಿನ ಮುಂದೆ ಪುರಾಣ ಓದಿ ಏನೂ ಫಾಯ್ದೆಯಿಲ್ಲ ಸದಾನಂದ. ಹಸಿವು ಅಂದ್ರ ಮೇಯಾಕ ಹೋದ ಹೋರಿಹಂಗ."

"ಶಿಕ್ಷಣ ಇಲ್ಲಾಂತ ದುಡ್ಡಿಲ್ಲ. ದುಡ್ಡಿಲ್ಲ ಅಂತ ಹಸಿವು ನೀಗುಸುವುದಾಗೂದಿಲ್ಲ. ಒಂದು ದುಷ್ಪಚಕ್ರದಲ್ಲಿ ಕುಂಬಾರಮಂದಿ ಸಿಕ್ಕಿ ಬಿದ್ದಾರ.

ಸೀತವ್ವ ಸ್ವಲ್ಪ ಹೊತ್ತು ಏನು ಮಾತಾಡಲಿಲ್ಲ. ಕೊನೆಗೊಮ್ಮೆ ಅವಳು ಬಾಯಿ ಬಿಟ್ಟಳು "ಸರಕಾರ ಯಾಕ ಒಡ್ಡು ಹಾಕಿ ನಮ್ಮ ಮಣ್ಣ ಮುಳುಗಿಸಾಕ ನೋಡತೈತಿ? ನಿನ್ನಂತಹ ಕಲಿತ ಮಂದಿ ಇದ್ರ ಅವರನ್ನ ತಡಿಯಾಕ ಹೋರಾಟ ಮಾಡಾಕ ಆಗ್‌ತಿತ್ತು. ಈಗ ಈ ಪ್ರಕರಣ ಮುಂದ ಬರೂದೈತಂತ."

ಅದನ್ನ ತಡಿಯಾಕ ಆಗೂದಿಲ್ಲವ್ವ, ಬ್ಯಾರಿ ಕಡಿಗ ಸರಕಾರ ನೂರಾರು ಊರು ಖಾಲಿ ಮಾಡಿ ನದಿಗೆ ಆಣೆಕಟ್ಟು ಹಾಕತೈತಿ–ನಿನಗ ಗೊತ್ತೈತೇನು? ನಮ್ಮಾತು ಕೇಳೂದಿಲ್ಲ ಅವರು ಇಡೀ ಊರಿಗ ಒಡ್ಡು ಬೇಕಾದ್ರ ನಮ್ಮ ಮಾತ್ ಯಾಕ್ ಕೇಳ್ತಾರ? ನಮ್ಮದಿರುವುದು ಎಂಟು ಮನೆ. ಕುಂಬಾರರು ಇನ್ನು ಯಾವ ಪರಿಸ್ಥಿತಿ ಬಂದ್ರೂ ಎದುರಿಸಾಕ ತಯಾರಿರಬೇಕು.

"ನಮ್ಮಂತಹ ಮುದುಕರ ಮಾತು ಬಿಡು ಹೆಂಗಾರೂ ಸಾಯಾಕಬೇಕು. ನಿಮ್ಮಂತಹ ಹುಡುಗ್ರು ಎಲ್ಲಾದರೂ ಹೋಗಿ ಹೊಟ್ಟೆ ತುಂಬ್ಕೋತೀರಿ. ರೆಕ್ಕೆಗಳು ಬಲಿತಿಲ್ಲ. ಆದರ ಮಧ್ಯ ವಯಸ್ಸಿನ ಮಂದಿ. ಮಣ್ಣಿನಿಂದ್ಲೆ ಹೊಟ್ಟೆ ತುಂಬ್ಕೋಬೇಕನ್ನುವವರು ಏನ್ ಮಾಡ್‌ಬೇಕು ನನ್‌ಮಾತ್ ಕೇಳ್ ಸದಾನಂದ. ಕೆರಿಗೆ ಒಡ್ಡು ಹಾಕಿ ತುಂಬಿ ನಿಂತ್ರ ಊರಾಗಿನ ಮಂದಿಯೆಲ್ಲ ಕೆರ‍್ಯಾಗ ಹಾಕಿ ಜೀವ ಕಳ್ಕೋತಾರ."

ಸದಾನಂದ ಸ್ವಲ್ಪ ಹೊತ್ತು ಸೀತವ್ವನನ್ನು ನೋಡುತ್ತ ನಿಂತ ಅವನ ಕಣ್ಣುಗಳಲ್ಲಿ ನೀರು ಕಾರಂಜಿಯಂತೆ ಪುಟಿಯಿತು. ಅವನು ಗದ್ಗದಿತನಾಗಿ "ಬರ್ತೀನವ್ವ ಸೀತವ್ವ" ಎಂದು ಹೇಳುತ್ತ ಹೊರನಡೆದ.

ಸೀತವ್ವ ಗಡಿಬಿಡಿಯಿಂದ ಎದ್ದು ನಿಂತಳು "ಸದಾನಂದ. ನನ್ನ ಮೊಮ್ಮಗನಿಗೆ ಎಲ್ಲಾದರೂ ನೌಕರಿ ಸಿಗ್ತದೊ ನೋಡಪ್ಪ. ನಾಳಿ ಗೋಕುಲಾಷ್ಟಮಿಗೆ ಅಂವಗ ಹದಿನೈದು ತುಂಬಿ ಹದಿನಾರು ಶುರು ಆಗ್ತದ" ಎಂದಳು.

* * *

**ಕಾ**ರ್ತಿಕ ಮಾಸದ ದಿನಗಳಾಗಿದ್ದವು. ಬೆಳಗ್ಗಿನ ಹೊತ್ತು ಗಡದ್ದು ಚಳಿ ಬಿದ್ದಿತ್ತು. ವಾಡೆಯಲ್ಲಿ ಬೆಳಕು ಬಿದ್ದಿತ್ತು. ಶಂಕರ ಮೊಣಕಾಲಲ್ಲಿ ತಲೆಯಿಟ್ಟು ಚಳಿ ಕಾಯಿಸುತ್ತ ಕುಳಿತಿದ್ದ. ಅವನ ತಲೆಕಾಣುತ್ತಿರಲಿಲ್ಲ. ಅದು ಮೊಣಕಾಲ ಸಂದಿಯಲ್ಲಿ ಹುದುಗಿ ಹೋಗಿತ್ತು

ವಿಶ್ರಾಮ ಮುಂದುಗಡೆಯಿಂದ ಹೋಗುತ್ತಿದ್ದ. ಅವನು ಕೇಳಿದ "ಶಂಕರಣ್ಣಾ ಚಳಿ ಭ್ಹಾಳೇನು?"

"ರಾತ್ರಿಯಿಡೀ ಚಳ್ಯಾಗ ಚಡಪಡಿಸಿದ್ದಾಯ್ತು. ಇನ್ನೂ ಮಟ ಚಳಿ ಬಿಟ್ಟು ಹೋಗೂದಿಲ್ಲ."

"ನಿನಗ ಭ್ಹಾಳ ವಯಸ್ಸಾಗ್ಯವಲ್ಲ? ಹೀರೇ ಮನಷ್ಯಾ?"

"ಕುಂಬಾರ ಹಿರ‍್ಯಾವನಾಗಲಿ ಕಿರ‍್ಯಾವನಾಗಲಿ ನಲವತ್ತು ದಾಟಿತು ಅಂದ್ರ ಮುಗದ್ ಹೋಯ್ತು. ಆವಿಗ್ಯಾಗ ಹಾಕಿ ತೆಗೆದ್ಹಂಗ ರಕ್ತ ದಪ್ಪಗಾಗತೈತಂತೆ. ಲಗೂನ ಸಾವ ಬಂದ್ರ

ಕೆಡಕಲ್ಲ ವಿಶ್ರಾಮಾ. ನಿಂತಲ್ಲೆ ಸಾವ ಬರಬೇಕು ಕುಂಬಾರಗ. ಶಿವರಾಮನ ಮನಿ ಹತ್ರ ಇರೂ ಬಾಳಿಗಿಡ ನೋಡಿಯೇನು? ಏಟ ಅಗಲ ಎಲಿ ಬಿಟ್ಟ್ಯದ ನೋಡು. ಹೋಗಿ ಗೋಡಿಗ ಬಡಕೊಂಡೈತಿ. ಈಟ ದ್ವಾಡ್ಡ ಎಲೀ ಎಲ್ಯಾರ ನೋಡಿಯೇನ? ಕುಂಬಾರ ಸಾಯಾಕ ಹತ್ಯಾನ ಮತ್ತ ಈ ಬಾಳೀ ಗಿಡಕ್ಕ ಏಟ ಅಗಲ ಎಲಿ ಬಿಟ್ಟೈತಿ ನೋಡು. ನನ್ನ ಹೆಣದ ಮ್ಯಾಗ ಹಾಕಾಕ ಬರ್ತದ ನೋಡು" ಎಂದು ಅವನು ತಕ್ಷಣ ಎದ್ದು ನಿಂತು ದೊಡ್ಡಕೆ ಕೂಗುತ್ತ 'ಶಿವರಾಮ ನಿನ್ನ ಬಾಗಲಾಗ ಇರೂ ಬಾಳಿ ಎಲಿ ನೋಡು. ನಿನ್ನ ಮಾಡೀಗ ಮುಟ್ಟ್ಯದ. ಚಾಪಿ ಹಂಗೈತಿ ಎಲಿ. ಕೆಟ್ಟ ಲಕ್ಷಣ. ಮೊನ್ನಿ ದುಲಬಾ ಸತ್ತಾಗ ಅದ ಬಾಳಿ ಎಲಿ ತಂದ ಹೆಣದ ಮ್ಯಾಗ ಹಾಕಿದ್ರಲ್ಲ."

ಸುಮಾರು ಒಂದೂವರೆ ವರ್ಷದ ಹಿಂದೆ ದಾರಿಯಲ್ಲಿ ಸರಾಯಿಯ ಹೊರೆ ಒಗೆದು ಶಂಕರ ಓಡಿ ಬಂದಿದ್ದ ಅವನ ಹಿಂದೆ ಪೊಲೀಸರು ಬಂದು ಕೇರಿಯಲ್ಲಿ ನುಗ್ಗಿದ್ದರು. ಕೇರಿಯ ಜನರೆಲ್ಲ ಸೇರಿ ಪೊಲೀಸರ ಕಾಲು ಹಿಡಿದು ಅವನನ್ನು ಬಚಾವ ಮಾಡಿದ್ದರು. ಅಂದಿನಿಂದ ಅವನು ಪೂರ್ತಿ ಮೆತ್ತಗಾಗಿದ್ದ. ಅರೆಹುಚ್ಚನಂತಾಗಿದ್ದ ಒಮ್ಮೊಮ್ಮೆ ಗಡಿಗೆ ಮಾಡಲು ಮಣ್ಣು ನೆನೆ ಹಾಕುತ್ತಿದ್ದ. ಅದು ಎಂಟೆಂಟು ದಿನ ಕೊಳೆಯುತ್ತ ಇರುತಿತ್ತು. ಮನಸ್ಸಿಗೆ ಬಂದರೆ ತಿಗರಿಯ ಮೇಲೆ ಕುಳಿತು ಗಡಿಗೆ ತೆಗೆಯುತ್ತಿದ್ದ. ಕೆಲವು ಬಾರಿ ತೆಗೆದ ಗಡಿಗೆ ಒಣಗಿ ಚಿಪ್ಪಿನಂತಾಗುತಿತ್ತು. ಹೆಂಡತಿ, ಮಕ್ಕಳೂ ಅವನನ್ನು ಕಡೆಗಣಿಸುತ್ತಿದ್ದರು. ಅವನು ಕದ್ದು ಮುಚ್ಚಿ ಸರಾಯಿ ಹೊರುವ ಕೆಲಸ ಮಾಡುತ್ತಿದ್ದನಂತಲ್ಲ. ಈಗ ಯಾವ ಕೆಲಸವೂ ಸುಸೂತ್ರ, ಅಚ್ಚುಕಟ್ಟಾಗಿ ಮಾಡುವುದಿಲ್ಲವೆಂದು.

ಹಿಂದೆ ಅವನು ಧೈರ್ಯ ಮಾಡಿ ಎರಡು ಮೂರು ಬಾರಿ ಆವಿಗೆ ಉರಿಸಿದ್ದ ಒಂದು ಬಾರಿ ಅವನು ಮತ್ತು ಅವನ ಹೆಂಡತಿ ಎರಡು ಹೆಡಿಗೆ ತುಂಬ ಗಡಿಗೆಯನ್ನಿಟ್ಟುಕೊಂಡು ಏಳು ಮೈಲು ನಡೆದು ಕೊಡಿಬಾಗ ತಲುಪಿದ್ದರು. ಆದರೆ ಅಲ್ಲಿ ಬೆಳಗ್ಗಿನಿಂದ ಸಂಜೆಯ ವರೆಗೆ ಅಲೆದರೂ ಒಂದು ಹೆಡಿಗೆಯೂ ಖರ್ಚಾಗಿರಲಿಲ್ಲ. ಉಳಿದ ಮಡಕೆಗಳನ್ನು ಹೊತ್ತುಕೊಂಡು ಅಷ್ಟೇ ದೂರ ನಡೆದು ಮನೆಗೆ ಬರಬೇಕಾದರೆ ಅವರಿಬ್ಬರೂ ಸುಸ್ತಾಗಿ ಮುದ್ದೆಯಾಗಿದ್ದರು.

ಈಗೀಗ ಅವರ ಸ್ಥಿತಿ ಚಿಂತಾಜನಕವಾಗಿದೆ. ಒಮ್ಮೊಮ್ಮೆ ಹೆಂಡತಿಗೆ ಸಿಡುಕಿನಿಂದ ದಬಾಯಿಸುತ್ತ "ಯಾಕ ಮಣ್ಣ ಬಡೀತೀ, ಯಾಕ ಗಾಳಿಸ್ತಿ ಮಣ್ಣು. ಮಂದಿ ಮಣ್ಣಿನ ಗಡಿಗ್ಯಾಗ ಅಡಗಿ ಮಾಡೂದ ಬಿಟ್ಟಾರ. ಹೆಣದ ಮ್ಯಾಗ ಒಡಿಯಾಕ ಊರಾಗಿನ ಮಂದಿಯೆಲ್ಲ ಸಾಯ್ಲಿ ಅಂತ ಬೇಡಿಕೊ. ಸ್ಟೀಲಿನ ಪಾತ್ರ್ಯಾಗ ತಯಾರಿಸಿದ ಊಟ ಮಾಡಿ ನಾನಾ ರೋಗ ಬಂದು ಸಾಯ್ತಾರ ನೋಡು ಆಗ ಗೊತ್ತಾಗತ್ತೈತಿ. ಕ್ಯಾನ್ಸರ್ ಅನ್ನೋದು ಕೇಳಿಯೇನು?"

ಇತ್ತೀಚೆಗೆ ಅವನೊಂದು ಹೊಸ ಸುದ್ದಿ ಕೇಳಿದ್ದಾನೆ. ಅವನ ಮಗ ಊರ ಹತ್ತಿರದ ಆಲದ ಮರದ ಕೆಳಗೆ ಒಂದು ಮಡಲಿನ ಗುಡಿಸಲು ಹಾಕಿದ್ದಾನೆ. ಅಲ್ಲಿ ಜಿದಿರಿನ ಬೆಂಚು ಮಾಡಿ ಒಂದೆರಡು ಹಳೆಯ ಹಲಿಗೆ ಇಟ್ಟು ಒಂದು ಅಂಗಡಿ ಹಾಕಿ ಅಲ್ಲಿ ಚಾಕಲೇಟ್, ಬಿಸ್ಕೇಟ್, ಶರಬತ್, ಹುರಿದ ಕಡ್ಲೆಕಾಳು, ಬೀಡಿ, ಸಿಗರೇಟ್ ಮಾರುತ್ತಾನೆ. ಅಲ್ಲಿ ಒಂದು

ಹಲಿಗೆ ಅಡ್ಡ ಹಾಕಿ ಕೆಲವು ಭರಣಿಗಳನ್ನು ಇಟ್ಟಿದ್ದ. ಇದೆಲ್ಲ ತೋರಿಕೆಯ ವ್ಯಾಪಾರ. ನಿಜವಾಗಿ ಅವನು ಹೆಂಡ ಮಾರುತ್ತಿದ್ದ. ಕೆಲವು ಬಾರಿ ಅವನೇ ಗೋವೆಯ ಸೀಮೆಯೊಳಗೆ ಹೋಗಿ ಸರಾಯಿ ಬಾಟ್ಲಿ ತುಂಬಿದ ಚೀಲ ತರುತ್ತಿದ್ದ. ತಾನು ಹೋಗದಿದ್ದರೆ ಬೇರೆಯವರಿಂದ ತರಿಸಿಕೊಳ್ಳುತ್ತಿದ್ದ. ಸಂಜೆ ಹೊತ್ತು ಆ ಚಪ್ಪರದಲ್ಲಿ ನೂಕು ನುಗ್ಗಲು ಇರುತ್ತಿತ್ತು. ಬಂದವರು ಸರಾಯಿ ಹಾಕಿಕೊಂಡು ಹೋಗಿ ಅಕ್ಕ ಪಕ್ಕದ ಗಿಡದಡಿಯಲ್ಲಿ ಕುಳಿತುಕೊಂಡು ಕುಡಿಯುತ್ತಿದ್ದರು.

ಪ್ರಕಾಶ ಅಂಗಡಿ ಆರಂಭಿಸುವ ಮೊದಲೇ ಒಂದು ಜಾಣತನ ಮಾಡಿದ್ದ. ಸಂಬಂಧಿಸಿದ ಪೊಲೀಸರ ದೋಸ್ತಿ ಮಾಡಿ ಅವರಿಗೆ ಪ್ರತಿತಿಂಗಳು ಹಪ್ತೆ ಕೊಡುವ ಒಪ್ಪಂದ ಮಾಡಿಕೊಂಡಿದ್ದ. ಸಾಮಾನ್ಯವಾಗಿ ಕೇರಿಯ ಜನ ಪ್ರಕಾಶನನ್ನು ಕೆಲಸಕ್ಕೆ ಬಾರದ ಹುಡುಗ ಅಂತಲೇ ತೆಗೆದು ಹಾಕಿದ್ದರು. ಈ ವಿಷಯ ಶಂಕರನಿಗೆ ತಿಳಿದಾಗ ಅವನು "ನನಗ ಈಗ ಚಿಂತಿಯಿಲ್ಲ. ನಾ ಈಗ ಕೆಲಸ ಬಿಟ್ಟೇನಿ. ಇನ್ನ ಜೀವ ಬಿಡೂದೊಂದೆ ಬಾಕಿ ಐತಿ" ಎಂದ. ಒಂದು ದಿನ ಅವನು ಸೀತವ್ವನನ್ನು ಕೂಗಿ ಕರೆದು ಹೇಳಿದ. "ಸೀತವ್ವ ಮಾವ್‌ಶಿ, ನನ್ನ ಹುಡುಗಾ ಪ್ರಕಾಶ ಧಂದಿ ಶುರು ಮಾಡ್ಯಾನ. ಕುಂಬಾರ ಧಂದಿಯೊಂದು ಬಿಟ್ರ ಮತ್ತ ಬ್ಯಾರಿ ಯಾವ ಧಂದೀನ ಕೆಟ್ಟದಿಲ್ಲವ್ವ. ಈಟ ದಿವಸಾ ನಾವ ಮಂದೀಗ ಅಂಜತಿದ್ವಿ. ಇನ್ನ ಮುಂದೆ ಯಾರ ಅಂಜಿಕೆ ಯಾರಿಗೂ ಉಳಿದಿಲ್ಲ ನೋಡವ್ವ."

* * *

**ಕು**ಂಬಾರ ಕೇರಿಯ ಸಮೀಪವೇ ಒಂದು ಕೂಗಳತೆಯಲ್ಲಿ ಒಂದು ಬತ್ತ ಒಕ್ಕುವ ಅಂಗಳ ತಯಾರಿಸಿದ್ದರು. ಅಲ್ಲಿ ಸುಮಾರು ನಲವತ್ತು ಧಾನ್ಯದ ಚಿಕ್ಕ ಚಿಕ್ಕ ಬಣುವೆಗಳಿದ್ದವು. ನಾಲ್ಕು ದಿನಗಳಲ್ಲಿ ಒಕ್ಕುವ ಕೆಲಸ ಆರಂಭವಾಗುವುದಿತ್ತು. ಅಲ್ಲಿ ಸ್ಥಳ ಮರ್ಯಾದೆಗಾಗಿ ದೆವ್ವ ಭೂತಗಳಿಗೆ ಪೂಜೆ ಪುರಸ್ಕಾರ, ಅನ್ನದ ಬಲಿ ಇತ್ಯಾದಿ ಕೊಡುವ ಶಾಸ್ತ್ರ ಮಾಡಿ ಮುಗಿಸಿದ್ದರು.

ಆ ಮರುದಿನ ಕುಂಬಾರ ರಾಘೋಬಾ ಮೂತ್ರ ಮಾಡುವುದಕ್ಕೆ ರಾತ್ರಿ ಎರಡು ಗಂಟೆಗೆ ಎದ್ದಾಗ ಅವನ ಕಣ್ಣುಗಳಲ್ಲಿ ಬೆಂಕಿಯಿಟ್ಟಂತಾಗಿ ಹೊರಗೆ ನೋಡಿದರೆ ಒಕ್ಕುವ ಅಂಗಳದಲ್ಲಿದ್ದ ಒಂದು ಹುಲ್ಲಿನ ಬಣಿವೆ ಭಗಭಗ ಉರಿಯುವುದು ಕಾಣಿಸಿತು. ವರ್ಷವಿಡೀ ದುಡಿದ ರೈತನ ಹೊಟ್ಟೆಗೆ ಬೆಂಕಿ ಬಿತ್ತು. ಆ ಪ್ರಶಾಂತ ವಾತಾವರಣದಲ್ಲಿ ಗಂಟಲು ಹರಿದು ಹೋಗುವಂತೆ ಕೂಗಿಕೊಂಡ "ಓಡಿ ಬರ್ರಪೊ ಓಡಿ ಬರ್ರೀ... ಒಕ್ಕುವ ಅಂಗಳದಾಗ ಬೆಂಕಿ ಬಿದ್ದದ".

ಯಾರಿಗೆ ಮೊದಲು ಎಚ್ಚರವಾಯಿತೊ, ಯಾರು ಎದ್ದು ಹೊರಗೆ ಬಂದರೊ ಅವರೂ ಅದೇ ರೀತಿ ಕೂಗತೊಡಗಿದರು ಕೆಲವು ಹೊತ್ತು ಏನು ನಡೆದಿದೆ ಯಾವ ಅನಾಹುತವಾಗಿದೆಯೆಂದು ನೋಡದೆ ಜನರ ಕೂಗಿನಿಂದ ಪರಿಸರ ಧುಮುಧುಮಿಸಿತು. ಬೆಂಕಿ ನೋಡಿ ಗಾಬರಿಯಾದ ಜನ ಮನೆಯಲ್ಲಿದ್ದ, ಅಂಗಳದಲ್ಲಿದ್ದ, ಹಿತ್ತಲಲ್ಲಿದ್ದ ನೀರಿನ ಕೊಡಗಳನ್ನೆತ್ತಿಕೊಂಡು ಬೆಂಕಿ ಬಿದ್ದ ಅಂಗಳದತ್ತ ಓಡಿದರು. ಕೆಲವರು ಖಾಲಿಯಿದ್ದ ಕೊಡ ಬಿಂದಿಗೆಗಳನ್ನು ಬಾವಿಯಿಂದ ತುಂಬಿಸಿಕೊಂಡರು.

ಹತ್ತು ಹನ್ನೆರಡು ಗಂಡಸರು, ಹೆಂಗಸರು ಮಕ್ಕಳು ಮರಿಗಳೆಲ್ಲರೂ ಆ ಹೊಲದಲ್ಲಿ ಹಿಂದೆ ಮುಂದೆ ಓಡಾಡುತ್ತಿದ್ದರು. ಬೆಂಕಿ ಹಿಡಿದ ಹುಲ್ಲಿನ ಬಣಿವೆಯ ಬೆಳಕು ಸುತ್ತಮುತ್ತ ಪಸರಿಸಿತ್ತು. ಅಷ್ಟರಲ್ಲಿ ಅಕ್ಕಪಕ್ಕದಲ್ಲಿ ಇನ್ನೆರಡು ಬಣಿವೆಗಳಿಗೂ ಬೆಂಕಿ ತಗುಲಿಕೊಂಡಿತ್ತು. ಇಂಥ ಝಗಝಗಿಸುವ ಬೆಳಕಿನಲ್ಲಿಯೇ ಈ ಜನರ ಓಡಾಟ ನಡೆದಿತ್ತು. ಕೂಗು, ಹಾಹಾಕಾರ ಕೇಳುತಿತ್ತು.

ಒಟ್ಟಿಗೆ ಮೂರು ಬಣಿವೆಗಳಿಗೆ ಬೆಂಕಿ ಹಿಡಿದಿತ್ತು. ಒಂದು ಬಣಿವೆಯಂತೂ ಪೂರ್ತಿ ಬೆಂಕಿಗಾಹುತಿಯಾಗಿತ್ತು. ಇನ್ನೆರಡು ಬಣಿವೆಗಳಿಗೆ ಆಗಷ್ಟೇ ಬೆಂಕಿ ಹತ್ತಿಕೊಂಡಿದ್ದರಿಂದ ಆ ಬೆಂಕಿ ಬಣಿವೆಯ ಗರ್ಭದಲ್ಲಿ ತೆನೆಗಳ ರಾಶಿಯತ್ತ ಇನ್ನೂ ಹಬ್ಬಿರಲಿಲ್ಲ. ಅರ್ಧ ಬೆಂಕಿ ಹತ್ತಿದ ಬಣಿವೆಗೆ ಕುಂಬಾರರು ನೀರು ತಂದು ಸುರಿದು ಆರಿಸಿದರು. ಆದರೆ ಮೊದಲು ಉರಿಯುತ್ತಿದ್ದ ಬಣಿವೆಗೆ ಎಷ್ಟು ನೀರು ಸುರಿದರೂ ಬೆಂಕಿ ನಿಯಂತ್ರಣಕ್ಕೆ ಬರುತ್ತಿರಲಿಲ್ಲ. ಮತ್ತೆ ಬೆಂಕಿ ಹೆಚ್ಚಾಗುತ್ತ ಹೋಯಿತು. ಈ ಆಳೆತ್ತರದ ಬಣಿವೆ ಹುಲ್ಲು ಬೂದಿಯಾಗಿ ತೆನೆಗಳ ರಾಶಿಯತ್ತ ಬೆಂಕಿ ನಾಲಿಗೆ ಚಾಚಿದ್ದರಿಂದ ಭರಭರ ಬೆಂಕಿ ಗಗನಕ್ಕೇರುತಿತ್ತು. ಒಂದು ಮಹಾಜ್ಯೋತಿ, ದೊಡ್ಡ ಮಶಾಲು ಉರಿದಂತೆ.

ತಮ್ಮ ಕಣ್ಣ ಮುಂದೆ ಧಾನ್ಯದ ರಾಶಿಯೆಲ್ಲ ಬೆಂಕಿಗಾಹುತಿಯಾದುದನ್ನು ನೋಡಿ ಕುಂಬಾರರೆಲ್ಲ ಚಡಪಡಿಸುತ್ತಿದ್ದರು. ಈ ಬೆಂಕಿ ಅಕ್ಕ ಪಕ್ಕದಲ್ಲಿರುವ ಬಣಿವೆಗಳಿಗೆ ತಗಲಬಾರದೆಂದು ಅದರ ಮೇಲೆ ನೀರು ಸಿಂಪಡಿಸಿದರು.

ಅತ್ತಕಡೆ ವಿಶ್ರಾಮ ರೈತರ ಕೇರಿಯತ್ತ ಧಾವಿಸಿದ್ದ. ಕೇರಿಯ ಒಳಗೆ ಕಾಲಿಡುತ್ತಲೆ "ಓಡಿ ಬರ್ರಪೊ, ನಿಮ್ಮ ಬತ್ತದ ಬಣಿಗೆಗೆ ಬೆಂಕಿ ಬಿದ್ಯದ. ಬಣಿವೆಗೆ ಬೆಂಕಿ ಬಿದ್ದ್ಯದ ಬರ್ರಪೊ.." ಎಂದು ಒಂದೇ ಸವನೆ ಕೂಗಿ ಜನರನ್ನು ಎಚ್ಚರಿಸುತ್ತಿದ್ದ. ಆ ಕತ್ತಲೆಯಲ್ಲಿ ಅವನೊಬ್ಬನೆ ಕೂಗಿಕೊಳ್ಳುತ್ತಿದ್ದ ಅವನೊಂದಿಗೆ ಊರ ನಾಯಿಗಳೆಲ್ಲ ಒಂದಾಗಿ ಒಂದೇ ಸವನೆ ಆಕಾಶ ಹರಿದು ಹೋಗುವಂತೆ ಬೊಗಳುತ್ತಿದ್ದವು.

ಇಪ್ಪತ್ತು ಇಪ್ಪತ್ತೈದು ಮನೆಗಳಿರುವ ಜನ ವಸತಿ. ಯಾರದ್ದೋ ಮನೆಯ ಮುಂದೆ ಕೂಗಿದ್ದು ಒಳಗಿದ್ದವನಿಗೆ ಕೇಳಿಸಿತು. ಅವನು ಹೊರಗೆ ಬಂದು ಪಕ್ಕದ ಮನೆಯ ಬಾಗಿಲು ತಟ್ಟಿದ್ದ. ಇನ್ನೊಬ್ಬ ಮತ್ತೊಬ್ಬನ ಮನೆಯ ಬಾಗಿಲು ತಟ್ಟುತ್ತ ಇಡಿಯ ಕೇರಿಯೇ ಎಚ್ಚರ ವಾಯಿತು. ಎಲ್ಲರೂ ತಡಮಾಡದೆ ಹೊರಬಂದರು. "ದೇವರೇ ಘಾತವಾಯಿತು. ನಮ್ಮ ಹೊಟ್ಟೆ ಬೆಂಕಿಯ ಬಲೆಯಲ್ಲಿ ಬಿದ್ದುಹೋಯಿತು" ಎಂದು ಎಲ್ಲರೂ ಹೊಟ್ಟೆ ಬಡಿದುಕೊಂಡು ಅಳತೊಡಗಿದರು.

ಅವರು ಒಕ್ಕುವ ಕಣಕ್ಕೆ ಬಂದಾಗ ಕುಂಬಾರರೆಲ್ಲ ಅರ್ಧ ಸುಟ್ಟ ಬಣಿವೆಗಳ ಮುಂದೆ ನಿಂತಿದ್ದರು. ಒಂದು ಬಣಿವೆ ಪೂರ್ತಿ ಸುಟ್ಟುಹೋಗಿತ್ತು. ಅದರ ಬೂದಿ ರಾಶಿಯಿಂದ ಒಂದು ರೀತಿಯ ಹೊಗೆ ಬರುತಿತ್ತು.

ನೀಲಿ ಆಕಾಶದಲ್ಲಿ ನಕ್ಷತ್ರಗಳ ರಾಶಿ ಲಕಲಕಿಸುತಿತ್ತು. ಚಳಿಗಾಲದಲ್ಲಿ ಗಡಗಡ ನಡುಗುತ್ತ ಕೆಲವರು ಕುಳಿತಿದ್ದರು. ಇನ್ನೊಂದು ಕಡೆ ರೈತರು... ಆ ಮಬ್ಬುಗತ್ತಲೆಯಲ್ಲಿ ಎಲ್ಲರೂ ಒಂದೇ ರೀತಿಯಾಗಿ, ಆಪ್ತರಂತೆ ಕಾಣುತ್ತಿದ್ದರು. ನಿಜಕ್ಕೂ ಅವರು ಒಂದು

ಗಂಡಾಂತರದಿಂದ ಪಾರಾಗಿದ್ದರು. ಆ ಸಂತಸ ಹಂಚಿಕೊಳ್ಳುವ ಬದಲು ಎಲ್ಲಾ ಬಣಿವೆಗಳಿಗೆ ಬೆಂಕಿ ಬಿದ್ದರೆ ಏನಾಗುತ್ತಿತ್ತು ಎಂದು ಅವರು ಚಿಂತಿಸುತ್ತ ಕುಳಿತಿದ್ದರು. ಅವರಲ್ಲಿ ಒಬ್ಬ ಎಲ್ಲರಿಗೂ ಕೇಳಿಸುವಂತೆ "ನಾವ್ ಇಲ್ಲಿ ಎಷ್ಟೋ ವರ್ಷದಿಂದ ಬಂಧು ಬಾಂಧವರಂತೆ ಉಳಿದಿದ್ದೇವೆ. ನೀವು ಮುಂದಾಗಿ ಬಂದು ನಮ್ಮ ಬಣಿವೆಗಳ ರಕ್ಷಣೆ ಮಾಡಿದ್ರಿ, ನಿಮ್ಮನ್ನು ಎಂದೆಂದೂ ಮರೆಯುವುದಿಲ್ಲ" ಎಂದು ಹೇಳುತ್ತಿದ್ದ.

ಕುಂಬಾರ ಪುರುಶ್ಯಾನು ಆ ಧ್ವನಿಯನ್ನು ಸರಿಯಾಗಿ ಗುರುತಿಸಿದ. ಅವನು ಖುಶಾಲಿ. ಒಂದು ವರ್ಷದ ಹಿಂದೆ ಕುಂಬಾರಕೇರಿಗೆ ಹೊಂದಿಕೊಂಡಿದ್ದ ಜಮೀನು ತನ್ನದು ಎಂದು ಹೇಳಿ ಬೇಲಿ ಹಾಕಲು ಬಂದಿದ್ದ. ಬೇಲಿ ಹಾಕುವುದನ್ನು ತಡೆದಿದ್ದಕ್ಕೆ ಕೆಟ್ಟ ಕೆಟ್ಟ ಬಯ್ಗಳು ಹಾಕಿ ಹೋಗಿದ್ದ. ಅವನ ಬಣಿವೆಗೇ ಬೆಂಕಿ ತಗುಲಿಕೊಂಡಾಗ ಕುಂಬಾರರೆಲ್ಲ ನೀರು ಹಾಕಿ ಬೆಂಕಿನ ನಂದಿಸಿದ್ದು.

ಯಾರೋ ಒಬ್ಬರು ಪೂರ್ತಿ ಬೆಂಕಿಗಾಹುತಿಯಾಗಿ ಬೂದಿಯಾಗಿದ್ದ, ಈಗ ತಣ್ಣಗೆ ಹೊಗೆ ಬಿಡುತ್ತಿರುವ, ಬೂದಿಯ ರಾಶಿಯ ಮೇಲೆ ಒಂದೆರಡು ಕೊಡ ನೀರು ಹಾಕಿ ನಂದಿಸಿದ ಬಳಿಕ ಕುಂಬಾರರೆಲ್ಲ ಮನೆಗೆ ಹೋದರು.

ಮರುದಿನ ರೈತರೆಲ್ಲ ಒಕ್ಕಲು ಕಣಕ್ಕೆ ಬಂದು ಏನೊ ಗುಣಗುಣಿಸುತ್ತಿದ್ದರು. ಆಗ ಅವರಿಗೆ ಗೊತ್ತಾಯಿತು. ಬೆಂಕಿ ಹೊಲದ ಒಂದು ಕಡೆಯಿಂದ ಉರಿಯುತ್ತ-ಉರಿಯುತ್ತ ಬಂದು ಬಣಿವೆಗೆ ಕಚ್ಚಿಕೊಂಡಿದೆ.

...ನಿನ್ನ ಸಂಜೆ ಸೈರೊಬಾ ತನ್ನ ಹೊಲದಲ್ಲಿ ಮೇರೆ ಹಾಕುವ ಕೆಲಸ ಮಾಡುತ್ತಿದ್ದ. ಅವನು ಮನೆಯಿಂದ ಬರುವಾಗ ಬೀಡಿಗೆ ಬೆಂಕಿ ಬೇಕಾಗುತ್ತದೆಯೆಂದು ಒಂದು ಬೆರಣಿ ಉರಿಸಿಕೊಂಡು ಬಂದಿದ್ದ. ಮನೆಗೆ ಹೋಗುವಾಗ ಉರಿಯುವ ಬೆರಣಿ ಅಲ್ಲೆ ಬಿಟ್ಟು ಹೋಗಿದ್ದ. ಅದು ಗಾಳಿಗೆ ಅಲ್ಲಿರುವ ಹುಲ್ಲಿಗೆ ತಗುಲಿ ಸರಿದು ಒಕ್ಕುವ ಕಣದವರೆಗೆ ಬಂದಿತ್ತು. ಅಲ್ಲಿ ಚದುರಿ ಬಿದ್ದಿದ್ದ ಹುಲ್ಲಿಗೆ ಬೆಂಕಿ ಅಂಟಿಕೊಂಡು ಹುಲ್ಲಿನ ಬಣಿವಗೆ ತಾಗಿತ್ತು.

*  *  *

**ವ**ರ್ಷದ ಹಿಂದೆ ಚಂದ್ರಕಾಂತನ ಮದುವೆಯಾಗಿತ್ತು. ಅವನು ಬಾಳ್ಳಿಯಲ್ಲಿ ಲಗ್ನ ಮಾಡಿಕೊಂಡು ಹೆಂಡತಿಯನ್ನು ಕರೆದು ತಂದಿದ್ದ. ಅವಳು ಕಾಣಲು ಸುಂದರವಾಗಿ ದ್ದಳಂತಲ್ಲ. ಆದರೆ ನಾಲ್ಕನೆಯ ಇಯತ್ತೆಯವರೆಗೆ ಓದಿದ್ದಳು ಮತ್ತು ಚೆನ್ನಾಗಿ ಫ್ಯಾಶನ್ ಮಾಡುತ್ತಿದ್ದಳು. ಅವಳ ಹತ್ತಿರ ಮೇಕಪ್ ಬಾಕ್ಸ್ ಇತ್ತು. ಪೇಟೆಯಿಂದ ಶಾಂಪೂವಿನ ಚಿಕ್ಕ ಪಾಕೀಟುಗಳನ್ನು ತಂದು ಅವಳು ಸ್ನಾನ ಮಾಡುತ್ತಿದ್ದಳು ಅವಳ ಟ್ರಂಕಿನಲ್ಲಿ ಸಲ್‌ವಾರ್ ಮತ್ತು ಕಮೀಜಗಳ ಎರಡು ಜೋಡಿಗಳಿದ್ದವು. ಅಂತ ಹೇಳುತ್ತಾರೆ. ಆದರೆ ಈ ಕುಂಬಾರ ಕೇರಿಯಲ್ಲಿ ಅದನ್ನು ಧರಿಸುವುದಾಗುತ್ತಿರಲಿಲ್ಲ. ಅವುಗಳನ್ನು ಆಗಾಗ್ಗೆ ಟ್ರಂಕಿನಿಂದ ತೆಗೆದು ಧೂಳು ಜಾಡಿಸಿ ಇಡುತ್ತಿದ್ದಳು.

ಮದುವೆಗೆ ಮುಂಚೆ ಅವಳು ಒಂದೂವರೆ ವರ್ಷ ವಾಸ್ಕೋದಲ್ಲಿ ಇರುವ ಮಾವಶಿಯ ಮನೆಯಲ್ಲಿರುತ್ತಿದ್ದಳು. ಮಧ್ಯೆ ಮಧ್ಯೆ ಹೆಂಗಸರಿಗೆ ವಾಸ್ಕೋ ಶಹರದ ಕತೆಗಳನ್ನು ಹೇಳುತ್ತಿರುತ್ತಿದ್ದಳು. ವಾಸ್ಕೋ ಸಪ್ತಾಹದಾಗ... ನಿಮಗ ಗೊತ್ತದ ಏನು

ಮಾವಶಿಯ ಮನಿ ಮುಂದ ಸಮುದ್ರದ ಬಂದರಿನಾಗ ಬೋಟಗಳು ನಿಂತಿರುತ್ತಿದ್ದವು. ದೊಡ್ಡ ದೊಡ್ಡ ಬೋಟ್‌ಗಳು...

ಅವಳ ತಂದೆ ಬಾಳ್ಳಿಯಲ್ಲಿ ಕುಂಬಾರಿಕೆ ಮಾಡುತ್ತಿದ್ದ. ಬೇಸಿಗೆಯಲ್ಲಿ ಕಾಜೂ ತೋಟದಲ್ಲಿ ಕೆಲಸ ಮಾಡುತ್ತಿದ್ದ. ಮಳೆಗಾಲದಲ್ಲಿ ಹೊಲದ ಕೆಲಸಕ್ಕೆ ಹೋಗುತ್ತಿದ್ದ. ಅವರು ನಾಲ್ಕು ಜನ ಅಣ್ಣತಮ್ಮಂದಿರು, ತುಂಬ ಬಡತನವಿತ್ತು. ಅದರಲ್ಲೂ ಅವರ ಜಾತಿಯ ಕುಂಬಾರರು ಕಡಮೆಯೆಂದರೆ ಕಡಿಮೆ, ಹುಡುಗಿಗೆ ವರ ಹುಡುಕಲು ಊರೂರು ಅಲೆಯಬೇಕಾಗುತಿತ್ತು.

ಒಂದು ಬಾರಿ ವಿಶ್ರಾಮನ ಹೆಂಡತಿ ಬಾಳ್ಳಿಗೆ ತನ್ನ ಸಹೋದರಿಯ ಮನೆಗೆ ಹೋಗಿದ್ದಾಗ ಅವಳು ರಜನಿಯ ತಂದೆಗೆ ಸಹಜವಾಗಿ "ನಮ್ಮ ಕೇರ್ಯಾಗ ಚಂದ್ರಕಾಂತ ಅಂತ ಒಳ್ಳೇ ಹುಡುಗ ಅದಾನ... ಅಂವಗ ರಜನಿ ಕೊಟ್ಟರ ಚಂದ ಜೋಡಿ ಆಗುತ್ತಿತ್ತು" ಎಂದಿದ್ದಳು.

ದೇವರೆ ಆಕೆಯ ಬಾಯಿಯಲ್ಲಿ ನುಡಿಸಿರಬೇಕು ಎಂದು ಭಾವಿಸಿ ರಜನಿಯ ತಂದೆ ತಡಮಾಡದೆ ಶ್ರೀಮಂತಿಯ ಜೊತೆಗೆ ಮಾಜಾಳಿಗೆ ಬಂದು ಎಲ್ಲ ಮಾತುಕತೆಯಾಡಿ ಮದುವೆ ನಿಶ್ಚಯ ಮಾಡಿಯೇ ಹೋದ.

ತವರು ಮನೆಗಿಂತ ಇಲ್ಲಿ ಬಡತನ ಸ್ವಲ್ಪ ಜಾಸ್ತಿ ಇದ್ದೇ ಇತ್ತು. ಅಲ್ಲದೆ ಬೇರೆ ಯಾವ ಆಡಂಬರವೂ ಇಲ್ಲಿರಲಿಲ್ಲ. ಮುಖಕ್ಕೆ ಹಚ್ಚುವ ಪೌಡರ್, ಸುವಾಸನೆಯ ಸಾಬೂನು ಕೂಡ ಇಲ್ಲಿ ಅಪರಿಚಿತವಾಗಿತ್ತು. ಯಾರಿಗಾದರೂ ಮನಸ್ಸು ಬಂದರೆ ಪೇಟೆಯಿಂದ ಎಂದಾದರೊಮ್ಮೆ ಸುವಾಸನೆಯ ಸಾಬೂನು ತರುತ್ತಿದ್ದರು. ಅಂದು ಮನೆಯಲ್ಲೆಲ್ಲ ದೊಡ್ಡ ಹಬ್ಬವೇ.

ತಲೆಯ ಮೇಲೆ ಗಡಿಗೆಯ ಹೆಡಿಗೆ ಎತ್ತಿಕೊಂಡು ಹೋಗುವುದಿದ್ದರೂ ರಜನಿ ಮುಖಕ್ಕೆ ಪೌಡರ್ ಹಚ್ಚಿಕೊಂಡು ಹೋಗುವುದನ್ನು ಮರೆಯುತ್ತಿರಲಿಲ್ಲ. ಕೆಲವು ಹೆಂಗಸರು ಹಿಂದಿನಿಂದ ಗುಸುಗುಸು ಮಾಡುತ್ತಿದ್ದರು. ಹೆಣ್ಣು ಮಕ್ಕಳಿಗೆ ಇದೊಂದು ಚರ್ಚೆಯ ವಿಷಯವೇ ಆಗಿತ್ತು. ಒಂದು ದಿನ ಅತ್ತೆ ಹೇಳಿದರು "ಮಾರಿಗೆ ಪೌಡರ್ ಯಾಕೆ ಬೇಕು ಸ್ವಲ್ಪ ಜೇಡಿಮಣ್ಣು ಹಚ್ಚಿಕೊಂಡರಾಗೂದಿಲ್ಲೇನು?"

ಹಾಗೆ ನೋಡಿದರೆ ಚಂದ್ರಕಾಂತ ತೀರ ಸಾದಾ-ಸರಳ ಮನುಷ್ಯನಾಗಿದ್ದ. ಇತರ ಯುವಕರು ಪ್ಯಾಂಟ್ ಶರ್ಟ್ ಹಾಕುತ್ತಿದ್ದರೆ ಚಂದ್ರಕಾಂತ ಮಾತ್ರ ಹಾಫ್ ಪ್ಯಾಂಟೇ ಧರಿಸುತ್ತಿದ್ದ. ಅದರ ಮೇಲೆ ಶರ್ಟು ಬಿಡುತ್ತಿದ್ದ. ಕೆರೆಗೆ ಹೋದಾಗ ಹೆಂಡತಿ ಅಡವಿಯಲ್ಲಿ ಸುತ್ತಾಡಿಕೊಂಡು ಬರೋಣ ಬನ್ನಿ' ಅಂತ ಕರೆದರೆ "ಅಲ್ಲ್ಯಾಕ ಹೋಗೂದು, ಕಲ್ಲು ಮುಳ್ಳು ಇರ್ತಾವಲ್ಲ" ಅನ್ನುತ್ತಿದ್ದ.

ಸದಾಶಿವಗಡದಲ್ಲಿ ಮಹಾಮಾಯಿಯ ಜಾತ್ರೆಯಿತ್ತು. ಹತ್ತು ಹನ್ನೆರಡು ಹೆಡಿಗೆ ಗಡಿಗೆ ಖರ್ಚಾಗುತಿತ್ತು. ವಾಡೆಯ ಹೆಣ್ಣು ಮಕ್ಕಳೆಲ್ಲ ಹೆಡಿಗೆ ತೆಗೆದುಕೊಂಡು ಒಟ್ಟಾಗಿ ಹೋಗುತ್ತಿದ್ದರು. ಆದರೆ ಈಗ ಮಂದಿಗೆ ಜಾತ್ರೆಯಲ್ಲಿ ಕೈಯಲ್ಲಿ ಗಡಿಗೆ ಹಿಡಿದುಕೊಂಡು ಹೋಗಲು ನಾಚಿಕೆಯಾಗುತಿತ್ತು. ಈ ವರ್ಷ ರಜನಿಯ ಮಾವ ಶಿವರಾಮ ಸೊಸೆಯನ್ನು

ಜೊತೆಗಿಟ್ಟುಕೊಂಡು ಕೇವಲ ಎರಡು ಹೆಡಿಗೆ ಗಡಿಗೆಗಳನ್ನು ಜಾತ್ರೆಯ ಸ್ಥಳಕ್ಕೊಯ್ದು ಮುಟ್ಟಿಸಿದ್ದ. ಬೆಳಗ್ಗೆ ಗಡಿಗೆಗಳನ್ನು ವ್ಯವಸ್ಥಿತವಾಗಿ ಜೋಡಿಸಿಕೊಟ್ಟು ಅವನು ಮನೆಗೆ ಮರಳಿ ಬಂದಿದ್ದ. "ಖರ್ಚಾದಷ್ಟು ಖರ್ಚಾಗ್ಲಿ. ಉಳಿದ ಗಡಿಗೆಯ ಹೆಡಿಗೆ ತಾಮಣಕರನ ಅಂಗಡಿಯ ಬಾಜೂ ಇಟ್ಟು ಸಂಜಿ ಮನೆಗೆ ಬಂದು ಬಿಡು" ಎಂದು ಅವನು ಸೊಸೆಗೆ ಹೇಳಿಬಂದಿದ್ದ.

ಅವನು ಹೇಳಿದಂತೆ ಆಕೆ ಸಂಜೆ ಮನೆಗೆ ಬಂದಳು. ಎರಡನೆಯ ದಿನ ಅವಳ ಗಂಡ ತಲೆಯ ಮೇಲೆ ಬುಟ್ಟಿ ಇಟ್ಟುಕೊಂಡು ಅವಳ ಜೊತೆಗೆ ಹೋದ. ಅವನೂ ರಜನಿಗೆ ಗಡಿಗೆಯ ಮಾರಾಟಕ್ಕಿಟ್ಟು ಮನೆಗೆ ಬಂದ. ಎರಡು ದಿನವೂ ಅವಳು ಮುಸ್ಸಂಜೆಯ ಹೊತ್ತಿಗೆ ಮನೆ ತಲುಪಿದ್ದಳು.

ಮೂರನೆಯ ಮತ್ತು ಕೊನೆಯ ದಿನ ತಾನೊಬ್ಬಳೇ ಹೋಗಿ ಉಳಿದ ಗಡಿಗೆಗಳನ್ನು ಮಾರಿ ಮನೆಗೆ ಬರುತ್ತೇನೆಂದು ಹೇಳಿ ಹೋಗಿದ್ದಳು.

ಆ ದಿನ ಮಾತ್ರ ಮುಸ್ಸಂಜೆಯಾಯಿತು, ಸಂಜೆಯಾಯಿತು, ರಾತ್ರಿಯಾಯಿತು. ಆದರೂ ಅವಳು ಮನೆಗೆ ಬರಲಿಲ್ಲ. ಈ ಹೊತ್ತು ಉಳಿದುದೆಲ್ಲವನ್ನು ತೆಗೆದುಕೊಂಡು ಬರಲು ಆಕೆಗೆ ಹೇಳಿದ್ದರು! ಅವಳ ಗಂಡ ಮತ್ತು ಮಾವ ಅವಳು ಯಾಕೆ ಬರಲಿಲ್ಲವೆಂದು ನೋಡಲು ಒಂದು ಒಂದೂಕಾಲು ಗಂಟೆ ನಡೆದು ಜಾತ್ರೆ ನಡೆಯುವ ಸ್ಥಳಕ್ಕೆ ಹೋಗಲು ಹೊರಟರು. ಅವರಿಬ್ಬರೂ ಗಾಬರಿಯಿಂದ ಓಟದಂತೆ ನಡೆದು ಹೋಗುತ್ತಿದ್ದರು. ಹೋಗುವಾಗ ದಾರಿಯಲ್ಲಿ ಮಾತು ನಡೆದಿತ್ತು.

"ನಾವು ಆಕಿ ಒಬ್ಬಳಿಗೆ ಬಿಡಬಾರದಿತ್ತು ಕಾಂತು. ಈಗ ಕಾಲ ಬರಾಬರಿ ಇಲ್ಲ... ಎಲ್ಲಾ ಕೆಟ್ಟು ಹೋಗ್ಯೈತಿ"

"ಹೌದು, ಆಕಿಗ ಸ್ವಲ್ಪ ಓದಾಕ ಬರಿಯಾಕ ಬರ್ತದ. ನಾಟಕದಾಗ ಮಾತಾಡಿದ್ಹಾಂಗ ಮಾತಾಡತಾಳ."

"ತವರಮನೆಗೇನಾರು ಹೊಕ್ಕೀನಿ ಅಂತಿದ್ಳೇನು?"

"ಇಲ್ಲ ನನಗ ಗೋವೆಗೆಲ್ಲಾದ್ರೂ ನೌಕರಿಗ ಹೋಗು ಅಂತಿದ್ಲು"

"ಕನ್ನಡ ನಾಕನೆತ್ತಿ ಪಾಸಾಗಿದ್ದೀ ನೀನ್, ಈಗ ಅದೂ ಮರ್ತು ಹೋಗ್ಯದ. ಗೋವೆಗೆ ಹೋಗಿ ದಾರಿ ಮ್ಯಾಗ ಬಿಳೂದ ಇತ್ತು" ಎಂದು ತಂದೆ ಹೇಳಿದ.

ಮಹಾಮಯಾ ದೇವಾಲಯದ ಹತ್ತಿರ ಹೋದಾಗ ಅಲ್ಲಿ ಜಾತ್ರೆಗೆ ಹಾಕಿದ ಅಂಗಡಿಗಳೆಲ್ಲ ಸುತ್ತಿಕೊಂಡು ಹೋಗಿದ್ದರು. ಆ ಪರಿಸರ ನಿಧಾನವಾಗಿ ಖಾಲಿಯಾಗ ತೊಡಗಿತ್ತು. ಜನಗಳ ಗೌಜು-ಗದ್ದಲ ಇರಲಿಲ್ಲ. ಅಲ್ಲಿ-ಇಲ್ಲಿ ಕತ್ತಲೆ ಬೆಳಕುಗಳು ನೆರಳಿನಂತೆ ಬಿದ್ದಿತ್ತು. ದೇಗುಲದಲ್ಲಿ ನೋಡಿದರು. ಮೇಲೆ ಕಟ್ಟಿದ ಗಂಟೆಗಳು ಮೌನ ತಳೆದಿದ್ದವು. ಗರ್ಭಗುಡಿಯಲ್ಲಿ ಉಜ್ವಲವಾಗಿ ಬೆಳಗುತ್ತಿದ್ದ ದೀಪಗಳು ಮಂಕಾಗಿ ಹೋಗಿದ್ದವು. ಶಿವರಾಮ ಮನಸ್ಸಿನಲ್ಲಿಯೇ "ಇಷ್ಟು ದೊಡ್ಡ ಜಾತ್ರ್ಯಾಗ ಗರ್ಭಗುಡ್ಯಾಗ ಹಿಂಗ್ಯಾಕ ಮಬ್ಬ ಕವಿದದ" ಎಂದು ಮನಸ್ಸಿನಲ್ಲಿಯೇ ಗೊಣಗಿದ. ಆಗ ಅವರಿಗೆ "ನಿನ್ನೆಯೇ ಜಾತ್ರೆ

ಮುಗಿದು ಹೋಯಿತು" ಎಂದು ಗೊತ್ತಾಯಿತು. ಈ ಹೊತ್ತು ಕೆಲವೇ ಅಂಗಡಿಯವರು ಇದ್ದು ಗ್ರಾಹಕರ ದಾರಿ ಕಾಯುತ್ತಿದ್ದರು.

ಅವರು ಗಡಿಗೆಯ ಅಂಗಡಿ ಇಟ್ಟ ಸ್ಥಳಕ್ಕೆ ಬಂದು ನೋಡಿದರೆ ಅಲ್ಲಿ ಯಾರೂ ಇರಲಿಲ್ಲ. ಅಲ್ಲಿರುವ ತಾಮ್ರ, ಹಿತ್ತಾಳೆಯ ಅಂಗಡಿಯವರೂ ಗಂಟು ಮೂಟೆ ಕಟ್ಟಿಕೊಂಡು ಹೊರಟು ಹೋಗಿದ್ದರು. ಮಂಟಪ ಪೂರ್ತಿ ಖಾಲಿಯಾಗಿತ್ತು. ಮಂಟಪದ ಒಂದು ಮೂಲೆಯಲ್ಲಿ ಗಡಿಗೆಗಳಿಂದ ತುಂಬಿದ ಹೆಡಿಗೆಯೊಂದು ಇಟ್ಟಿದ್ದರು. ಅದರ ಮೇಲೆ ಕಟ್ಟುವ ಹಗ್ಗವನ್ನೂ ಕಟ್ಟಿರಲಿಲ್ಲ. ಹೆಡಿಗೆಯ ಬಾಯಿ ತೆರೆದೇ ಇತ್ತು. ಅದನ್ನು ನೋಡಿ ಶಿವರಾಮನ ಎದೆಯ ಮೇಲೆ ಮುಷ್ಟಿಯಿಂದ ಗುದ್ದಿದಂತಾಯಿತು.

ಚಂದ್ರಕಾಂತ ನುಡಿದ "ಹಾದ್ಯಾಗ ಎಲ್ಲಾದರೂ ತಪ್ಪಿ ಹೋಗಿರಬೇಕು. ಆಕಿ ಮನೆಗೆ ಹೋಗಿರ್‌ಬೇಕು ಬಾಬಾ."

"ಇಲ್ಲ ಕಾಂತೂ, ಹಂಗ ಅನಸೂದಿಲ್ಲ."

ಮುಂದೆ ಒಂದು ಮಿಠಾಯಿ ಅಂಗಡಿಯಿತ್ತು. ಅಲ್ಲಿ ಹೋಗಿ ಶಿವರಾಮ ಕೇಳಿದ "ಅಲ್ಲಿ ಗಡಗಿ ಮಾರಾಕ ಕುಂತ ಹೆಣ ಮಗಳು ಎಲ್ಲಿ ಹ್ವಾದಳು? ಮನೀಗ ಹೋಗಿಲ್ಲ ಇನ್ನೂ ಮಟ

ಮಿಠಾಯಿ ಅಂಗಡಿಯವ ಕೊಂಚ ಮಿಸುಕಾಡಿದಂತೆ ಕಂಡಿತು. ಆದರೆ ಅವರ ದೈನ್ಯದಿಂದ ಕೂಡಿದ ಮುಖಗಳನ್ನು ನೋಡಿ ಅವನು ಹೇಳಿದ. "ಸಂಜೆ ಹೊತ್ತು ಪಾತ್ರೆ ಅಂಗಡಿ ಕಟ್ಟಿದ್ದು ನೋಡಿದೆ. ಅವರು ರಾಮನ ಪಿಕಪ್‌ನಲ್ಲಿಟ್ಟುಕೊಂಡು ಹೋದರು. ಮಡಕೆ ಮಾರುವ ಹೆಣ್ಣು ಮಗಳು ಪಿಕಪ್‌ನಲ್ಲಿ ಮುಂದಿನ ಸೀಟಿನಲ್ಲಿ ಯಾರದ್ದೋ ಜೊತೇಲಿ ಕೂತಿದ್ದು ನೋಡಿದ್ದೆ."

ಶಿವರಾಮನ ಪಿತ್ತ ನೆತ್ತಿಗೇರಿತು "ಏನು?" ಅಂದ. ಚಂದ್ರಕಾಂತ ಅಳುವುದೊಂದೇ ಬಾಕಿಯಿತ್ತು.

ಮಿಠಾಯಿ ಅಂಗಡಿಯವ ಕೊಂಚ ತಗ್ಗಿ ಹೇಳಿದ. "ಒಬ್ಬನು ಹಣ ಪಡೆದು ಪಾತ್ರೆ ಪಡಗ ಮಾರುವ ಕೆಲಸ ಅಂಗಡಿಯಲ್ಲಿ ಮಾಡುತ್ತಿದ್ದ. ಮಡಕೆ ಮಾರುವ ಹೆಣ್ಣು ಮಗಳು ಅವನ ಕೂಡ ಸಲಿಗೆ ಬೆಳೆಸಿಕೊಂಡಿದ್ದಳು. ಅವರು ಗುಸುಗುಸು ಮಾತಾಡುತ್ತಿದ್ದರು ನಗುತ್ತಿದ್ದರು. ಮಡಕೆ ಮಾರುವುದನ್ನು ಬಿಟ್ಟು ಅವನೊಂದಿಗೆ ಮಾತಾಡುತ್ತ ಕೂಡುತ್ತಿದ್ದಳು. ಅವರಿಬ್ಬರೂ ತುಂಬಾ ಮಜಾ ಮಾಡುತಿದ್ದರು."

"ಎಲ್ಲಿ ಹೋಗಿರಬೇಕು ಅವರು" ಶಿವರಾಮ ಕೇಳಿದ.

"ಹ್ಯಾಗೆ ಹೇಳೋಕಾಗತ್ತೆ? ಪಿಕ್‌ಅಪ್‌ನಲ್ಲಿ ಕುಳಿತಾಗ ಅನ್ನಿಸ್ತು. ಅವಳನ್ನು ಅವನು ದಾರಿಯಲ್ಲೆಲ್ಲಾದ್ರೂ ಇಳಿಸಿ ಹೋಗ್ತಾನೇನೋ ಅಂತ"

"ಸುಮಾರು ಎಷ್ಟು ಗಂಟೆಗೆ ಹ್ವಾದ್ರು?"

"ನಾಲ್ಕರ ಸುಮಾರು. ಈಗ ಒಂಬತ್ತಾಗ್ತಾ ಇದೆ."

ಅಲ್ಲಿ ಒಂದು ಕಡೆ ಸರಿಸಿ ಮೂಲೆಯಲ್ಲಿಟ್ಟ ಮಡಕೆಯ ಹೆಡಿಗೆ ಹೊತ್ತುಕೊಂಡು ತಂದೆ ಮತ್ತು ಮಗ ಮನೆಯ ದಾರಿ ಹಿಡಿದರು. ದಾರಿಯಲ್ಲಿ ಅವರು ಒಂದೂ ಮಾತಾಡಲಿಲ್ಲ. ಅವರು ಆ ಕತ್ತಲೆಯಲ್ಲಿ ಮೌನವಾಗಿ ನಡೆಯುತ್ತಿದ್ದರೆ ಕತ್ತಲು ಒಂದು ದೆವ್ವದಂತೆ

ಅವರನ್ನು ಹಿಂಬಾಲಿಸುತ್ತಿತ್ತು. ಏನಾದರೂ ಮಾತಾಡಿದರೆ ತನ್ನ ಮುಗ್ಧ ಮಗ ಅಳತೊಡಗಬಹುದು ಎಂಬ ಅಂಜಿಕೆಯಿಂದ ಬಾಯಿ ಬಿಡದೆ ಮುಂದಡಿಯಿಡುತ್ತಿದ್ದ.

ಮನೆಗೆ ಬಂದು ಅವನು "ಯಾರ ಕೂಡನೊ ಓಡಿಹೋದ್ಲು ಆಕೆ" ಅಂದು ಅಷ್ಟೇ ಹೇಳಿದ.

ಮನೆಯಲ್ಲಿ ಅಳುವುದಕ್ಕೂ ಆಗುವುದಿಲ್ಲ, ಬೈಯುವುದಕ್ಕೂ ಆಗುವುದಿಲ್ಲವೆನ್ನುವಂಥ ಸಂದಿಗ್ಧ ಪರಿಸ್ಥಿತಿ.

ಆದರೆ ಕೇರಿಯಲ್ಲಿ ತಕ್ಷಣ ಈ ಸುದ್ದಿ ಹರಡಿತು. ಕೇರಿಯಲ್ಲಿ ಒಂದು ಬಗೆಯ ಮೌನ ಪಸರಿಸಿತು. ಆದರೆ ಈ ವಾರ್ತೆಯಿಂದ ಕುಂಬಾರರೆಲ್ಲ ಗಾಬರಿಯಿಂದ ನಡುಗಿದರು.

* * *

ರೈತರ ಮಕ್ಕಳೂ ಈಗ ಓದಿ ಪುಣೆ, ಮುಂಬಯಿಗೆ ನೌಕರಿಗೆ ಹೋಗುತ್ತಿದ್ದರು. ಹಣ್ಣು ಹಣ್ಣಾದ ಮುದುಕರು ಮಾತ್ರ ಊರಲ್ಲಿರುತ್ತಿದ್ದರು. ಅದರಿಂದ ಊರಿನ ಜಮೀನು ಹಾಳು ಬೀಳತೊಡಗಿತು. ಯಾರಾದರೂ ಜಮೀನು ಮಾಡುತ್ತೇನೆಂದು ಮುಂದೆ ಕಡಮೆ ಗೇಣಿಯಲ್ಲಿ ಜಮೀನು ಊಳಲು ಕೊಡುತ್ತಿದ್ದರು. ರೈತನ ಒಂದು ಹೊಲ ಗೇಣಿಗೆ ತೆಗೆದು ಕೊಳ್ಳುವುದು ಎಂದು ಗೋಪಾಳ ನಿರ್ಧರಿಸಿದ್ದ. ತನ್ನ ಯೋಜನೆಯನ್ನು ಅವನು ಊರಲ್ಲಿ ಅವರು– ಇವರಿಗೆ ಹೇಳುತ್ತ ತಿರುಗುತ್ತಿದ್ದ. ಬೇರೆ ಊರಿನ ಕುಂಬಾರರು ಒಕ್ಕಲುತನ ಮಾಡುತ್ತಿದ್ದರು. ಅವರಲ್ಲಿ ಕೆಲವರದು ಸ್ವಂತ ಜಮೀನು ಇತ್ತು. ಆದರೆ ಈ ಊರಿನಲ್ಲಿ ಮಾತ್ರ ಕುಂಬಾರರದ್ದೆ ಆದ ಜಮೀನು ಇರಲಿಲ್ಲ. ಅದರಿಂದ ಅವರು ರೈತರ ಹೊಲದಲ್ಲಿ ಕೂಲಿಗೆ ಹೋಗುತ್ತಿದ್ದರು. ಅವರು ತಮ್ಮದಾದ ಹೊಲದಲ್ಲಿ ಬೆಳೆ ಬೆಳೆದಿರಲಿಲ್ಲ.

ಕಳೆದ ಐದಾರು ವರ್ಷಗಳಿಂದ ನಾಲ್ಕೂ ದಿಕ್ಕಿನಲ್ಲಿ ಹಚ್ಚ ಹಸುರಾದ ಹೊಲಗಳು ಮೇಲೇಳುತ್ತಿದ್ದವು. ಅವು ತೆನೆಬಿಟ್ಟು ಹಣ್ಣಾದಾಗ ಹೊಲದಲ್ಲಿ ಚಿನ್ನ ಸಾರಿಸದಂತೆ ಕಾಣುತ್ತಿತ್ತು. ಈಗ ಹೊಲಗಳು ಕ್ರಮೇಣ ಅಲ್ಲಲ್ಲಿ ಹಾಳು ಬಿದ್ದಿದ್ದವು. ಸರಿಯಾದ ಕಾವಲು ಇರದ್ದರಿಂದ ಹೊಲದಲ್ಲಿ ಬೆಳೆದ ಬೆಳೆ ಪ್ರಾಣಿಗಳ ಪಾಲಾಗುತಿತ್ತು. ವರ್ಷವಿಡೀ ಹೊಲದಲ್ಲಿ ದುಡಿಯುವುದು ಯಾರಿಗೂ ಬೇಕಾಗಿರಲಿಲ್ಲ. ಮುಂಬೈ, ಪುಣೆ ನಗರಗಳಿಗೆ ನೌಕರಿಗೆ ಹೋದ ರೈತರ ತರುಣ ಮಕ್ಕಳು ರಜೆಯಲ್ಲಿ ಮನೆಗೆ ಬಂದಾಗ ಒಮ್ಮೆ ಹೊಲದಲ್ಲಿ ಸುತ್ತಾಡಿ ಬಂದು 'ಇನ್ನ ಹೊಲಗಿಲ ಮಾಡೂ ಭಾನಗಡ್ಯಾಗ ಬೀಳಬ್ಯಾಡ್ರಿ. ಇನ್ಮುಂದೆ ನಿಮ್ಮಿಂದ ಕಷ್ಟದ ದುಡಿತ ಆಗಲಿಕ್ಕಿಲ್ಲ" ಅನ್ನುತ್ತಿದ್ದರು.

ಅದೇ ತಾನೆ ಮಾಘ ಮಾಸ ಆರಂಭವಾಗಿತ್ತು. ಎಲ್ಲಿಂದಲೋ ಗೋಪಾಳ ಒಂದು ಎತ್ತಿನ ಜೋಡಿ ತಂದು ನಿಲ್ಲಿಸಿದ್ದ. ಅವು ಸೊರಗಿದ್ದವು, ನಿತ್ರಾಣವಾಗಿದ್ದವು. ಅವುಗಳ ಬೆನ್ನುಹುರಿ ಪೂರ್ತಿ ಬಗ್ಗಿತ್ತು, ಹೊಟ್ಟೆ ಕೆಳಗೆ ಜೋಲುತಿತ್ತು. ಜೋಡಿ ಎತ್ತು ತಂದು ಅವನು ಆವಿಗೆಯ ಹತ್ತಿರದ ಹಲಸಿನ ಮರದ ಕಂಬಕ್ಕೆ ಕಟ್ಟಿಹಾಕಿದ. ಅಲ್ಲಿ ಒಂದು ಬದಿಗೆ ನೇಗಿಲು, ಪೂರ್ತಿಯಾಗಿ ಸವೆದ ನೇಗಿಲು. ಅದರ ನಾಲಿಗೆ ಸವೆದಿತ್ತು. ಎತ್ತಿನ ಕೊರಳಿಗೆ ಹಾಕಿದ ಹಗ್ಗ ಪೂರ್ತಿ ಜೀರ್ಣವಾಗಿತ್ತು.

ಒಬ್ಬೊಬ್ಬನೇ ಕುಂಬಾರ ಬಂದು ನೋಡಿ ಹೋಗುತ್ತಿದ್ದ. ಹೋಗುವಾಗ ಮನಸ್ಸಿನಲ್ಲೇ

"ಯಾರದೋ ಎತ್ತು, ನೇಗಿಲು ಎಲ್ಲೋ ಬೇಡಿಕೊಂಡು ತಂದಿರಬೇಕು" ಎಂದು ಮನಸ್ಸಿನಲ್ಲಿ ನುಡಿಯುತ್ತಿದ್ದ. ಘನಶ್ಯಾಮ ಹೇಳಿಯೇ ಬಿಟ್ಟ "ಗೋಪಾಳಾ... ಎತ್ತು ಕಡಿಯಾಕ ಕರ್‍ಕೊಂಡ ಹೋಗ್ವಾಗ ನೀ ಬಿಡಿಸಿಕೊಂಡು ಬಂದೀಯೇನು? ನೀನ ತ್ರಾಸಿನಾಗ ಬೀಳ್ತೀ ನೋಡು."

"ಸದಾಶಿವನ ಎತ್ತಿನ ಜೋಡಿ ಅದು. ಎತ್ತಿಗೆ ವಯಸ್ಸಾಗ್ಯೆತಿ. ಒಂದೇ ಕಡಿ ಕಟ್ಟಿ ಹಾಕಿ ಮತ್ತಷ್ಟು ಸೊರಗಿ ಹೋಗ್ಯಾವ. ಅಂವಾ ಹೇಳ್ಯಾನ ಎತ್ತುಗಳನ್ನು ನೀನೇ ನೋಡಿಕೊ ಮತ್ತ ಕೆರಿ ಹತ್ರ ಇರೂ ಮೂರು ಎಕರಿ ಹೊಲ ನೀನೇ ಸಾಗುವಳಿ ಮಾಡಿಕೊಡು ಅಂತ ಹೇಳ್ಯಾನ. ನೀನೇನ್ ಕೊಟ್ರು ತಗೋತೀನಿ ಅಂತ ಹೇಳ್ಯಾನ"

"ಕೆರಿ ಮ್ಯಾಲಿನ ಹೊಲ ಅದು. ಊಳೂದು ಎಷ್ಟು ತ್ರಾಸ್ ಐತಿ ಅಂತ ಗೊತ್ತೈತೇನು? ಹೊಲ ಊಳೂ ಮುಂದ ಎತ್ತಿನ ಮುಕಳ್ಯಾಗಿಂದ ನೊರೆ ಬರತೈತಿ. ಹೆಂಟಿ ಮ್ಯಾಗ ಬಡದರೆ ಸಣ್ ಅಂತ ಆವಾಜ್ ಬರತದ. ರಟ್ಟಿ ಒಡದು ಒಡದು ಬಿದ್ದ ಹೋಗತದ ಅಂವಾ ಏನು ಕೊಡತಿಯೋ ಕೊಡು ಅಂದಾನೇನು? ಅದರಾಗೂ ಅಂವಾ ಕೊಂಕಣ್ಯಾರವ, ನಾಳಿ ಬೆಳಿ ಬಂದ ಮ್ಯಾಲ ಒಕ್ಕುವ ಕಣಕ್ಕ ಬಂದ ಕುಂತರ ಏನ್ ಮಾಡತಿ?"

ಮರುದಿನವೇ ಗೋಪಾಳನು ನೇಗಿಲು ಹೆಗಲ ಮೇಲಿಟ್ಟುಕೊಂಡು ಎತ್ತಿನ ಜೋಡಿ ಹೊಡಕೊಂಡು ಹೊಲಕ್ಕೆ ಹೋಗಿ ಕರೆಯ ಹತ್ತಿರ ಹೊಲದಲ್ಲಿ ಊಳಲು ತೊಡಗಿದ. ನೆಲ ಗಟ್ಟಿಯಾಗಿತ್ತು.

ನೇಗಿಲು ನೆಲದಲ್ಲಿ ಇಳಿಯುತ್ತಿರಲಿಲ್ಲ. ಕಲ್ಲಿನಂತಹ ಗಟ್ಟಿ ಹೆಂಟೆಗಳು ಹೊರಡುತ್ತಿದ್ದವು. ನೇಗಿಲು ಒತ್ತಿ ಹಿಡಿದು ಎತ್ತುಗಳ ಮೈಮೇಲೆ ಬಡಿಗೆಯಿಂದ ಬಾರಿಸುತ್ತ ತುಂಬ ಕಷ್ಟದಲ್ಲಿ ಆತ ನೆಲ ಊಳುತ್ತಿದ್ದ. ಕೈ ಒತ್ತಿ ಒತ್ತಿ ಹಿಡಿಯುವುದರಿಂದ ಕೈ ಮೇಲೆ ಭಾರ ಬಿದ್ದು ಹೆಗಲದವರೆಗೆ ಅದು ನೋಯುತ್ತಿತ್ತು. ಆದರೂ ಅವನಿಗೆ ತಾನೊಂದು ಒಳ್ಳೆಯ ಕೆಲಸ ಮಾಡುತ್ತಿದ್ದೇನೆ. ಹೇಗಾದರೂ ಗುರಿ ಮುಟ್ಟುತ್ತೇನೆ ಎಂಬ ಸಮಾಧಾನವಾಗುತಿತ್ತು.

* * *

**ಶಂ**ಕರ ಆಗಾಗ್ಗೆ ಸರಾಯಿ ಗುಟುಕರಿಸುತ್ತಿದ್ದ. ಹೆಂಡದ ಅಮಲಿನಲ್ಲಿ ಧಿಮಾಕಿನ ಮಾತನ್ನಾಡುತ್ತಿದ್ದ. ಆದರೆ ಈಗ ಅವನು ಕಂಬಳಿ ಹೊದ್ದುಕೊಂಡು ಮೌನವಾಗಿ ಎಲ್ಲೋ ನೋಡುತ್ತ ಕೂತಿರುತ್ತಿದ್ದ. ಜ್ವರ ಮೈಗೇರಿದಂತೆ ಕೈಗಳನ್ನು ಕಾಲಿಗೆ ಸುತ್ತಿಕೊಂಡು ಒಂದು ಗುಳ್ಳೆಯಂತೆ ಮಡಚಿಕೊಂಡು ಕೂತಿರುತ್ತಿದ್ದ. ಒಂದು ದಿನ ಅವನು ಓಡಿ ಓಡಿ ಸೀತವ್ವನಲ್ಲಿ ಬಂದ.

"ಸೀತ ಮಾವಶಿ, ನೋಡಿಯೇನು ಆವಿಗೆಯ ಮುಂದ ಒಂದು ಗೂಗೆ ಸತ್ತು ಬಿದ್ದದ. ರೆಕ್ಕಿ ಬಿಚ್ಕೊಂಡು ಬಿದ್ದದ ನೋಡಿಯೇನು?"

ಸೀತವ್ವ ಕೊಂಚ ತಬ್ಬಿಬಾದಳು. ಅವಳು ಲಗುಬಗೆಯಿಂದ ಆವಿಗೆಯ ಬಳಿ ಹೋದಳು. ಅಲ್ಲಿ ಏನೂ ಇರಲಿಲ್ಲ. "ಎಲ್ಯದೊ ಗೂಗಿ?"

ಕಣ್ಣಿಗ ಕಾಣಿಸ್ತು ಕರಿ ಬಣ್ಣದ ಛತ್ರಿ ಹಾಸಿ ಬಿದ್ಹಾಂಗ. ಅಲ್ಲೆಲ್ಲ ಕರ್‍ರಗ ಕರ್‍ರಗ ಏನೊ ಬಿದ್ದಿತ್ತು. ಈಗ ಅದೂ ಕಾಣಸೋದಿಲ್ಲ.

ಸೀತವ್ವ ಅವನನ್ನು ಸೂಕ್ಷ್ಮವಾಗಿ ನೋಡಿದಳು. "ಶಂಕರ, ಇನ್ನ ಮ್ಯಾಗ ದಿನಕ್ಕೆ

ಒಂದೆಡ್ಡಾದ್ರೂ ಗಡಿಗಿ ತಟ್ಟು, ಇಲ್ಲದಿದ್ರ ಲಗೂನ ಸತ್ತು ಹೋಗ್ತಿ. ಅದ ಕುಂಬಾರರ ಕಸಬು ಹಂಗ ಬಂದ್ ಮಾಡಾಕ ಬರೂದಿಲ್ಲ" ಅಂದಳು.

"ಗಡಗಿ ಮಾಡಿ ಎಲ್ಲಿ ಖರ್ಚ ಮಾಡಾಕ ಹೋಗ್ಲಿ ನಾನು? ಇಲ್ಲ ನನ್ನ ಹೆಣದ ಮ್ಯಾಗ ಒಡಿಯಾಕ ಮಾಡಿ ಇಡ್ಲೇನು? ನನ್ನ ಮಗ ಈಗ ಧಂದಿ ಮಾಡಾಕ ಹತ್ಯಾನ. ನಾ ಈಗ ಸುಮ್ಮ ಕುಂತ ತಿನ್ನಾಂವನದೀನಿ, ಅಂವಾ ಪೊಲೀಸರಿಗೆ ಸಾಕ್ತಾನಂತ ಗೊತ್ತೈತೇನು ನಿನಗ"

ಸೀತವ್ವ ಸುಮ್ಮನೆ ಹೊರಟು ಬಂದಳು. ಧಂದೆಯಂತೆ! ಯಾವಾಗ ಸರಾಯಿ ಸಹಿತ ಪೊಲೀಸ್ರು ಹಿಡ್ಕೊಂಡು ಹೋಗ್ತಾರೊ ಯಾರಿಗೆ ಗೊತ್ತು?

ಘನಶ್ಯಾಮನ ಮಗ ಸುರೇಶ ಕಳೆದ ನಾಲ್ಕೈದು ವರ್ಷಗಳಿಂದ ತಂದೆಯ ಜೊತೆಗೆ ಕುಂಬಾರಿಕೆ ಮಾಡುತ್ತಿದ್ದ. ಎಷ್ಟೋ ದಿನ ಅವನು ಧಂದೆ ಬಿಟ್ಟು ಊರು ಅಲೆಯುತ್ತಿದ್ದ. ಈಗ ಬೆಳಗ್ಗಿನ ಹೊತ್ತೇ ಅವನು ಮೈಮೇಲೆ ಕೊಳೆಯಾದ, ಎಣ್ಣೆಯಲ್ಲಿದ್ದಂತಹ ಅಂಗಿ ಮತ್ತು ಚಡ್ಡಿ ಹಾಕಿಕೊಂಡು ಎಲ್ಲೊ ಹೊರಟಿದ್ದ. ಅವನು ಯಾರದ್ದೋ ಟ್ರಕ್ಕಿನ ಮೇಲೆ ಕ್ಲೀನರ್ ಅಂತ ಕೆಲಸ ಮಾಡುತ್ತಿದ್ದಾನೆಂದು ಸೀತವ್ವನಿಗೆ ಗೊತ್ತಿತ್ತು "ಹೊಂಟೇನಪ್ಪ ಸುರೇಶ, ಟ್ರಕ್ ಯಾರದ್ದಂತ ಹೇಳಿದ್ದೀ ?"

"ಕಾಜುವಾಡೆಯ ವಿವೇಕ ಟ್ರಕ್ ತಗೊಂಡಾನವ್ವ, ಗೋವೆಯಲ್ಲಿ ಉಸುಕು ತುಂಬಾಕ ಹಚ್ಚ್ಯಾನ."

"ವಿವೇಕ ಅಂದ್ರ ನಾಗೇಶ ನಾಯಕನ ಹುಡುಗ ಅಲ್ಲೇನು ?"

"ಹೌಂದ...ಈಗ ನಾಗೇಶ ನಾಯಕ ರಿಟೈರ್ ಆಗ್ಯಾನಲ್ಲ ?"

"ಇನ್ನ ನೀ ದಿನಾ ಗೋವೆಗೆ ಹೋಗ್ತಿಯಂದ್ರ ಮಜಾ ನಿಂದು."

ಸುರೇಶ ನಕ್ಕ. "ಅವ್ನ ಡ್ರಾಯವರ್ ನನಗ ಟ್ರಕ್ ನಡಸಾಕ ಕಲಿಸ್ತೀನಿ ಅಂತ ಹೇಳ್ಯಾನ, ಮುಂದ ಲೈಸನ್ಸ್ ತೆಗೀತೀನಿ ನಾನು."

ಸುರೇಶ ಹೊರಟು ಹೋದ. ಕುಂಬಾರ ಈಗ ಟ್ರಕ್ ಕ್ಲೀನರ್ ಆಗಿದ್ದಾನೆ. ಇನ್ನು ಸ್ವಲ್ಪ ದಿನಗಳಲ್ಲಿ ಅವನು ಡ್ರೈವರ್ ಆಗುತ್ತಾನೆ ಎಂದು ಸೀತವ್ವ ಗಣಿತ ಹಾಕತೊಡಗಿದ್ದಳು. ಅವಳಿಗೆ ತಕ್ಷಣ ಸುರೇಶನಿಗೆ ಕರೆದು "ನನ್ನ ಮೊಮ್ಮಗಂಗ ಎಲ್ಲಾದರೂ ಕೆಲಸ ಇದ್ರೆ ನೋಡಪ್ಪ. ನಾಳಿ ಬರೂ ಗೋಕುಲಾಷ್ಟಮಿಗ ಹದಿನಾರು ಮುಗಿದು ಹದ್ನೇಳು ಶುರುವಾಗ್ತಾವ" ಎಂದು ಹೇಳಿ ಬಿಡಬೇಕೆನಿಸಿತು.

*  *  *

ಯಶವಂತ ಈಗ ಮನಸ್ಸು ಬಂದಾಗ ಗಡಿಗೆ ತಟ್ಟುತ್ತಿದ್ದ. ನಿಧಾನವಾಗಿ ಪುರಸೊತ್ತಾದಾಗ ಆವಿಗೆ ಹಚ್ಚುತ್ತಿದ್ದ. ಅವನ ಮಗ ಸದಾನಂದ ಕಲಿತು ಪುಣೆಯಲ್ಲಿ ಎರಡು ವರ್ಷದಿಂದ ನೌಕರಿ ಮಾಡುತ್ತಿದ್ದ. ಪ್ರತಿ ತಿಂಗಳು ಅವನ ಮನೆಗೆ ಮನಿಯಾರ್ಡರ್ ಬರುತ್ತಿತ್ತು. ಅವನು ಆರು ತಿಂಗಳಿಗೊಮ್ಮೆ ಮನೆಗೆ ಬಂದರೆ ಅಂದು ಮನೆಯಲ್ಲಿ ಹಬ್ಬದ ವಾತಾವರಣ ಉಂಟಾಗುತ್ತಿತ್ತು. ಬರುವಾಗ ಅವನು ತಂದೆ-ತಾಯಿಗೆ, ತನ್ನ ಸಹೋದರರಿಗೆ ಹೊಸ ಬಟ್ಟೆ ತರುತ್ತಿದ್ದ. ಅವನ ಮನೆಯ ಅಂಗಳದಲ್ಲಿ ಆಗ ಚಾಕಲೇಟು, ಬಿಸ್ಕಿಟಿನ ಪ್ಯಾಕಿನ ಹೊರಕಾಗದಗಳು ಬಿದ್ದಿರುತ್ತಿದ್ದವು.

ಆದರೆ ಅವನ ಮನೆಗೆ ಹೋಗಿ ಬರುವವರ ಸಂಖ್ಯೆ ಏಕೆ ಕಡಮೆಯಾಯಿತೊ ಗೊತ್ತಿಲ್ಲ. ಯಶವಂತನ ಹೆಂಡತಿ ಮೈಮೇಲೆ ಹಾಕಿಕೊಂಡ ಬಟ್ಟೆಗಳನ್ನು ನೋಡಿ ಇತರ ಹೆಂಗಸರು ಕರಬುತ್ತಿದ್ದರು. ಒಳಗೊಳಗೆ ಜರಿಯುತ್ತಿದ್ದರು. ತತ್ತಿ ಹಾಕೂ ಕೋಳಿ ಹ್ಯಾಂಗ ಕೊಬ್ಬಿದ ನೋಡ್ರಿ, ಆಕೀಗ ಈಗ ಮನಶ್ಯಾರು ಕಾಣೂದಿಲ್ಲ. ಸೊಕ್ಕು ಬಂದೈತಿ. ಮೊದ್ಲು ಅದು ಕೊಡು, ಇದು ಕೊಡು ಅಂತ ಅವರಿವರ ಬಾಗಿಲಾಗ ಹೋಗಿ ನಿಂದರತಿದ್ಲು. ಈಗ ಆಕಿ ಕೂಡ ಮಾತಾಡಾಕ ಲಾಯ್‌ಸನ್ಸ್ ತಗೋಬೇಕು ಅಷ್ಟ ಸೊಕ್ಕು ಬಂದೈತಿ ಆಕೀಗ. ರೊಕ್ಕಕ್ಕೂ, ದೇವರಿಗೂ ಸಂಬಂಧ ಇಲ್ಲಂತ ಆಕಿಗಿನ್ನೂ ಗೊತ್ತಿಲ್ಲ."

ಯಶವಂತನ ಮನೆಗೆ ಈಗ ಬರುಹೋಗುವವರು ಹೆಚ್ಚಾಗಿದ್ದರು. ಕುಂಬಾರ ಕೇರಿಯಲ್ಲಿ ಅದೊಂದು ಶ್ರೀಮಂತರ ಮನೆಯಾಗಿತ್ತು. ಧರ್ಮು ಮಾತ್ರ ಹೋಗಿ ಅವರ ವರಾಂಡದಲ್ಲಿ ಕೂತುಕೊಳ್ಳುತ್ತಿದ್ದ. "ಯಶವಂತಾ...ನನಗ ಈಗ ಬಾಯಾರಿಕೆ ತಡಿಯಾಕ ಆಗೂದಿಲ್ಲ. ಈಗ ಇದರಾಗ ನನ್ನ ಕಥಿ ಮುಗೀತದ. ಇದ್ರ ಏನಾರ ಕೊಡು ಹೊಕ್ಕೀನಿ."

ಈ ದಿನಗಳಲ್ಲಿ ಧರ್ಮುನ ಊಟ ನಿಂತು ಹೋಗಿತ್ತು. ಲಿವ್ಹರ್ ಬೆಳೆದು ಹೊಟ್ಟೆ ಉಬ್ಬಿ ಗುಮಟೆಯಂತೆ ಹೊರಗೆ ಚಾಚಿಕೊಂಡಿತ್ತು. ಆದರೂ ದಾರಿಯಲ್ಲಿ ಎದ್ದು ಬಿದ್ದಾದರೂ ಅವನು ಸರಾಯಿ ಅಂಗಡಿಗೆ ಮಾತ್ರ ಹೋಗುವುದನ್ನು ಬಿಡುತ್ತಿರಲಿಲ್ಲ. ದುಡ್ಡಿಗಾಗಿ ಕಂಡ ಕಂಡವರ ಮುಂದೆ ಕೈಯೊಡ್ಡುತ್ತಿದ್ದ. ಇನ್ನೇನು ಒಂದೆರಡು ತಿಂಗಳಲ್ಲಿ ಅವನು ಸತ್ತು ಹೋಗುತ್ತಾನೆ ಎಂದು ಕೇರಿಯ ಜನರೆಲ್ಲ ಭಾವಿಸಿದ್ದರು.

ಯಶವಂತ ಹೊರನೋಟದಲ್ಲಿ ಒರಟು ಒರಟಾಗಿ ಕಂಡರೂ ಒಳಗನಿಂದ ಮೃದುವಾಗಿದ್ದ. ಕೆಲವೊಂದು ಬಾರಿ ಮನಸ್ಸು ನೋಯುವಂತಹ ಮಾತಾಡಿರಬಹುದು. ಅದೆಲ್ಲ ಅವನು ಮರೆತು ಹೋಗಿದ್ದ. ಆದರೆ ಕೇರಿಯ ಜನರೆಲ್ಲ ಅದರ ಉಜಳಣಿ ಮಾಡುವುದನ್ನು ಬಿಟ್ಟಿರಲಿಲ್ಲ. ಅವನೀಗ ಸಾಬೂನು ಹಚ್ಚಿ ತೊಳೆದ ಶುಭ್ರ ಪಂಚೆ ಧರಿಸುತ್ತಿದ್ದ. ಅದರ ಮೇಲೆ ಅಷ್ಟೇ ಶುಭ್ರ ಅಂಗಿ ಧರಿಸುತ್ತಿದ್ದ. ಅವನು ಈಗ ಯಾರ ಮನೆಗಾದರೂ ಹೋದರೆ ಮೊದಲಿನಂತೆ ಮುಕ್ತ ಮನಸ್ಸಿನ ಮಾತುಕತೆ ನಡೆಯುತ್ತಿರಲಿಲ್ಲ.

ಒಂದು ದಿನ ರಾಮಚಂದ್ರನು ಜಬ್ಬು ಕಟ್ಟಿಗೆಯ ಹೊರೆ ಆವಿಗೆ ಉರಿಸಲು ಬೇಕಾಗುತ್ತದೆ ಎಂದು ತಂದು ಆವಿಗೆಯ ಬಳಿಯಿರುವ ರಾಮಫಲ ಗಿಡಕೆ ಆನಿಸಿ, ಇಟ್ಟಿದ್ದ. ಅದು ಗಾಳಿಗೆ ಅಲ್ಲಾಡಿ ಬರು ಹೋಗುವವರ ದಾರಿಯಲ್ಲಿ ಬಿದ್ದುಬಿಟ್ಟಿತು. ಸಂಜೆಯಾಗುವವರೆಗೂ ಅದು ಅಲ್ಲಿಯೇ ಬಿದ್ದಿತ್ತು. ಯಶವಂತ ಸಂಜೆಯ ಸಮಯ ಅದೇ ದಾರಿಯಲ್ಲಿ ಹೊರಟಾಗ ಕಟ್ಟಿಗೆಯ ಹೊರೆ ಬಿದ್ದಿದ್ದನ್ನು ನೋಡಿ ದನಿಯೇರಿಸಿ "ಏಯ್ ರಾಮಚಂದ್ರಾ, ದಾಲ್ಯಾಗ ನಿನ್ನ ಕಟ್ಟಿಗೆ ವಜ್ಜೆ ಬಿದ್ದದ ಕಾಣೂದಿಲ್ಲೇನು? ದಾರಿ ಬಂದ್ ಮಾಡಿ ಇಟ್ಟೀಯಲ್ಲ?" ಇದನ್ನು ಕೇಳಿದ ರಾಮಚಂದ್ರ ಕೆರಳಿ ಕೆಂಡವಾದ. "ಹೋಗು ಹೋಗು...ಒಂದೀಟು ಆಕಡಿಯಿಂದ ಸರಿದು ಹ್ವಾದ್ರ ನಿನ್ನ ಕಾಲ ಮುರ್ದ ಹೋಗ್ತಾವೇನು? ನೀ ಮೊದ್ಲು ಮುಳ್ಳಿನ ಗಿಡಗಂಟಿ ತಂದ ಹಾಕ್‌ತಿದ್ದಿ. ನಮ್ಮ ಕಾಲಿಗ ಮುಳ್ಳು ಚುಚ್ಚುತಿದ್ವು ; ಈಗ ಆ ದಿವ್‌ಸಾ ಹ್ವಾದ್ವು, ಈಗ ನನ್ನ ಕಟಗಿ ವಜ್ಜಿ ಕಾಣತದಲ್ಲ ನಿನಗ ?"

"ಅರೆ, ಮೂರ್ಖರ ಹಂಗ ಒರಟ ಯಾಕ್ ಮಾತಾಡ್ತೀ? ಹುಚ್ಚ ಹಿಡದೈತೇನು ನಿನಗ?"

"ಹೌದು, ರೊಕ್ಕ ಇಲ್ಲದ ಹುಚ್ಚರು ನಾವು. ನೀನೇ ಶಾಣ್ಯಾ. ಶಾಣ್ಯಾ ಅಲ್ಲ ರೊಕ್ಕದ ಸೊಕ್ಕು ಅದು."

ಅಲ್ಲಿ ಅವರಿಬ್ಬರ ಜಗಳ ತಾರಕಕ್ಕೇರಿತು. ಯಶವಂತನೂ ತನ್ನ ಸಿಡುಕು ಸ್ವಭಾವದಿಂದಾಗಿ ವ್ಯಂಗ್ಯವಾಗಿ ಮಾತಾಡಿದ.

ನಿಜಕ್ಕೂ ರಾಮಚಂದ್ರನ ಬಗ್ಗೆ ಅವನಲ್ಲಿ ಅಸಹನೆಯಿತ್ತು.

ಸೀತವ್ವ ಅಂಗಳದಲ್ಲಿ ಒಬ್ಬಳೇ ನಿಂತಿದ್ದಳು. ಅವಳು ಕುಂಬಾರ ಕೇರಿಯಲ್ಲಿ ಇಂಥದ್ದನ್ನು ನೋಡಿಲ್ಲಪ್ಪ. ಬಡತನದಿಂದ ಇವರೆಲ್ಲ ಭೂತಗಳಾಗ್ಯಾರ. ಅಂವ ಒಬ್ನ ಕಲ್ತಾನ. ಆದರ ಅಂವಾ ಹೊರಗ ಹೋಗಿ ಹೊಟ್ಟಿ ತುಂಬ್ಕೋ ಬೇಕಾತು. ಇಲ್ಲಿ ಅಂವಗ ಏನ್ ಸಿಕ್ತು ? ಕೇರಿಗೂ ಅವನಿಂದ ಏನು ಉಪಯೋಗವಾಯ್ತು ? ಕಲ್ತು ಅಂವಾ ಇಲ್ಲಿ ನಿಂತಾದ್ರೂ ಏನ್ ಮಾಡತಿದ್ದ ? ನಸೀಬ ಕೆಟ್ಟ ಕುಂಬಾರರು. ಇಲ್ಲಿ ಏನೂ ಛಲೋದಾಗೂದಿಲ್ಲ. ಕುಂಬಾರ ಮಂದಿ ಮಣ್ಣ ಸುಟ್ಟು ಪಾಪ ದುಡಿಯೂದಿಲ್ಲಲ್ಲ–ದೇವರೇ."

* * *

ರಾಘೋಬಾ ಮೊದಲಿನಿಂದಲೂ ದಪ್ಪಗಾಗಿದ್ದ. ಅಗಲವಾದ ಸೊಂಟ, ವಿಶಾಲವಾದ ಮುಖ, ಆದರೂ ಅವನು ಕುಂಬಾರರು ಮಾಡುವ ಎಲ್ಲ ಕೆಲಸವನ್ನು ಮಾಡುತ್ತಿದ್ದ. ಅವನ ಹೆಂಡತಿ ಮದುವೆಯಾಗಿ ಎಂಟು ವರ್ಷದ ನಂತರ ಗರ್ಭಿಣಿಯಾಗಿ ಮಗುವನ್ನು ಹಡೆದಿದ್ದಳು. ಮನೆಯಲ್ಲಿ ವಯಸ್ಸಾದ ತಂದೆಯಿದ್ದ. ಒಬ್ಬಳು ಲಗ್ನಕ್ಕೆ ಬಂದ ತಂಗಿಯಿದ್ದಳು.

ಈ ನಡುವೆ ಕೆಲವು ದಿನ ಅವನು ಕಂಡ ಕಂಡವರ ಮೇಲೆ ಸಿಡುಕುತ್ತಿದ್ದ, ಜಗಳಕ್ಕೆ ಬರುತ್ತಿದ್ದ. ಮಾರಾಟಕ್ಕೊಯ್ದ ಗಡಿಗೆಗಳನ್ನು ಮರಳಿ ತಂದರೆ ಹೆಂಡತಿಗೆ ವಾಚಾಮ ಗೋಚರ ಬಯ್ಯುತ್ತಿದ್ದ. ತಂದೆ ಏನಾದರೂ ಹೇಳಿದರೆ ತಂದೆಯ ಮೇಲೆಯೇ ಏರಿ ಹೋಗುತ್ತಿದ್ದ. ಸಿಟ್ಟು ನೆತ್ತಿಗೇರಿದರೆ ಹೊಸ ಮಡಕೆಯನ್ನೇ ಎತ್ತಿ ನೆಲಕ್ಕೆ ಕುಕ್ಕುತ್ತಿದ್ದ. ಒಂದು ದಿನ ಶಿವರಾಮ ಹೇಳಿದ "ನೋಡಿಯೇನು ರಾಘೋಬಾ ರಾತ್ರಿ ಸೆಗಣಿ ಬಿದ್ದದ. ಈ ರೈತರು ದನಗಳನ್ನು ಕಟ್ಟಿಹಾಕದೆ ಹಡಬಿ ಬಿಡ್ತಾರೆ."

ಇಷ್ಟು ಹೇಳಿದ್ದೇ ತಡ ರಾಘೋಬಾ ಥಟ್ಟನೆ ಕಿರುಚಾಡಿದ "ನನಗ್ಯಾಕೆ ಹೇಳ್ತಿ ನೀನು ? ಹೋಗಿ ರೈತರಿಗೆ ಹೇಳು, ಜಗಳಾಡಾಕ ಹೋಗು ಅವರ ಕಡೀಗ."

ಕಳೆದ ಮಳೆಗಾಲದಲ್ಲಿ ಅವನಿಗೆ ಹೊಟ್ಟೆ ತುಂಬುವುದೇ ಒಂದು ಸಮಸ್ಯೆಯಾಗಿತ್ತು. ತಂದೆ ಸಾಯುತ್ತಾನೊ, ಬದುಕುತ್ತಾನೊ ಎಂಬಷ್ಟು ಕಾಯಿಲೆ ಬಿದ್ದಿದ್ದ. ಹುಡುಗರ ಶಿಕ್ಷಣವೂ ನಡೆಯುತ್ತಿತ್ತು. ರಾಘೋಬನೂ ಈಗ ಬಡಕಲಾಗಿದ್ದ. ಸೊಂಟವು ಸಣ್ಣದಾಗಿತ್ತು. ಈ ಮಧ್ಯೆ ಅವನು ಊರ ಹೊರಗೆ ನಿಲ್ಲತೊಡಗಿದ. ಎಲ್ಲಿಗೆ ಹೋಗುತ್ತಾನೆ, ಎಲ್ಲಿಂದ ಬರುತ್ತಾನೆ ಎನ್ನುವುದೇ ಗೊತ್ತಾಗುತ್ತಿರಲಿಲ್ಲ. ಮಧ್ಯಾಹ್ನ ವೇಳೆ ಮಾಡಿ ಬರುತ್ತಿದ್ದ ದಣಿದವನಂತೆ, ಬರುವಾಗ ಬೆವರಿನಿಂದ ಮುಳುಗಿರುತ್ತಿದ್ದ. ಅವನ ಹಾಫ್ ಪ್ಯಾಂಟ್ ಸೊಂಟಕ್ಕೆ ಸುತ್ತಿಕೊಂಡಂತಿರುತಿತ್ತು. ಮೈಕೈಯೆಲ್ಲ ತರಿದಂತೆ, ರಕ್ತ ಒಸರುವಂತೆ ಕಾಣುತ್ತಿತ್ತು. ಕೇರಿಗೆ ಬರುವಾಗ ಅವನು ಪೂರ್ತಿ ಬಳಲಿ ಬೆಂಡಾಗಿ ಅತ್ತಿತ್ತ ಒಲಿಯುತ್ತ ಬರುತ್ತಿದ್ದ.

ಒಂದು ದಿನ ಧರ್ಮುನ ಹೆಂಡತಿ ದೇವವಾಡೆಗೆ ಗಡಿಗೆ ತೆಗೆದುಕೊಂಡು ಹೋಗಿದ್ದಳು. ವೈಕುಂಠ ಸಾವಂತನ ಮನೆಯಂಗಳದಲ್ಲಿದ್ದ ತೆಂಗಿನ ಮರ ಹತ್ತಿ ಯಾರೋ ತೆಂಗು ಇಳಿಸುತ್ತಿದ್ದರು. ಅವಳು ಮೇಲೆ ಕಣ್ಣು ಹಾಯಿಸಿ ಕೇಳಿದಳು "ಯಾರಂವಾ ತೆಂಗಿನಕಾಯಿ ಇಳಿಸಾಕ ಹತ್ಯಾನ ?"

ವೈಕುಂಠ ಹೇಳಿದ "ಅವನು ನಿಮ್ಮ ಕುಂಬಾರ ರಾಘೋಬಾ."

ಧರ್ಮುನ ಹೆಂಡತಿ ಒಂದೇ ಸಮ ನೋಡುತ್ತಿದ್ದಳು. ಕಾರಣ ಅವನನ್ನು ನೋಡಿದರೆ ಅವನು ಮರ ಹತ್ತುವಷ್ಟು ಸಣಕಲು ದೇಹದವನಲ್ಲ. ಕುಂಬಾರರು ಮಾಡುವ ಕೆಲಸವೂ ಅದಲ್ಲ. ಅವನನ್ನು ಅವಳು ಚಿಕ್ಕಂದಿನಿಂದಲೂ ನೋಡುತ್ತಿದ್ದಳು. ಅವಳಿಗೆ ತುಂಬ ಕೆಡುಕೆನಿಸಿತು. ಆದರೆ ರಾಘೋಬಾ ಇದೆಲ್ಲ ಹೊಟ್ಟೆ ಪಾಡಿಗಾಗಿ ಮಾಡುತ್ತಿದ್ದ.

ಅವಳು ಮನೆಗೆ ಬಂದು ಅಪರೂಪೆಗೆ ಹೇಳಿದಳು "ನಿನ್ನ ಗಂಡ ಊರಾಗ ತೆಂಗಿನಕಾಯಿ ಇಳಿಸಾಕ ಹೊಕ್ಕಾನಲ್ಲ ಅವನಿಂದಾಗ್ತದೇನು ?"

ಅಪರೂಪೆಗೆ ಆ ವಿಷಯ ಗೊತ್ತಿತ್ತು. ಅವಳು ಶಾಂತವಾಗಿ ಹೇಳಿದಳು. "ಹೊಟ್ಟಿ ಐತಲ್ಲವಾ. ಹೊಟ್ಟಿಗಾಗಿ ಇದೆಲ್ಲ ಮಾಡ್‌ಬೇಕಾಗ್ತದ."

* * *

**ಪು**ರಶ್ಯಾನ ತಾಯಿ ಅನಾರೋಗ್ಯದಿಂದಿದ್ದಾಳೆ ಒಮ್ಮೆ ಬಂದು ಹೋಗು ಎಂದು ಶೀಲಾಳಿಗೆ ಯಾರದ್ದೊ ಬಳಿ ಹೇಳಿ ಕಳಿಸಿದ್ದರು. ಆ ಶನಿವಾರವೇ ಶೀಲಾ ಮತ್ತು ಸದಾನಂದ ಗೋವೆಯಿಂದ ಬಂದರು. ಅವಳು ನಾಟಕದಲ್ಲಿ ಪಾತ್ರ ಮಾಡುವಾಗಿನ ಮುಖದ ಮೇಲೆ ಕಳೆ, ನಗುಮುಖ, ಸ್ವಭಾವ ಮೊದಲಿದ್ದಂತೆಯೇ ಇತ್ತು. ಅವಳು ಶುಭ್ರವಾದ ಪತ್ತಲ ಉಡುತ್ತಿದ್ದಳು. ಅಷ್ಟೇ ಬೆಳ್ಳಗಿರುವ ರವಿಕೆ ತೊಡುತ್ತಿದ್ದಳು. ಅವಳು ಈ ಕೇರಿಯಿಂದ ಆ ಕೇರಿಗೆ ಹಾಯ್ದು ಹೋಗುವಾಗ ದೇವಾಲಯದ ಗಂಟೆ ಸಣ್ಣ ಸ್ವರದಲ್ಲಿ ಕಿಣಿಕಿಣಿಸಿದಂತೆ ಕೇಳುತ್ತಿತ್ತು.

ತಾಯಿ ಹಾಗೇನು ಪೂರ್ತಿ ಹಾಸಿಗೆ ಹಿಡಿದಿರಲಿಲ್ಲ. ಮೈಗೆ ಬೆಂಕಿ ಹತ್ತಿದಂತೆ ಉರಿಯುತ್ತಿತ್ತು. ಮೈಯೆಲ್ಲ ಮಿರಗುಟ್ಟುತ್ತಿತ್ತು. ಪುರುಶ್ಯಾ ಸುಮ್ಮನೆ ಮಗ ಸೊಸೆಯನ್ನು ಕರೆಸಿದ್ದ. ಆ ಕಾರಣದಿಂದಾದರೂ ಅವರು ಊರಿಗೆ ಬಂದು ಹೋಗಲಿ ಎಂದು. ಶೀಲಾ ಅತ್ತೆಯನ್ನು ಕಾರವಾರಕ್ಕೆ ಕರೆದುಕೊಂಡು ಹೋಗಿ ಡಾಕ್ಟರರಿಗೆ ತೋರಿಸಿ ಔಷಧಿ ತಂದಳು. ಗಾಬರಿಯಾಗುವಂಥದ್ದೇನಿಲ್ಲ ಎಂದು ಡಾಕ್ಟರರು ಹೇಳಿದ್ದರು. ಅವಳು ಮಾಜಾಳಿಯಲ್ಲಿ ಬಸ್ಸಿನಿಂದ ಅತ್ತೆಯನ್ನು ಇಳಿಸಿಕೊಂಡು ಬರಬೇಕಾದರೆ ಜನರೆಲ್ಲ ಅವಳನ್ನೇ ಮತ್ತೆ ಮತ್ತೆ ನೋಡುತ್ತಿದ್ದರು. ಅವಳನ್ನೇ ನೋಡುವಾಗ ಯಾರಾದರೂ ಮುಂದೆ ಸರಿದು ದೃಷ್ಟಿ ತೆಗೆಯುತ್ತಾರೇನೊ ಎಂಬಂತೆ ಭಾಸವಾಗುತಿತ್ತು.

ಶೀಲಾ ಬಂದಾಗಲೆಲ್ಲ ಸೀತವ್ವನ ಒಂದು ಬಗೆಯ ಕಿರಕಿರಿ ಇದ್ದೇ ಇತ್ತು. 'ಎಲ್ಲಾದರೂ ನನ್ನ ಮೊಮ್ಮಗನಿಗೆ ಒಂದು ಕೆಲಸ ಮಾಡಿಸಿಕೊಡು' ಎಂದ ಪ್ರತಿ ಸಾರಿ ಬಂದಾಗಲೂ ಗೋಗರೆಯುತ್ತಿದ್ದಳು.

ಶೀಲಾ ಸಾಕಷ್ಟು ಕಡೆ ಅವನ ಕೆಲಸಕ್ಕಾಗಿ ಓಡಾಡಿದ್ದಳು. ಆದರೆ ಸೀತವ್ವನ ಮೊಮ್ಮಗ ವಸಂತನಿಗೆ ಹದಿನೆಂಟು ವರ್ಷವಾಗದ್ದರಿಂದ ಯಾರೂ ಕೆಲಸಕ್ಕಿಟ್ಟುಕೊಳ್ಳಲು ತಯಾರಾಗುತ್ತಿರಲಿಲ್ಲ. ಅದರಲ್ಲೂ ಅವನು ಕನ್ನಡ ಆರನೆಯ ಇಯತ್ತೆಯವರೆಗಷ್ಟೇ ಓದಿದ್ದರಿಂದ ಗೋವೆಯಲ್ಲಿ ಕನ್ನಡ ಭಾಷೆಯ ಉಪಯೋಗವಿಲ್ಲದ್ದರಿಂದ ಜನ ಕೆಲಸ ಕೊಡಲು ಅನುಮಾನಿಸುತ್ತಿದ್ದರು. ಶೀಲಾ ಕೆಲಸ ಮಾಡುವ ಸಾಂಖವಾಳದಲ್ಲಿ ಬೇಕರಿಯಿತ್ತು. ಗಾಡಿಯಲ್ಲಿ ಹಾಕಿ ಅವರು ಬ್ರೆಡ್, ಕೇಕ್ ಊರಿಗೆಲ್ಲ ಪೂರೈಸುತ್ತಿದ್ದರು. ಶೀಲಾ ಆ ಬೇಕರಿಯ ಮ್ಯಾನೇಜರ್‌ನ ಕಡೆ ಮಾತನಾಡಿದಾಗ "ಹದಿನೆಂಟು ತುಂಬುವ ಮೊದಲು ಅವನು ಇಲ್ಲಿ ಒಂದು ವರ್ಷದವರೆಗೆ ಈ ಕೆಲಸ ಕಲಿಯಲಿಕ್ಕೆ ಬರಲಿ. ಹದಿನೆಂಟು ತುಂಬಿದ ಮೇಲೆ ಮುಂದೆ ನೋಡುವ" ಎಂದಿದ್ದ.

"ಕಲಿಯುವಾಗ ಅವನಿಗೆ ಏನಾದರೂ ಹೊಟ್ಟೆಗೆ ಕೊಡಬೇಕಾಗಬಹುದು" ಎಂದು ಶೀಲಾ ಮ್ಯಾನೇಜರ್‌ನಿಗೆ ಹೇಳಿದ್ದಳು.

"ನೋಡೋಣ–ನೋಡೋಣ" ಎಂದು ಮ್ಯಾನೇಜರ್ ನುಡಿದಿದ್ದ.

ಅದೇ ಧೈರ್ಯದಿಂದ ಶೀಲಾ ಸೀತವ್ವನಿಗೆ ಮತ್ತು ಅವಳ ಸೊಸೆಗೆ ತಿಳಿಸಿ ಹೇಳಿದಳು. ಅವರು ಶೀಲಾನೊಂದಿಗೆ ಮೊಮ್ಮಗನನ್ನು ಕಳಿಸಲು ಸಿದ್ಧರಾದರು.

ಸೀತವ್ವ ಹೇಳಿದಳು ಇಲ್ಲಿ ಕುಂಬಾರ ಕೇರ್ಯಾಗ ಆವಿಗ್ಯಾಗ ಗಡಗಿ ಹುರಿತಿದ್ದ, ಅಲ್ಲಿ ಬೇಕರ್ಯಾಗ ರೊಟ್ಟಿ ಹುರೀತಾನ."

"ನಾವು ದಾಬೋಳಿಯಲ್ಲಿರ್ತೀವಿ. ಕೋಣೆ ದೊಡ್ಡದೇನಿಲ್ಲ. ಹೊರಗಿನದೊಂದು ದೊಡ್ಡ ಕೋಣೆ, ಒಳಗಿನದೊಂದು ಸಣ್ಣ ಕೋಣೆ."

"ಸಧ್ಯ ಹ್ಯಾಂಗಾದ್ರೂ ಮಾಡಿ ನಿನ್ನಕೂಡ ಇಟ್ಕೊಳ್ಳವ್ವ"

"ಸರಿಯಾಗಿ ಇರಬೇಕಾಗ್ತದೆ. ತೊಂದರೆಗಳನ್ನು ಸಹಿಸಬೇಕಾಗ್ತದ. ಅವನಿಗೆ ಎಲ್ಲಾ ಬಿಡಿಸಿ, ತಿಳಿಸಿ ಹೇಳಿರಿ" ಎಂದು ಅವಳು ಹೇಳಿದ್ದಳು. ಶೀಲಾ ಮಾತಾಡುವಾಗ ಹಿತವೆನಿಸುತ್ತಿತ್ತು. ಅವಳು ಮಾತನಾಡುವುದು ಅಸತ್ಯವಲ್ಲ, ಅಪ್ರಸ್ತುತವಾಗಿರಲಿಲ್ಲ.

ವಸಂತ ಸ್ವಲ್ಪ ಚಂಚಲ, ಹುಡುಗಾಟದ ಸ್ವಭಾವದವನಾಗಿದ್ದ. ಅವನು ಎಂದೂ ಒಂದು ಕಡೆ ಸ್ಥಿರವಾಗಿ ಕುಳಿತುಕೊಳ್ಳುತ್ತಿರಲಿಲ್ಲ. ಮಾವಿನ ಮರದ ಹತ್ತಿರ ಹೋದರೆ ಅಲ್ಲಿಂದ ಕಾಜೂ ಗಿಡದ ಹತ್ತಿರ ಹೋಗುತ್ತಿದ್ದ. ಮಣ್ಣು ತರುವುದಕ್ಕೆ ಕೆರೆಗೆ ಹೋದರೆ ಗುದ್ದಲಿ–ಬುಟ್ಟಿ ಅಲ್ಲೆ ಚೆಲ್ಲಿ ಕಾಡಿಗೆ ಓಡುತ್ತಿದ್ದ. ಅವನು ಹದಿನೇಳು ವರ್ಷದವನಾಗಿದ್ದರೂ ತೀರ ಚಿಕ್ಕ ಬಾಲಕನಂತಿರುತ್ತಿದ್ದ. ಅವನ ತಾಯಿ, ಮತ್ತು ಅಜ್ಜಿ ಅವನನ್ನು ಹತ್ತಿರ ಕೂಡಿಸಿಕೊಂಡು "ನೋಡಪ್ಪ, ನಿನ್ನ ಹತ್ರ ಪೂರಾ ಆಯುಷ್ಯ ಐತಿ. ಕುಂಬಾರ ಧಂದಿ ಇನ್ನ ಮ್ಯಾಗ ಬರಾಬರಿ ನಡಿಯೂದಿಲ್ಲ. ನಾವ್ ಈಗ ಅದೀವಿ, ನಾಳಿ ಇಲ್ಲ. ನೀನ್ ನಿನ್ನ ಕಾಲಮ್ಯಾಗ ನಿಲ್ಲಬೇಕು, ದುಡದು ತಿನ್ನಬೇಕು. ನಿನಕ್ಕಿಂತ ಸಾಣ ನಿನ್ನ ತಂಗ್ಯಾರದಾರ, ನೀನೇ ಅವರನ್ನ ಮುಂದ ನೋಡ್ಕೋಬೇಕ" ಎಂದು ಹೇಳಿದ್ದಳು.

ಆ ಹುಡುಗ ಅಂದು ಸಂಜೆಯೆಯಲ್ಲ ಮೌನವಾಗಿದ್ದ. ಅವನ ಕಾಲಿನ ಕೀಲೇ ಯಾರೋ ಕಿತ್ತುಕೊಂಡು ಹೋದಂತೆ ಎಲ್ಲೂ ಹೋಗದೆ ಒಂದೇ ಕಡೆ ತೆಪ್ಪಗೆ ಕೂತಿದ್ದ.

ಅವನ ತಾಯಿಯಂತೂ ಅವನ ಪಕ್ಕದಲ್ಲಿಯೇ ಕುಳಿತು ಅವನ ಮೈಮೇಲೆ, ತಲೆಯ ಮೇಲೆ ಕೈ ಸವರುತ್ತಿದ್ದಳು.

ಎರಡನೆಯ ದಿನ ಅವನ ಅಜ್ಜಿ ಅಲ್ಲಿ ಇಲ್ಲಿ ಸೇರಿಸಿಟ್ಟಿದ್ದ ಹಣವನ್ನೆಲ್ಲ ಒಟ್ಟು ಮಾಡಿ ಅವನ ಕೈಯಲ್ಲಿ ಸುಮಾರು ನೂರೈವತ್ತು ರೂಪಾಯಿಗಳನ್ನು ಇಟ್ಟಳು. ಮೈಮೇಲಿದ್ದ ಒಂದು ಮಲಿನ ಬಟ್ಟೆ ಮತ್ತು ಕೈಚೀಲದಲ್ಲಿ ಒಂದು ಜೊತೆ ಬಟ್ಟೆ ಹಿಡಿದುಕೊಂಡು ಅವನು ಸಖಾರಾಮ ಮತ್ತು ಶೀಲಾಳ ಜೊತೆ ಹೋದ. ಅವನ ಎರಡೂ ತಂಗಿಯರು ಚಿಗರೆಯಂತೆ ಕಣ್ಣು ಹೊರಳಿಸುತ್ತ ಪಿಳಿಪಿಳಿ ನೋಡುತ್ತ ನಿಂತಿದ್ದರು.

ಸೀತವ್ವ ಅವರನ್ನು ಸ್ವಲ್ಪ ದೂರದವರೆಗೆ ಒಯ್ದು ಬೀಳ್ಕೊಡಲು ಹೋಗಿದ್ದಳು. ದಾರಿಯುದ್ದಕ್ಕೂ ಅವಳು ನೀನು ಸದಾನಂದ ಮತ್ತು ಶೀಲಕ್ಕನವರ ಕೂಡ ಚಂದಾಗಿರು. ಅವರು ಹೇಳಿದ್ದನ್ನು ಕೇಳು. ಅವರ ಮಾತು ಮೀರಬೇಡ, ಉಡಾಳತನ ಬೇಡ" ಎಂದು ಹೇಳುತ್ತ ಸಾಗಿದ್ದಳು. ಅದರಂತೆ ಸದಾನಂದನಿಗೂ "ಈ ಹುಡುಗನನ್ನು ನಿನ್ನ ತಮ್ಮನಂತೆ ಸಂಬಾಳಿಸಿಕೊಂಡು ಹೋಗು" ಎಂದು ಹೇಳುತ್ತಿದ್ದಳು.

ಅವಳು ಅವರನ್ನು ಬಸ್ಸಿನ ಮೇಲೆ ಕೂಡಿಸಿ ಮರಳಿ ಮನೆಗೆ ಬರುವುದರಲ್ಲಿ ಸುಸ್ತಾಗಿದ್ದಳು. ಅವಳು ಒಲೆಯತ್ತ ನಡೆಯುವುದನ್ನು ನೋಡಿದರೆ ಅವಳ ಕೈಯಲ್ಲಿ ಇನ್ನು ಊರುಗೋಲು ಕೊಡಬೇಕು ಎನ್ನುವಂತೆ ಕಾಣುತ್ತಿದ್ದಳು. ಅವಳು ಮನೆ ತಲುಪಿದಾಗ ಹದಿನಾಲ್ಕು ವರ್ಷ ತುಂಬಿದ ಅವಳ ಮೊಮ್ಮಗಳು ಅವಳ ಬಳಿ ಬಂದು ನಿಂತುಕೊಂಡಳು. ಇಬ್ಬರಲ್ಲೂ ಮಾತಿರಲಿಲ್ಲ. ಸೀತವ್ವ ಮೊಮ್ಮಗಳ ತಲೆಯನ್ನು ಮೌನವಾಗಿ ನೇವರಿಸುತ್ತಿದ್ದಳು.

* * *

**ಮು**ಸ್ಸಂಜೆಯಾಗುತ್ತಲಿತ್ತು. ಕತ್ತಲೆ ಹೊಗೆಯಂತೆ ನಿಧಾನವಾಗಿ ಪಸರಿಸತೊಡಗಿತ್ತು. ಸೀತವ್ವ ಜಗಲಿಯ ಮೇಲೆ ಕುಳಿತುಕೊಂಡಿದ್ದಳು. ಒಳಗಡೆಯಿಂದ ಸೊಸೆ ತಾರಾ ಎದೆ ಯಾರೋ ಅಡಚಿಟ್ಟಂತೆ, ಜೀವ ಕುತ್ತಿಗೆಗೆ ಬಂದಂತೆ ಹೂಂ...ಹೂಂ ಎಂದು ನರಳುತ್ತಿರುವುದು ಕೇಳಿಸುತ್ತಿತ್ತು. ಕಂದು ಬಣ್ಣದ ತರುಣಿ ತಾರಾ ಈಗ ಬೇರು ಕಡಿದ ಮರದಂತೆ ಒಂದೇ ಸಮನೆ ಒಣಗತೊಡಗಿದ್ದಳು. ಸೀತವ್ವನ ಶಕ್ತಿಯೂ ಕುಂದಿಹೋಗಿತ್ತು. ಅವಳು ಒಂದು ಕಾಲದಲ್ಲಿ ಮೈತುಂಬಿಕೊಂಡು ಸದೃಢವಾಗಿ ಓಡಾಡುತ್ತಿದ್ದ ಹೆಣ್ಣು ಮಗಳು. ಈಗ ತಲೆ ಚಿಪ್ಪಿನಲ್ಲಿ ಸೇರಿಸಿಕೊಂಡು ಒಂದು ಮುದ್ದೆಯಂತೆ ಬೀಳುವ ಆಮೆಯಂತೆ ಸೀತವ್ವನೂ ಒಂದು ಕಡೆ ಬಿದ್ದಿರುತ್ತಿದ್ದಳು. ಅವಳ ಮೊಮ್ಮಗ ಗೋವೆಗೆ ಹೋಗಿ ಸುಮಾರು ಒಂದೂವರೆ ತಿಂಗಳಾಗಿತ್ತು. ಕಾಡಿನಲ್ಲಿ ಹಸುವಿನ ಮರಿ ಕಳೆದು ಹೋದಾಗ ಹಸು ಮರಿಯನ್ನು ಕರೆಯಲು ಅಂಬಾ-ಅಂಬಾ ಎಂದು ಕೂಗುವಂತೆ ಅವರಿಬ್ಬರ ಸ್ಥಿತಿಯಾಗಿತ್ತು. ತಂದೆ ತೀರಿಕೊಂಡ ಬಳಿಕ ಮನೆಯಲ್ಲಿದ್ದ ಒಬ್ಬನೇ 'ಗಂಡು ಹುಡುಗ' ಅವನೂ ಹೊಟ್ಟೆ ತುಂಬಿಸಿಕೊಳ್ಳಲು ದೂರ ಹೊರಟು ಹೋಗಿದ್ದ.

ಮುಸ್ಸಂಜೆಯಲ್ಲಿ ಯಾರೋ ಬೆಳಕಿನ ಕಣಗಳನ್ನು ಬಾಚಿಕೊಂಡು ಕತ್ತಲೆಯ ಕಣಗಳನ್ನು ಪಸರಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಮುಂದಿನ ಬೆಟ್ಟದಲ್ಲಿದ್ದ ಕತ್ತಲು ಕೆರೆ, ಹೊಲಗಳನ್ನು ದಾಟ ಕೇರಿಯ ಮೇಲೆ ತನ್ನ ಅಧಿಕಾರ ಸ್ಥಾಪಿಸುತ್ತಿತ್ತು. ಸೀತವ್ವ ಮೊದಲ

ಬಾರಿ ಕತ್ತಲೆಗೆ ಅಂಜಿ ಬೆಚ್ಚಿದವಳಂತೆ ಕೂತಿದ್ದಳು. "ತಾರಾ, ನೋಡವ್ವ ನಿನ್ಮಗಾ ವಸಂತ ಒಂದಿನ ಸೂಟುಬೂಟು ಹಾಕ್ಕೊಂಡು ಕೈಯಾಗ ನೋಟಿನ ಕಟ್ಟು, ನಿನಗ ಸೀರಿಗಳ ಗಂಟು ಹಿಡ್‌ಕೊಂಡು ಬರ್ತಾನ. ಖರೇವಂದ್ರ ನೀ ನಕ್ಕೋತಾ ಇರ್‌ಬೇಕು. ಸುಮ್ಕ ಅಳತೀ ಯಾಕ? ಸಂಜಿ ಹೊತ್ತಾತು ಒಂದೀಟು ನಕ್ಕೋತಾ ಇರು. ನಿನ್ನ ಹೆಣ್ಣಮಕ್ಕಳ ಕೂಡ ಘುಗಡಿ ಆಡು" ಎಂದು ಸೀತವ್ವ ತನ್ನ ಸೊಸೆಗೆ ಸಾಂತ್ವನ ಹೇಳಿದಳು.

ಮನೆಯ ಒಳಗಿನ ಕತ್ತಲೆಯಲ್ಲಿ ಅವಳು ಪೂರ್ತಿ ಮುಳುಗಿ ಹೋಗಿದ್ದಳು. ಅತ್ತೆಯ ಮಾತಿನಿಂದ ಅವಳಿಗೆ ಎಚ್ಚರವಾದಂತಾಯಿತು. ಅವಳು "ದೀಪ ಹಚ್ಚಿತೀನಿ" ಎಂದು ಅಂದಾಜಿನಿಂದಲೇ ಒಳಗೆ ಹೋದಳು. ಹೋಗುವಾಗ ಅವಳು ಹೇಳಿದಳು "ಅರಳು ಮರಳಾಗೈತಿ ನಿಮಗ. ನನ್ನ ಹತ್ರ ಹುಚ್ಚಾಟ ಮಾಡಬ್ಯಾಡ್ರಿ."

ಆದರೆ ಸೀತವ್ವ ಆ ಕತ್ತಲೆಯಲ್ಲಿ ಯಾವುದೋ ಚಿಂತೆಯಲ್ಲಿ ಪೂರ್ತಿ ಮೈಮರೆತಿದ್ದಳು. ಅವಳು ಮದುವೆಯಾಗಿ ಹೀಗೆ ಮುಸ್ಸಂಜೆಯ ಹೊತ್ತಿಗೆ ಈ ಮನೆಗೆ ಬಂದಿದ್ದಳು. ಕೇರಿಯ ಒಳಗೆ ಪ್ರವೇಶಿಸುವಾಗಲೇ ಮೊದಲು ಘನಶ್ಯಾಮನ ತಂದೆಯ ಸುಟ್ಟ ಮನೆ ಕಣ್ಣಿಗೆ ಬಿದ್ದಿತ್ತು. ಬೆಂಕಿ ನಂದಿಸಿದಾಗ ಅರ್ಧ ಉರಿದು ಕಪ್ಪಾಗಿ ಬಿದ್ದ ಕಂಬ, ಕೋಲುಗಳು ಹಾಗೆಯೇ ಇದ್ದವು. ಮನೆಯ ನೆಲಗಟ್ಟಿನ ಮೇಲೆ ಬೂದಿ ಹರಡಿತ್ತು. ಕೇರಿಯ ಪಡುವಣದಲ್ಲಿ ಮತ್ತೊಂದು ಕೇರಿಯಿತ್ತು ಅಂತ ಹೇಳುತ್ತಾರೆ. ಒಂದು ದಿನ ಆವಿಗೆ ಉರಿಯುತ್ತಿದ್ದಾಗ ಬೆಂಕಿ ಹಿಡಿದ ಒಂದು ಹುಲ್ಲಿನ ಹಾಸು ಹಾಗೆಯೆ ಮೇಲೆ ಹಾರಿ ಪಕ್ಕದ ಮನೆಯ ಮೇಲೆ ಬಿತ್ತು. ಅದು ಸೋಗೆಯ ಮನೆಯಾದ್ದರಿಂದ ತಕ್ಷಣ ಬೆಂಕಿ ಹಿಡಿದು ಭಗ ಭಗ ಉರಿದು ಬೂದಿಯಾಯಿತು. ಅದೇ ಘನಶ್ಯಾಮನ ತಂದೆಯ ಮನೆ. ಅವನು ಅಲ್ಲಿ ಸೋಗೆ ಕಟ್ಟಿಕೊಂಡು ಕೆಲವು ದಿನ ಕಳೆದ. ಒಂದು ದಿನ ಹೆಗಲಿಗೊಂಡು ಜೋಳಿಗೆ ಹಾಕಿಕೊಂಡು ಊರು ಊರು ಅಲೆದು ತನ್ನ ಮನೆ ಬೆಂಕಿಗಾಹುತಿ ಯಾದುದನ್ನು ತಿಳಿಸಿ ಹೊಸ ಮನೆ ಕಟ್ಟಿಕೊಳ್ಳಲು ಜನರಿಂದ ಸಹಾಯ ಕೇಳಿದನು. "ನನ್ನ ಮನಿ ಅಗ್ನಿನಾರಾಯಣಗ ಆಹುತಿಯಾಗ್ಯದ. ಮನಿ ಬೂದಿಯಾಗಿ ಬಿದ್ದದ. ನನ್ನ ಮನಿ ಕಟ್ಟಿಕೊಳ್ಳಾಕ ಸ್ವಲ್ಪ ಸಹಾಯ ಮಾಡ್ರಪ್ಪಾ. ನಿಮ್ಮದೊಂದು ಬಿದರು ನಮ್ಮ ಮನಿಗಿರಲಿ, ನಿಮಗ ದೇವರು ಒಳ್ಳೇದ ಮಾಡ್‌ತಾನೆ" ಂದು ಮನೆಮನೆಗೆ ಹೋಗಿ ಅಂಗಲಾಚಿದ. ಅವನ ದೈನ್ಯವನ್ನು ನೋಡಿ ಕೆಲವರು ಅಕ್ಕಿ, ಬತ್ತ, ದುಡ್ಡು ಅವನ ಜೋಳಿಗೆಯಲ್ಲಿ ಹಾಕಿದರು. ಅವನು ಬೇರೆ ಒಂದು ಸ್ಥಳದಲ್ಲಿ ಮನೆಯನ್ನು ಕಟ್ಟಿಕೊಂಡ. ಆ ಕೇರಿಯಲ್ಲಿ ಹೆಂಚು ಹೊದಿಸಿದ ಮೊದಲ ಮನೆಯೇ ಅದಾಗಿತ್ತು. ಮನೆ ನೋಡಿ ಜನ 'ಅಗ್ನಿ ನಾರಾಯಣ ಕೃಪೆ' ಎಂದು ತಮ್ಮ ತಮ್ಮಲ್ಲೆ ಮಾತಾಡಿಕೊಳ್ಳುತ್ತಿದ್ದರು.

...ಅಂದಿನ ದಿನಗಳಲ್ಲಿ ಜನ ನಿಜವಾಗಿಯೂ ಖುಷಿಯಿಂದ ಇದ್ದರು. ಜಾತ್ರೆ, ಹಬ್ಬಗಳಿಗೆ ರುಬ್ಬುವ ಕಲ್ಲಿನಲ್ಲಿ ಬೊಗುಣಿ ತುಂಬ ಹಿಟ್ಟು ಮಾಡಿ ಸಿಹಿ ಸಿಹಿ ತಿಂಡಿ, ಕಡಬು ಮಾಡಿ ತಿಂದು ಸುಖಿಸುತ್ತಿದ್ದರು. ಪಾತ್ರೆ ತುಂಬ ಮೀನಿನ ರುಚಿರುಚಿಯಾದ ಅಡಿಗೆ ಮಾಡಿ ಉಣ್ಣುತ್ತಿದ್ದರು. ಜಾತ್ರೆಗೆ ಗಡಿಗೆಯ ಹೆಡಿಗೆಗಳನ್ನು ತೆಗೆದುಕೊಂಡು ಬೇಸಿಗೆಯಲ್ಲಿ ಒಂದು ಜಾತ್ರೆಯಿಂದ ಇನ್ನೊಂದು ಜಾತ್ರೆಗೆ ಅಲೆಯುತ್ತಿದ್ದರು. ಮಿಠಾಯಿ ಖರ್ಚಾದಂತೆ ಜಾತ್ರೆಯಲ್ಲಿ

ಗಡಿಗೆಗಳ ಮಾರಾಟವಾಗುತಿತ್ತು. ಕೆಲವರಂತೂ ಮಡಕೆ ಖರೀದಿಗಾಗಿಯೇ ಜಾತ್ರೆಗೆ ಬರುತ್ತಿದ್ದರು. ಆಗಿನಂತೆ ಸ್ಮಶಾನದಲ್ಲಿ ಒಡೆಯಲಿಕ್ಕೆ ಮಾತ್ರ ಮಡಕೆ ಉಪಯೋಗಿಸುತ್ತಿರಲಿಲ್ಲ.

ಗಂಡಸರು ಕಾಡಿನಿಂದ ಕಟ್ಟಿಗೆ ತರಲು ಹೆಂಗಸರನ್ನು ಕರೆದುಕೊಂಡು ಹೋಗುತ್ತಿದ್ದರು. ಬರುವಾಗ ತಲೆಯ ಮೇಲೆ ಕಟ್ಟಿಗೆಯ ಹೊರೆಯಿಟ್ಟುಕೊಂಡು ನಡೆಯುವ ಹೆಣ್ಣುಮಕ್ಕಳು ಕೆಂಪೇರಿದವರಂತೆ ಕಾಣುತ್ತಿದ್ದರು. ಅಂದು ಅಡವಿಯೂ ಗಿಡಮರಗಳಿಂದ ತುಂಬಿ ಹಸಿರು ಹಸಿರಾಗಿ ಮೆರೆಯುತ್ತಿತ್ತು. ಆಗ ಈ ಗುಡ್ಡ ಹತ್ತಿರ ಇದ್ದಂತೆ ಕಾಣುತ್ತಿತ್ತು. ಕೆರೆಯ ಮಣ್ಣಿನ ವಾಸನೆಯಂತೂ ಹವೆಯಲ್ಲಿ ತೇಲಿ ಮನೆಮನೆಗೂ ಮುಟ್ಟುತ್ತಲಿತ್ತು.ಸ್ಮಶಾನ ಮಾತ್ರ ದೂರವಿದ್ದಂತೆ ಕಾಣುತ್ತಿತ್ತು. ಈಗ ಅದು ಸಮೀಪ ಬಂದು ಅಂಗಳದಲ್ಲಿದ್ದಂತೆ ಕಾಣುತ್ತದೆ.

...ಒಂದು ವರ್ಷ ಏನಾಯಿತೆಂದರೆ ಊರಲ್ಲಿದ್ದ ಎಷ್ಟೊ ಹೆಣ್ಣು ಮಕ್ಕಳ ಗರ್ಭ ನಿಲ್ಲದೆ ರಕ್ತಸೋರಿ ಹೋಗುವಂತಾಯಿತು. ಕೆಲವು ತಿಂಗಳು ಗರ್ಭ ಧರಿಸಿದರೂ ತಿಂಗಳು ತುಂಬುವುದರಲ್ಲಿಯೇ ಗರ್ಭಪಾತವಾಗಿ ಹೋಗುತಿತ್ತು. ಹೊಲಗಳಲ್ಲೂ ತೆನೆಗಳು ಪೊಳ್ಳಾಗತೊಡಗಿದ್ದವು. ತೆಂಗಿನ ಮರಗಳಿಗೂ ಕಾಯಿ ಗಟ್ಟಿಯಾಗುವ ಮೊದಲೇ ಬೊಂಡೆಗಳು ಉದುರಿ ಬೀಳುತ್ತಿದ್ದವು. ಅದೇ ವರ್ಷ ನನ್ನ ಗಂಡ ತೀರಿಕೊಂಡ. ಅಂದಿನಿಂದ ಮಂದಿ ದೂರ ಸರೀತಾ ಹೋದರು. ಆದರೆ ಮನೆಯ ಅಂಗಳದಲ್ಲಿದ್ದ ಮಾವಿನ ಮರ ಮಾತ್ರ ಏನೂ ಅರಿಯದಂತೆ ಎಂದಿನ ಹೂ-ಹಣ್ಣು ಬಿಡುತ್ತಿತ್ತು. ಪಾಪ! ಅದನ್ನೂ ಕಡಿದು ಹಾಕಿದರು. ಅದು ಕಡಿದು ಬಿದ್ದಾಗ ಅದರ ಕಣ್ಣೀರ ರಾಶಿ ರಾಶಿ ಮರದ ಬಿಡ್ಡೆಯಲ್ಲಿ ಬಿದ್ದು ಅಂಟಿನಂತೆ ಗಟ್ಟಿಯಾಗಿ ನಿಂತಿತ್ತು. ಮರ ಯಾರ ಹೆಸರಿನಲ್ಲಿ ಅಳುತ್ತಿತ್ತೋ ಏನೊ! ಯಾರಿಗೆ ಶಾಪ ಕೊಡುತ್ತಿತ್ತೊ. 'ನನ್ನ ಒಬ್ನೆ ಮಗ, ಹೊಟ್ಟೆ ಪಾಡಿಗಾಗಿ ಹೊರಗೆ ಹೋಗಿದ್ದಾನೆ. ಅವನನ್ನು ಕಾಪಾಡಪ್ಪ."

ಕ್ಷಣಕ್ಷಣಕ್ಕೂ ಕತ್ತಲೆ ದಟ್ಟವಾಗುತ್ತಿತ್ತು. ಸೀತವ್ವನ ಕಿವಿಗೆ ಕತ್ತಲೆಯ ಹುಳದ ಒಂದು ಬಗೆಯ ಕೆಟ್ಟ ಕೂಗು ಕೇಳಿಸಿತು. ಇಂಥ ಕೆಟ್ಟ ಕೂಗು ಓಂದೆಯೂ ಕೇಳಿ ಬಂದಿತ್ತು. ಗಂಡ ತೀರಿಕೊಂಡ ಹನ್ನೆರಡನೆಯ ರಾತ್ರಿ, ಮಗ ಗತಿಸಿದಾಗ ಸೊಸೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಾಗ ಇಂಥ ಕೆಟ್ಟ ಧ್ವನಿಯಲ್ಲಿ ರಾತ್ರಿಯ ಹುಳು ಕೂಗಿತ್ತು.

ಕತ್ತಲೆಯ ಕೂಪದಲ್ಲಿ ಹುತ್ತಗಳೆದ್ದು ನಿಂತಂತೆ ಮನೆಗಳ ಕತ್ತಲೆಯ ಮುಸುಕಿನಲ್ಲಿ ಗೋಚರಿಸುತ್ತಿದ್ದವು. ಕೇರಿಯಲ್ಲಿ ಶಾಂತತೆ ಪಸರಿಸಿತ್ತು. ಕುಂಬಾರರೆಲ್ಲ ಗಡಿಗೆಗಳನ್ನೆಲ್ಲ ಒಡೆದು ಹಾಕಿ ತಮ್ಮ ಮನೆ ಮಾರುಗಳನ್ನು ಬಿಟ್ಟು ಗಂಟು ಮೂಟೆ ಕಟ್ಟಕೊಂಡು ತೊರಟು ಹೋದಂತೆ ಸೀತವ್ವನಿಗೆ ಅನಿಸಿತು. ಈಗ ಕಾಣುತ್ತಿರುವುದು ಮನೆಗಳಲ್ಲ ಮಡಕೆ ಕುಡಿಕೆಗಳು ಒಡೆದು ಹಾಕಿದ ರಾಶಿ !

ಹೊಲದ ಕಡೆಯಿಂದ ಕತ್ತಲೆಯಲ್ಲಿ ಯಾರೋ ನಡೆದು ಬರುತ್ತಿದ್ದರು. ಅವಳು ಕತ್ತಲೆಯಲ್ಲಿ ಸರಿದು ನಿಂತಳು. ಆ ಮೂವರು ಅಂಗಳದಲ್ಲಿ ಅತ್ತಿತ್ತ ತೂಗುತ್ತ ಹೊರಟದ್ದಳು. ಅವರು ಹೆಂಡ ಕುಡಿದಿರಬೇಕು ಆದರೆ ಒಬ್ಬರೂ ಮಾತನಾಡದೆ ತೆಪ್ಪಗೆ ಯಾಕೆ ಹೊರಟದ್ದಾರೆ ಎಂದು ಆಶ್ಚರ್ಯವಾಗಿ ಅವರು ಕುಡಿದ ಮತ್ತಿನಲ್ಲಿ ಒಮ್ಮೆ ಕೂಗು ಹಾಕಿ ಮಲಗಿದ್ದ ಕೇರಿಯನ್ನು

ಎಚ್ಚರಿಸಬೇಕು ಎಂದು ಆಕೆಗೆ ಅನಿಸುತಿತ್ತು. ಆ ಮೂವರಲ್ಲಿ ಹಿಂದೆ ಹೊರಟಿದ್ದವನೊಬ್ಬನನ್ನು ಅವಳು ಸರಿಯಾಗಿ ಗುರುತಿಸಿದಳು. ಅವನು ಶಾಣು. ಅವನ ಹೆಂಡತಿ ಸತ್ತನಂತರ–ಅವನು ಹೆಂಡದ ದಾಸನಾಗಿ ಹೊಟ್ಟೆ ತುಂಬ ಹೆಂಡ ಕುಡಿದು ಎಲ್ಲೆಲ್ಲೊ ಬಿದ್ದಿರುತ್ತಿದ್ದ. ಮೊದಮೊದಲು ದೆವ್ವದಂತೆ ಕಿರುಚುತ್ತ ಕಾಡಿನಲ್ಲಿ ಹೆಂಡತಿಯನ್ನರಸುತ್ತ ಓಡಾಡುತ್ತಿದ್ದ.

ಕೇರಿಯ ಮೇಲ್ಭಾಗದಲ್ಲಿ ಕಟ್ಟಿದ ಎತ್ತುಗಳು ಕಟ್ಟಿದ ಗೂಟಕ್ಕೆ ಹಸಿವೆಯಿಂದ ಕೋಡುಗಳಿಂದ ಬಡಿದುಕೊಳ್ಳುತ್ತಿದ್ದವು. ಈ ಎತ್ತುಗಳು ಕುಂಬಾರ ಕೇರಿಯಲ್ಲಿ ಸಂತುಷ್ಟವಾಗಿದ್ದಂತೆ ಕಾಣುತ್ತಿಲ್ಲ. ಹೊಟ್ಟೆ ಒಳಸೇರಿದೆ. ಮೊದಲಿಗಿಂತ ಹೆಚ್ಚು ಸೊರಗಿವೆ. ಕಣ್ಣು ಗುಳಿ ಬಿದ್ದು ಸೋರುತಿದ್ದಂತೆ ಕಾಣುತಿತ್ತು.

ಅಷ್ಟರಲ್ಲಿ ಮತ್ತೊಬ್ಬ ಕತ್ತಲೆಯಲ್ಲಿ ಸರಿದಾಡುತ್ತ ಬರುತ್ತಿರುವುದು ಕಾಣಿಸಿತು. ಅವನು ತಪ್ಪಿ ಬಾವಿಯ ಕಡೆಗೆ ಹೋಗದಿದ್ದರೆ ಸಾಕು ಎಂದು ಸೀತವ್ವ ಗಾಬರಿಯಿಂದ ನೋಡಿದಳು. ಈ ಕಟ್ಟೆಯಿಲ್ಲದ ಬಾವಿ ಎಷ್ಟೊ ದಿನಗಳಿಂದ ಯಾರನ್ನೊ ನುಂಗಲು ಅಣಿಯಾದಂತೆ ಬಾಯಿ ತೆರೆದುಕೊಂಡು ಬಿದ್ದಿದೆ. ಒಂದಲ್ಲ ಒಂದು ದಿನ ಯಾರಾದರೂ ಬಿದ್ದಾರು ಎಂದು ಅಂಜಿಕೆಯಾಗುತ್ತಿರುತ್ತದೆ.

ಅವನು ನೇರವಾಗಿ ಸೀತವ್ವನ ಅಂಗಣಕ್ಕೆ ಬಂದ. 'ಸೀತವ್ವ' ಎಂದು ಅಳುತ್ತ ಕೂಗಿ ಕರೆದ. ಅವನ ಬಾಯಿಯಿಂದ ಘಮ್ಮೆಂದು ಹೆಂಡದ ವಾಸನೆ ಹರಡಿತು.

"ಯಾರು ಧರ್ಮುನ ಪ್ರೇಮಾನಂದ ಏನಪ್ಪ ? ಎಷ್ಟ ಸಾಂಣ ಹುಡುಗ ಏನಾಗ್ಯದೊ ನಿನಗ...? ಏನ್ ಕಥಿಯಪ್ಪ ನಿನ್ನದು ? ನಿನ್ನಪ್ಪನೂ ಕುಡೀತಿದ್ದ...ನೀನ್ಯಾಕ ಈ ರಾಡ್ಯಾಗ ಬಿದ್ಯೋ ?"

"ನಮ್ಮಪ್ಪ ಊಟಕ್ಕಿಲ್ಲದ್ಹಂಗ ಮಾಡ್ದ. ಈಗ ಗಡಿಗೆಗಂತೂ ಕಿಮ್ಮತ್ತಿಲ್ಲ. ನಾನು ಮಾಜಾಳಿ ಮೆಸ್ತನ ಕುಲಮಿಗೆ ಕೆಲಸಕ್ಕ ಹೋಗ್ತೀನಿ. ಕಾದ ಕಬ್ಬಿಣದ ಮ್ಯಾಲ ಸುತ್ತಿಗೆಯಿಂದ ಬಡಿಯಾಕ."

"ಈಗ ನಿನ್ನ ಕೈ ಹ್ಯಾಂಗದ ?" ಹಿಂದಿನ ದಿನಗಳಲ್ಲಿ ಸುತ್ತಿಗೆಯಿಂದ ಬಡಿದು ಬಡಿದು ಅವನ ಅಂಗೈ ಮತ್ತು ಬೆರಳುಗಳಿಗೆ ಗಾಯವಾಗಿ ರಕ್ತ ಒಸರುತ್ತಿದ್ದುದನ್ನು ಅವಳು ನೋಡಿದ್ದಳು.

"ಹಾಳಾಗಿ ಹೋಗ್ಲಿ ಕೈ...ನೂರು ಸಲ ಸುತ್ತಿಗೆಯಿಂದ ಹೊಡೆದರೆ ಇಪ್ಪತ್ತು ರೂಪಾಯಿ ಕೊಡ್ತಾರೆ. ಅಪ್ಪನಿಗೆ ಈಗ ಹೊಟ್ಟೆ ಹಸಿವು ಆಗೂದಿಲ್ಲಂತ. ಇನ್ನ ಸ್ವಲ್ಪ ದಿನದಾಗ ಅಂವಾ ಸಾಯ್ತಾನ. ಅವ್ವಗ ಕೊಡತೀನಿ ದಿನಕ್ಕ ಹತ್ತಿಪ್ಪತ್ತು ರೂಪಾಯಿ. ಅಂವಾ ಹ್ವಾದ್ರ ಅವ್ವಗಾದ್ರೂ ಸುಖ ಸಿಗ್ತದ."

ಅವನ ಈ ಮಾತುಗಳನ್ನು ಕೇಳಿ ಸೀತವ್ವನಿಗೆ ಮೈಮೇಲೆ ಬರೆ ಎಳೆದಂತಾಯಿತು. ಅವಳು ಮುಂದೆ ಮಾತಾಡಲಿಲ್ಲ. ಪ್ರೇಮಾನಂದ ಪಿಸುಗುಟ್ಟುತ್ತ ಹೊರಟು ಹೋದ. "ಕುಲಮಿ ಸುತ್ತಿಗೆ ಅಂದರೆ ಕುಂಬಾರರ ಕೈಯೊಳಗಿನ ಹೂವಿನಷ್ಟು ಹಗುರ ಪೆಟಣೆ ಅಲ್ಲ. ಬಿಸಿ ಬಿಸಿ ಕೆಂಡದಂತಿದ್ದ ಕಬ್ಬಿಣದ ಮ್ಯಾಲ ಸುತ್ತಿಗೆಯಿಂದ ಹೊಡೆಯುವದೆಂದರೆ ಚ್ಯಾಷ್ಟಿ ಅಲ್ಲ. ಆ ಕೆಂಪು ಕಬ್ಬಿಣದಿಂದ ಕಿಡಿಗಳು ಹೊರಡತಾವ. ರಟ್ಟಿ ಬಿದ್ದು ಹೋಗ್ತದ....."

ಸೊಸೆ ತಾರಾ ಬಾಗಿಲಲ್ಲಿ ಬಂದು ನಿಂತಳು. "ಹಿಂಗ್ಯಾಕ ಹೊರಗ ಕುಂತೀರಿ

ದೆವ್ವದ್ಹಂಗ? ಗುಡ್ಡದ ಕಡಿ, ಸ್ಮಶಾನದಾಗ ಯಾರಿಗ ಸುಡ್ತಾರಂತ ನೋಡ್ತೀರೇನು ? ಹಾಳಾಗಿ ಹೋಗ್ಲಿ ನಿಮ್ಮ ಈ ಕೇರಿ. ಬಾಗಲಾಗ ಕುಂತರ ಹೆಣ ಸುಡುವ ಬೆಂಕಿ ಕಣ್ಣಿಗ ಕಾಣಿಸ್ತಿರ್ತದ."

"ಎಂಥ ಕೆಟ್ಟ ಮಾತಾಡ್ತಿಯವ್ವ ತಾರಾ ನೀನು. ಮುಸ್ಸಂಜಿ ಹೊತ್ತಿನಾಗ. ನಿನ್ನ ಮಗ ಹೋಗ್ಯಾನಲ್ಲ ಬ್ಯಾರೆ ಊರಿಗೆ ಹೊಟ್ಟಿ ತುಂಬಾಕ" ಸೀತವ್ವ ಕೊಂಚ ಸಮಯ ಸುಮ್ಮನಿದ್ದಳು. ಬಳಿಕ ಅವಳು ಒಳಗೆ ಮುಖ ಮಾಡಿ ಹೇಳಿದಳು "ನೋಡವ್ವ ನಾನ್ ಸತ್ರೆ ನನ್ನ ಮೊಮ್ಮಗನ ಕೈಯಿಂದಲೇ ಬೆಂಕಿಯಿಡಬೇಕು ನೋಡು. ಹೆಣ ಹಂಗ ಇಟ್ಟು ಯಾರಿಗಾದ್ರೂ ಕಳಿಸಿ ಅಂವಗ ಕರ್‍ಕೊಂಡು ಬರಾಕ ಹೇಳು ತಾರಾ." ಅವಳು ನಿಟ್ಟುಸಿರು ಬಿಡುತ್ತ ಮತ್ತೆ "ನನ್ನ ಮೊಮ್ಮಗಳ ಮದಿವಿ ನೋಡೇ ನಾ ಸಾಯುವಾಕಿ" ಎಂದಳು.

ಈ ಮಾತು ಕೇಳಿ ತಾರಾಗೆ ಅತ್ತೆಯ ಬಗ್ಗೆ ಕರುಣೆ, ಪ್ರೀತಿ ಉಂಟಾಯಿತು. ಅವಳ ಕಂಠ ಗದ್ಗದಿತವಾಗಿ ಅವಳ ಮುಂದೆ ಕುಳಿತು ಅತ್ತು ಬಿಡೋಣವೆನಿಸಿತು. ಅವಳು ಮಾತಾಡದೆ ಮನೆಯ ಒಳಗೆ ಹೋದಳು. "ಬರ್ರಿ...ಊಟಕ್ಕೆ ಬರ್ರಿ" ಎಂದು ಒಳಗಿನಿಂದಲೇ ಅತ್ತೆಯನ್ನ ಕರೆದಳು.

* * *

**ಮಾ**ಜಾಳಿಯಲ್ಲಿ ಬಂಡಿ ಜಾತ್ರೆ ಮುಗಿದು ಎಂಟು ದಿನಗಳಾಗಿದ್ದವು. ನಾಲ್ಕು ದಿನ ಬಂಡಿ ಹಬ್ಬದ ಗದ್ದಲ. ಜಾತ್ರೆಯ ಕೂಗು, ಕಲರವ, ಓಡಾಟ, ಮಿತಿಮೀರಿದ ಉತ್ಸಾಹ. ರಾತ್ರೆಯ ಹೊತ್ತು ನಾಟಕಗಳ ಪಾತ್ರಧಾರಿಗಳು ಮಾತನಾಡುವ ಸದ್ದು ಕುಂಬಾರ ಕೇರಿಯವರೆಗೂ ಕೇಳಿ ಬರುತ್ತಿತ್ತು. ಹಿಂದೆ ಸೀತವ್ವ ಒಂದು ಹೆಡಿಗೆಯಾದರೂ ಗಡಿಗೆ ತೆಗೆದುಕೊಂಡು ಹೋಗಿ ಮಡಕೆ ಮಾರುತ್ತ ಜಾತ್ರೆಯಲ್ಲಿ ಬೇಕಾದ ಸಾಮಾನುಗಳನ್ನು ಖರೀದಿಸುತ್ತಿದ್ದಳು. ಅವಳ ಮಗ ಸತ್ತನಂತರ ಅವಳು ಜಾತ್ರೆಗೆ ಹೋಗಲಿಲ್ಲ. ಸಂಜೆಯ ಹೊತ್ತು ಮನೆಯ ಜಗಲಿಯ ಮೇಲೆ ಕುಳಿತು ಹಿಂದೆ ಕಳೆದ ದಿನಗಳು, ಜಾತ್ರೆಯಲ್ಲಿ ಮಾಡಿದ ವ್ಯಾಪಾರ, ಓಡಾಟ ಸ್ಮರಿಸುತ್ತಿರುತ್ತಾಳೆ. ಅವಳಿಗೆ ಜಾತ್ರೆಯಲ್ಲಿ ಹಿಡಿಸಿದ್ದೆಂದರೆ ಜಾತ್ರೆಗೆ ಬುಟ್ಟಿಗಟ್ಟಲೆ ಬರುವ ಕನಕಾಂಬರ ಹೂವುಗಳು, ಅವನ್ನು ಮುಡಿ ತುಂಬ ಮುಡಿದು ಉತ್ಸಾಹದಲ್ಲಿ ಸುತ್ತಾಡುವ, ಬಂಡಿಯ ಮುಂದೆ ದೇವರ ಹರಕೆಯ ಬುಟ್ಟಿ ತಲೆಯ ಮೇಲಿಟ್ಟುಕೊಂಡು ನಡೆಯುವ ನೂರಾರು ಮುತ್ತೈದೆಯರು. ಈಗ ಈ ಹಬ್ಬ ಅವಳಿಗೂ, ಅವಳ ಸೊಸೆಗೂ ದೂರವಾಗಿದೆ. ಕನಕಾಂಬರ ನೋಡಿದಾಗ ಮೈನಪಿರೇಳುತ್ತದೆ, ಜೀವ ಸಿಡಿಮಿಡಿಗೊಳ್ಳುತ್ತದೆ. ಮನಸ್ಸು ಯಾರಿಗೊ ಬಯ್ಗುಳ ಹಾಕುತ್ತಿರುತ್ತದೆ.

ಜಾತ್ರೆಯ ದಿನ ಕುಂಬಾರ ಕೇರಿಯಲ್ಲಿ ಹಬ್ಬದ ವಾತಾವರಣವಿತ್ತು. ಪ್ರತಿಯೊಂದು ಮನೆಯವರು ಕನಿಷ್ಠ ನಾಲ್ಕು ಕೋಳಿಗಳನ್ನಾದರೂ ಕೊಂದಿರಬೇಕು. ಬೋಗುಣಿ ತುಂಬ ದೋಸೆಯ ಹಿಟ್ಟು ರುಬ್ಬಿ ಪುಟ್ಟ ಮಂಕರಿ ತುಂಬ ದೋಸೆ ಮಾಡಿಟ್ಟದ್ದರು. ಪೊಳೆ ಎಂಬ ಹಳ್ಳಿಯ ಹತ್ತಿರದ ಕಾಲುದಾರಿಯಲ್ಲಿ ನಡೆದು ಗೋವೆಯ ಸೀಮೆಯಲ್ಲಿರುವ ಅಂಗಡಿಯಿಂದ ಪ್ರತಿಯೊಬ್ಬರು ಎರಡೆರಡು ಫೆಣಿಯ ಬಾಟ್ಲಗಳನ್ನು ತಂದಿಟ್ಟುಕೊಂಡಿದ್ದರು. ಅಸನೋಟ, ಕಣಸಗಿರಿ, ಫಾತರ್ಪೆ, ಜಾಂಬಾವಲಿಯಿಂದ ನೆಂಟರಿಷ್ಟರು ಬಂದಿದ್ದರು. ಶಿವರಾಮನು

ಬಾಡಿಗೆ ಪೆಟ್ರೊಮ್ಯಾಕ್ಸ್ ತಂದು ಮನೆಯಂಗಳದ ಚಪ್ಪರದಲ್ಲಿ ತೂಗು ಹಾಕಿದ್ದ. ಅದರ ಬೆಳಕು ಎಲ್ಲ ಕುಂಬಾರರ ಮನೆಯ ಬಾಗಿಲಲ್ಲಿ, ಅಂಗಳದಲ್ಲಿ ಸ್ವಲ್ಪ ಸ್ವಲ್ಪ ಬೀಳುತ್ತಿತ್ತು. ರಾತ್ರೆ ಏರುತ್ತಿದ್ದಂತೆ ಪ್ರತಿಯೊಬ್ಬರ ಮನೆಯಲ್ಲಿ ಮಾತಿನ ಸದ್ದು, ನಗು, ಕೇಕೆ, ಹಾಡು ಎಲ್ಲ ಕೇಳಿ ಬರುತಿತ್ತು. ಕೇರಿಗೆ ಒಂದು ಬಗೆಯ ಉತ್ಸಾಹ, ಸಂಭ್ರಮದ ನಶೆಯೇರಿದಂತಾಗಿತ್ತು. ಕುಂಬಾರರೆಲ್ಲ ಆ ಕ್ಷಣ ತಮ್ಮ ದುಃಖ, ನೋವು, ಕಷ್ಟಗಳನ್ನೆಲ್ಲ ಬದಿಗೊತ್ತಿ ಸಂತಸದ ಸಡಗರದಲ್ಲಿ ಮೈಮರೆತಿದ್ದರು.

...ಆದರೆ ಇಂದು ಕುಂಬಾರ ಕೇರಿಯೆಲ್ಲ ನಿರ್ಜೀವವಾಗಿ ಬಿದ್ದುಕೊಂಡಿತ್ತು. ಬೆಟ್ಟದ ಅಂಚಿನಲ್ಲಿ ಕೆರೆಯ ನೀರು ಬತ್ತಿ ತಳ ಕಂಡಿತ್ತು. ನಾಲ್ಕೂ ದಿಕ್ಕಿನಿಂದ ಬಂದ ಒಕ್ಕಲಿಗರು ಕೆರೆಯಲ್ಲಿ ಫಡಫಡಿಸುತ್ತಿದ್ದ ಮೀನು, ಏಡಿಗಳನ್ನು ಚಿಕ್ಕ ಚಿಕ್ಕ ಬುಟ್ಟಿಯಲ್ಲಿ ತುಂಬಿಕೊಂಡು ಹೋಗುತ್ತಿದ್ದರು. ಕೆರೆಯ ನೀರು ಕೆಸರು ತುಳಿತುಳಿದು ರಾಡಿಯಾಗಿತ್ತು. ಮಣ್ಣು ಕೊಳೆತ ವಾಸನೆ ಊರಲೆಲ್ಲ ಹಬ್ಬಿತ್ತು. ಈ ಕೊಳೆತ ಕಪ್ಪು ಮಣ್ಣಿನ ಗಡಿಗೆ ಮಾಡಿ ಒಣಗಿಸಿ ಆವಿಗೆಯಲ್ಲಿ ಹಾಕಿ ಸುಟ್ಟರೆ ಅದು ದೇವರಂತೆ ಕೆಂಪಗಾಗುವುದು ಹೇಗೆ ಎಂಬ ಒಗಟು ಸೀತವ್ವ ಎಷ್ಟು ಯೋಚಿಸಿದರೂ ಸ್ಪಷ್ಟ ಅರ್ಥವಾಗುತ್ತಿರಲಿಲ್ಲ. ಮಡಕೆಗಳು ಅವಳಿಗೆ ಆ ಮುತ್ತೈದೆಯರು ತಲೆತುಂಬ ಮುಡಿದುಕೊಂಡ ಕನಕಾಂಬರ ಹೂವಿನರಾಶಿಯಂತೆ ಕಾಣಿಸುತಿತ್ತು. ಈ ಒಗಟು ಬಿಡಿಸುವುದು ಹೇಗೆ ? ಸದಾನಂದನಿಗೆ ಕೇಳೋಣವೆಂದರೆ ಅವನೀಗ ಪುಣೆಯಲ್ಲಿದ್ದಾನೆ. ಕುಂಬವಾರ ಧಂದೆಯಲ್ಲಿ ಸುಖವಿಲ್ಲ ಎಂದು ಅವನು ಓದಿಗೆ ಶರಣಾದ. ಸದಾನಂದ ಓದು ಮುಗಿಸಿ ಬಂದಾಗ ಅವನ ಕಣ್ಣುಗಳಲ್ಲಿ, ಮುಖದಲ್ಲಿ ಒಂದು ಬಗೆಯ ತೇಜಸ್ಸು ಹೊರ ಚೆಲ್ಲುತ್ತಿತ್ತು. ಸಖಾರಾಮನ ಹೆಂಡತಿ ಶೀಲಾ ಈ ಊರಿಗೆ ತಪ್ಪಿ ಬಂಗಾರದ ಚಿಗರೆಯಂತೆ ಬಂದಿದ್ದಳು. ಅವಳೂ ಒಂದು ಕುಂಬಾರಕೇರಿ ಬಿಟ್ಟು ಹೊರಟು ಬಿಟ್ಟಳು. ಇಲ್ಲಿ ಒಳ್ಳೆಯವರಿಗೆ ಅವಕಾಶವಿಲ್ಲವೇನು?

ಮಾವಿನ ಗಿಡಕೆ ಹೂ ಬಿಡುವ ದಿನಗಳಿವು ಎಂದು ಸೀತವ್ವನಿಗೆ ಒಮ್ಮೆಲೆ ನೆನಪಾಯಿತು. ಈ ದಿನಗಳಲ್ಲಿ ಮಾವಿನ ಮರಕ್ಕೆ ಹೂವು ಬಿಡುತ್ತಿತ್ತು. ತೇರಿನಂತಹ ಮರಕ್ಕೆ ದುಂಬಿಗಳು ಮುಕುರುತ್ತಿದ್ದವು. ಸುವಾಸನೆಯಿಂದ ಊರೆಲ್ಲ ಘಮಘಮಿಸುತ್ತಿತ್ತು. ದೇವರ ನಿಗೂಢ ಶಕ್ತಿಯೆಂದರೆ ಇದು. ಕಾಯಿ ದೇಟಿಗೆ ಹಿಡಿಯುವ ಮೊದಲೇ ಹೂವಿನ ಪರಿಮಳ! ದೇವರ ಶಕ್ತಿ ಈಗ ಮಾಯವಾಗಿದೆ. ಕೇರಿಯಲ್ಲಿ ಮಾವಿನ ಮರವಿದ್ದಾಗ ಕೇರಿಯೇ ದೇವಾಲಯ ವಾಗುತಿತ್ತು. ಈಗ ಏನೂ ಇಲ್ಲ. ಎಲ್ಲಾ ಕಳೆದು ಹೋಗಿದೆ. ಶೂನ್ಯ ಶೂನ್ಯವಾಗಿದೆ.

ಈ ನಡುವೆ ವಿಷ್ಣುನ ಹೆಂಡತಿ ಜಾಯುಳ ದೊಡ್ಡ ಕಾಯಿಲೆ ಬಗ್ಗೆ ವಿಚಾರಿಸಿಕೊಂಡು ಹೋಗಲು ಬಂದಿದ್ದಳು. ಹಿಂದೆ ಅವಳಿಗೆ ಒಂದೇ ಸವನೆ ಮೈಮೇಲೆ ರಕ್ತ ಹೋಗುತಿತ್ತು. ಅವಳನ್ನು ಅವಳ ಗಂಡ ವಿಷ್ಣು ಗೋವೆಯ ಬಾಂಬೋಳಿಯಲ್ಲಿದ್ದ ಸರಕಾರಿ ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದ. ಅವಳ ಗರ್ಭಾಶಯದ ಚೀಲದಲ್ಲಿ ಗಂಟು ಆಗಿದೆಯಂತೆ. ಅದು ಕ್ಯಾನ್ಸರ್ ಇದ್ದರೂ ಇರಬಹುದು ಎಂದು ಡಾಕ್ಟರರ ಅಂಬೋಣ. ಎಂಟು ದಿನ ಬಿಟ್ಟು ಮತ್ತೊಮ್ಮೆ ಬಾ ಅಂತ ಹೇಳಿದ್ದಾರೆ–ಗರ್ಭಚೀಲ ತೆಗೆದು ಹಾಕಲು. ಜಾಯೂಗೆ ಐದು ಜನ ಹೆಣ್ಣು ಮಕ್ಕಳು, ಗಟ್ಟಿಮುಟ್ಟಾಗಿದ್ದಾರೆ. ಅವರ ಮದುವೆಯಾಗಿ ಗಂಡನ

ಮನೆಯಲ್ಲಿದ್ದಾರೆ. ಇಬ್ಬರೇ ಗಂಡು ಮಕ್ಕಳು ಒಳ್ಳೆಯ ಸ್ವಭಾವದವರು. ಎಲ್ಲರಿಗೂ ಬೇಕಾದವರು. ಅವರು ಬಿಸಿಲಿನಲ್ಲಿ ನಿಂತು ನಿಮಗೆ ನೆರಳು ಕೊಡುವಂಥವರು. ಇಂಥ ಒಳ್ಳೆಯ ಮಕ್ಕಳನ್ನು ಕೊಟ್ಟ ಗರ್ಭಚೀಲದಲ್ಲಿ ಈಗ ಗಂಟು ಹುಟ್ಟಿಕೊಂಡಿದೆ. ವಿಷ್ಣು ಈಗ ತಿಗರಿ ಮುಟ್ಟುವುದಿಲ್ಲ. ಗಡಿಗೆ ಮಾಡುವುದಿಲ್ಲ. ಪೆಟಣೆ ಕೈಯಲ್ಲಿ ಹಿಡಿಯುವುದಿಲ್ಲ. ವಿಷ್ಣು ಮಾನಸಿಕವಾಗಿ ಇಳಿದು ಹೋಗಿದ್ದಾನೆ. ನಿರಾಶೆ ಮನೆಮಾಡಿಕೊಂಡಿದೆ. ನಾನು ಎಷ್ಟೆಷ್ಟು ಗಡಿಗೆ ತಟ್ಟಿದೆ. ಹೆಂಡತಿ ಎಷ್ಟೊ ಸಲ ಬಸಿರಾಗಿದ್ದಳು...ಒಟ್ಟಿನ್ಯಾಗ ಕುಂಬಾರ ಮಂದಿಗೆ ಜಯವಿಲ್ಲ ಎಂದು ಕೊರಗುತ್ತಾನೆ.

*　　　*　　　*

ಇಂದು ಉದಯಿಸಿದ ಸೂರ್ಯನಿಗೆ ಬಿಸಿಲೇ ಇರಲಿಲ್ಲ. ಮುಖದ ಮೇಲೆ ಪರದೆ ಹಾಕಿದಂತಿತ್ತು. ದೂರದ ಬೆಟ್ಟದಲ್ಲಿ ಪಹರೆಯವರಂತೆ ಸಾಲಾಗಿ ನಿಂತಿದ್ದವು ಅರ್ಜುನ ಮರಗಳು. ಅವು ಇನ್ನೂ ಮುಸುಕಿದ ಮಬ್ಬಿನಿಂದ ಬಿಡುಗಡೆಯಾದಂತಿರಲಿಲ್ಲ. ಕೆರೆಯ ಸುತ್ತಲಿನ ಗಿಡಮರಗಳು ತಮ್ಮ ಜುಟ್ಟು ಚಾಚಿ ರಾಕ್ಷಸರಂತೆ ನಿಂತಿದ್ದವು. ಕೆರೆಯು ತಣ್ಣಗೆ ಬಿದ್ದಿತ್ತು. ಒಂದು ಗುಬ್ಬಿ-ಹಕ್ಕಿಯ ಸುಳಿವೂ ಇರಲಿಲ್ಲ. ಆದರೆ ಕೇರಿಯ ಹಿಂದಿನ ಹೊಲದಲ್ಲಿ ಒಬ್ಬ ರೈತ ಕೂಗು ಹಾಕುತ್ತ ಹೊಲ ಊಳುತ್ತಿದ್ದ. ಅವನು ಎತ್ತಿನ ಮೈಮೇಲೆ ಹಾಕಿದ ಬಡಿಗೆಯ ಬಡಿತದ ಸದ್ದು ಕೇರಿಗೂ ಕೇಳಿಸುತ್ತಿತ್ತು.

ಕುಂಬಾರರು ಸದಾ ತಡವಾಗಿಯೇ ಏಳುತ್ತಿದ್ದರು. ನೀವು ಸೂರ್ಯನಿಗೆ ಕಾಲು ಚಾಚಿ ಮಲಗಿರುತ್ತೀರಿ ಎಂದು ನಿಮ್ಮ ಹೊಟ್ಟೆಗಳು ತುಂಬುವುದಿಲ್ಲವೆಂದು ಕೆಲವು ರೈತರು ಕುಂಬಾರರಿಗೆ ಹೇಳಿದ್ದುಂಟು. ಕುಂಬಾರರು ಮಧ್ಯರಾತ್ರಿ ದಾಟಿದ ಮೇಲೂ ಗಡಿಗೆ ತಟ್ಟುತ್ತಿರುತ್ತಾರೆ. ಅವರ ಹೆಂಡರು ಅಲ್ಲಿ ಗುಣಗುಣಿಸುತ್ತ ಓಡಾಡುತ್ತಿರುತ್ತಾರೆ. ಗಂಡ ಮಲಗಲು ಹಾಸಿಗೆಗೆ ಬಂದ ಹೊರತು ಅವರಿಗೂ ನಿದ್ದೆ ಬರುವುದಿಲ್ಲ. ಬೆಳಿಗ್ಗೆ ಎದ್ದು ಮಸಿಯಿಂದ ಹಲ್ಲು ಉಜ್ಜುತ್ತಿರುವಾಗಲೇ ಕೆರೆಯ ಕಡೆಯಿಂದ ಘರ ಘರ ಸದ್ದು ಬಂದಂತಾಯಿತು. ಜನರು ಇದು ಯಾವ ಯಂತ್ರ ಕೆರೆಯ ಕಡೆ ಘರಘರಿಸುತ್ತದೆ ಎಂದು ಸೋಜಿಗ ಪಟ್ಟರು.

ಎಡಗಡೆಯ ಹೊಲದಲ್ಲಿ ಹತ್ತಿಪ್ಪತ್ತು ಗಂಡಸರು, ಹೆಂಗಸರು ಕತ್ತಿ ಕುಡಗೋಲು, ಪಿಕಾಸು, ಗುದ್ದಲಿ, ಬುಟ್ಟಿ ಹಿಡಿದು ಆ ಇಬ್ಬನಿಯಲ್ಲಿಯೇ ನಡೆದು ಕೆರೆಯ ಕಡೆಗೆ ಹೋಗುತ್ತಿರುವುದು ಕಾಣಿಸಿತು. ಕುಂಬಾರನೊಬ್ಬ ಎವೆಯಿಕ್ಕದೆ ನೋಡುತ್ತಿದ್ದ. ಈ ಮಂದಿ ಇವೆಲ್ಲ ಸಾಧನ ಸಲಕರಣೆಗಳನ್ನು ಹಿಡಿದುಕೊಂಡು ಯಾರ ಹೆಣ ಹಾಕಲಿಕ್ಕೆ ಓಡುತ್ತಿದ್ದಾರೆ ಅಥವಾ ತಮ್ಮದೇ ಗಂಟಲು ಸೀಳಿಕೊಂಡು ಸಾಯುತ್ತಾರೊ.

ಪಾಲ್ಗುಣ ಮಾಸ. ಎಲೆಗಳುದುರಿ ಎಷ್ಟೊ ಮರಗಳು ಬೋಳಾಗಿದ್ದವು. ದೂರದ ಬೆಟ್ಟದ ಮೇಲೂ ಅರಿಷಿಣ ಹೊಂಡಗಳು ಬಿದ್ದಿದ್ದವು. ಕೆರೆಯ ನೀರೂ ಒಣಗಿ ತಳ ಹಿಡಿದಿತ್ತು. ನೆಲದಲ್ಲಿ ಅಂಟು ಅಂಟಾದ ಕೆಸರು ಸ್ವಲ್ಪ ಹಸಿಯಿತ್ತು. ಕೆರೆಯಲ್ಲಿ ಅರಳಿದ ತಾವರೆ, ಅದರ ದೇಟು, ಎಲೆಗಳೆಲ್ಲ ನೀರಲ್ಲಿ ಕೊಳೆತು ಅರಲಾಗಿ ನೆಲಕಚ್ಚಿದ್ದವು. ಕುಂಬಾರರೆಲ್ಲ ಇನ್ನು ಎಂಟೇ ದಿನಗಳಲ್ಲಿ ತಮಗೆ ಬೇಕಾದ ಅಂಟುಮಣ್ಣು ತರಲು ಕೆರೆಗೆ ಹೋಗುವವರಿದ್ದರು.

ಘರ್‌ಘರ್ ಸದ್ದು, ಹತ್ಯಾರಗಳನ್ನು ಹಿಡಿದುಕೊಂಡು ಜನ ಹೋಗುತ್ತಿರುವುದನ್ನು

ನೋಡಿದ ಕುಂಬಾರರು ಚಳಿಯಿಂದ ನಡುಕ ಬಂದಂತೆ ನೆಲದ ಮೇಲೆ ತಲೆಯ ಮೇಲೆ ಕೈ ಹೊತ್ತು ಕುಳಿತುಕೊಂಡರು. ಹೊಟ್ಟೆಯಲ್ಲಿ ತೊಳಸಿದಂತೆ ಯಾತನೆಯಾಗುತಿತ್ತು. ಬೆಟ್ಟದ ಬಳಿ ಅದೆಂಥ ಮರಣದ ಘರ ಘರ !

ರಾಮಚಂದ್ರ ಎತ್ತುಗಳನ್ನು ಬಿಟ್ಟು ಕೆರೆಯ ಬಳಿ ಹೊಡೆದುಕೊಂಡು ಹೋಗಿದ್ದ. ಅವನು ಅಲ್ಲಿಯೇ ಎತ್ತುಗಳನ್ನು ಬಿಟ್ಟು ಓಡುತ್ತ ಬಂದ. ಅವನು ಏದುಸಿರು ಬಿಡುತ್ತ ಹೇಳಿದ. "ಮಾಜಾಳಿ ಕಡಿಯಿಂದ ಎಡ್ಡ ದೊಡ್ಡ ಬುಲ್ಡೋಜರ್ ಮತ್ತು ಎಡ್ಡ ಟ್ರಕ್‌ಗಳು ಬಂದಾವ. ಕಾರವಾರ ಕಡಿಯಿಂದ ವಡ್ಡರ ಮತ್ತು ಲಮಾಣೇರ ತಂಡ ಬಂದಾವ. ಆ ಮಂದಿ ಕೆರಿಯ ಕೆಲಸ ಮಾಡಾಕ ಹತ್ಯಾರ."

ಈ ಮಾತು ಕೇಳಿ ಪುರುಶ್ಯಾ ಅತ್ತಂತೆ ಮುಖಮಾಡಿ "ಇನ್ನ ನಮ್ಮ ಮಣ್ಣು ತೆಗೆದು ಅವರು ಒಡ್ಡಿಗೆ ಹಾಕ್‌ತಾರೆ. ಒಡ್ಡು ಇಪ್ಪತ್ತು ಇಪ್ಪತ್ತು ಘೂಟ ಎತ್ತರ ಮಾಡ್ತಾರಂತೆ. ನಮ್ಮ ಮಣ್ಣು ಆ ಕೆರೀ ನೀರಾಗ ಮುಳುಗಿ ಹೋಗ್ತದ. ಮೇ ತಿಂಗಳಾಗೂ ಒಂದಾಳು ನೀರ ಇದ್ರ ಮಣ್ಣ ತೆಗಿಯೂದು ಹ್ಯಾಂಗ ?"

ಘನಶಾಮ ಮುಂದೆ ನುಡಿದ "ವರ್ಷವಿಡೀ ಅವರ ತಮ್ಮ ಗದ್ದಿ ಹೊಲಕ ನೀರು ಬಿಟ್ಕೋತಾರ, ಗದ್ದಿಗ, ತೆಂಗಿನ ಮರಗಳಿಗೆ ನೀರು ಹಾಕ್ಕೋತಾರೆ. ಅವರು ಸುಖವಾಗಿರ್ತಾರ. ನಮಗ ಮಾತ್ರ ಒಂದ್ ಬುಟ್ಟಿ ಮಣ್ಣೂ ಸಿಗೂದಿಲ್ಲ. ಮಣ್ಣಿನ ಬಿಕ್ಕಿ ಬೇಡ್ತಾ ನಾವಿನ್ನು ಎಲ್ಲಿಗೆ ಹೋಗೂದು ?" ಅವನು ದೊಡ್ಡಕೆ ಸೀತವ್ವನಿಗೆ ಕೂಗು ಹಾಕಿದ. "ಸೀತವ್ವ ಕೇಳಿದಿಯೇನು. ಕೆರಿ ಹತ್ರ ಯಾರಿಗೆ ಸಾವಿನ ಘರಘರ ಹತ್ತೈತಂತ ನೋಡು." ಸೀತವ್ವ ಮೆಲ್ಲಗೆ ಬಂದು ಅವರ ಬಳಿ ಕುಳಿತುಕೊಂಡಳು. ಕೈಕಾಲು ಮುರಿದು ಹರಡಿಹಾಕಿದಂತೆ.

*The above testimonium in Konkani Language, is published in "Hortus Indicus Malabaricus", a comprehensive treatise that deals with the medicinal properties of the flora in the Indian stateKerala. The book in Latin was conceived by Hendrik Van Rheede who served as a Governor of Dutch Malabar between 1670 and 1677. The testimonium certifies the authenticity of medicinal information recorded in 12 Volumes. It has been inscribed in Konkani Language, duly signed by Ranga Bhat, Vinayaka Pandit and Appu Bhat, three Konkani Physicians who were the prominent contributors to the stupendous work. Apart from Latin, Malayalam and Arabic, the plant names have also been recorded in Konkani Language in these volumes.*

## ಆವಿಗೆ



**ಮಹಾಬಳೇಶ್ವರ ಸೈಲ್ (1945)**

ಕೊಂಕಣಿಯ ಪ್ರಮುಖ ಕಥಾಲೇಖಕರು. ಇವರು ಹುಟ್ಟಿದ್ದು ಕಾರವಾರದ ಮಾಜಾಳಿ ಊರಿನಲ್ಲಿ. ಬಹಳ ಸಣ್ಣವಯಸ್ಸಿನಿಂದಲೇ ಸಾಹಿತ್ಯ ಮತ್ತು ನೆಲದ ಸಂಸ್ಕೃತಿಯ ಕುರಿತು ಆಸಕ್ತಿಯನ್ನು ಬೆಳೆಸಿ ಕೊಂಡಿರುವ ಈ ಲೇಖಕರು ತಮ್ಮ ಕಥಾಹಂದರದಲ್ಲಿ ಪಾತ್ರಗಳನ್ನು ಮತ್ತು ಅಪ್ಪಟ ಮಾನವ ಸಂಬಂಧಗಳನ್ನು ಚಿತ್ರಿಸುವುದರಲ್ಲಿ ಸಿದ್ಧಹಸ್ತರು. ಇದುವರೆಗೆ ಇವರ 5 ಕಾದಂಬರಿಗಳು, 2 ಕಿರುಕಾದಂಬರಿಗಳು ಮತ್ತು 3 ಕಥಾಸಂಕಲನಗಳು ಪ್ರಕಟವಾಗಿವೆ. ಇವರ 'ತರಂಗಮ್' ಕೇಂದ್ರ ಸಾಹಿತ್ಯ ಅಕಾದೆಮಿಯ ಪ್ರಶಸ್ತಿ ಪಡೆದ ಕಥಾಸಂಕಲನ. ಪ್ರಸ್ತುತ ಗ್ರಂಥ 'ಹವಠಣ'ಕ್ಕಾಗಿ ಅವರು 1 ಲಕ್ಷ ರೂ ಮೊತ್ತದ ವಿಮಲಾ ವಿ. ಪೈ ಪ್ರಶಸ್ತಿಯನ್ನು ಪಡೆದಿದ್ದಾರೆ. ಇದು ಕರ್ನಾಟಕ-ಗೋವಾ ಗಡಿಪ್ರದೇಶದಲ್ಲಿ ವಾಸಿಸುತ್ತಿರುವ ಕುಂಬಾರರ ನಿಜಜೀವನದ ನೋವನ್ನು ಅತ್ಯಂತ ವಾಸ್ತವ ರೀತಿಯಲ್ಲಿ ಚಿತ್ರಿಸಿರುವ ಕಾದಂಬರಿ.



**ಶಾ.ಮಂ. ಕೃಷ್ಣರಾಯ (1942)**

ಕನ್ನಡದ ಹಿರಿಯ ಲೇಖಕರು. ಕೊಂಕಣಿ ಮತ್ತು ಮರಾಠಿಯಿಂದ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಸಿದ್ಧರಾಗಿದ್ದಾರೆ. ಸಾಹಿತ್ಯ ಅಕಾದೆಮಿಗಾಗಿ ಇವರು ಅನುವಾದಿಸಿರುವ 'ಕೊಂಕಣಿ ಕಥಾ ಸಂಗ್ರಹ', 'ಕಾರ್ಮೇಲಿನ' ಮತ್ತು 'ತಾಮ್ರಪಟ' ಪ್ರಮುಖ ಕೃತಿಗಳು. ಅ.ನ.ಕೃ ಗೌರವ ಗ್ರಂಥ 'ರಸಚೇತನ', 'ತ.ರಾ.ಸು. ಬದುಕು-ಬರಹ' ಇವರ ಸಂಪಾದಿತ ಕೃತಿಗಳು. ಅ.ನ.ಕೃ 'ಸಾಹಿತ್ಯಶ್ರೇಣಿ ಕಥಾಸಂಪುಟ'ದ ಸಂಪಾದಕರಾಗಿದ್ದಾರೆ. 'ಪದಪಥಿಕ' ಇವರಿಗೆ ನೀಡಿದ ಅಭಿನಂದನಾ ಗ್ರಂಥವಾಗಿದೆ. ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯೊಂದಿಗೆ ಇವರಿಗೆ ಅನೇಕ ಪ್ರಶಸ್ತಿ, ಗೌರವಗಳು ಸಂದಿವೆ.



ಕೊಂಕಣಿ ಭಾಸ ಆನಿ ಸಂಸ್ಕೃತಿ ಪ್ರತಿಷ್ಠಾನ
ವಿಶ್ವಕೊಂಕಣಿ ಕೇಂದ್ರ, ಕೊಂಕಣಿ ಗಾಂವ್, ಶಕ್ತಿನಗರ
ಮಂಗಳೂರು - 575 106

